# ಸಚಿತ್ರ
# ಶ್ರೀಮಂತ ನಾನಾಸಾಹೇಬ ಪೇಶವೆ



ನರಜನ್ಮವನು ಕೊಂಡೀಸುವಾಂಜಲಿಯು ।

—ನಾರಾಯಣ

Sanctioned as a Text-book, Mysore Educational Dept:

ಕರ್ನಾಟಕ ಹಿತೈಷಿಣೀ ಗ್ರಂಥಮಾಲೆಯ ಹದಿಮೂರನೆಯ ಪುಷ್ಪ.

ಶ್ರೀಮಾನ್ ಬಿ. ಎಂ. ಶ್ರೀಕಂಠಯ್ಯನವರು, ಎಂ ಎ., ಬಿ.ಎಲ್.

ಅವರ ಮುನ್ನುಡಿಯೊಡನೆ

ಸಚಿತ್ರ

# ಶ್ರೀಮಂತ ನಾನಾಸಾಹೇಬ ಪೇಶವೆ

*Freedom's battle once begun*
*Bequeathed by bleeding sire to son*
*Though baffled oft, is ever won*

—BYRON.

ಇದನ್ನು

ಕರ್ನಾಟಕ ಹಿತೈಷಿಣೀ ಗ್ರಂಥಮಾಲೆಯ ಸಂಪಾದಕರಾದ

**ಶ್ರೀ. ನಾರಾಯಣ ವೆಂಕಟೇಶ ಕುರಡಿ**

ಇವರು ರಚಿಸಿದರು.

ಎರಡನೆಯ ಮುದ್ರಣ



೧೯೩೨ ] [ ಬೆಲೆ ೧ ರೂ.

# ಮುನ್ನುಡಿ

ಶ್ರೀ. ನಾರಾಯಣ ವೆಂಕಟೇಶ ಕುರಡಿಯವರು ಈಗಾಗಲೇ ಅನೇಕ ಗ್ರಂಥಗಳನ್ನು ರಚಿಸಿ ಅಖಿಲ ಕರ್ಣಾಟಕದಲ್ಲಿ ಸುಪ್ರಸಿದ್ಧರಾದ ಗ್ರಂಥಕರ್ತರಾಗಿರುತ್ತಾರೆ. ಅವರ, ನನ್ನ ಮೈತ್ರಿಯ ಗುರುತಾಗಿ ಈ ಹೊಸ ಗ್ರಂಥಕ್ಕೆ ನಾನು ಒಂದು ಮುನ್ನುಡಿಯನ್ನು ಸೇರಿಸಬೇಕೆಂದು ಅವರು ಅಪೇಕ್ಷೆಪಟ್ಟದ್ದರಿಂದ, ಸಂತೋಷದಿಂದಲೂ, ಕೃತಜ್ಞತೆಯಿಂದಲೂ ಈ ಎರಡು ಮಾತುಗಳನ್ನು ಬರೆಯುತ್ತಿದ್ದೇನೆ.

ಶ್ರೀ. ಕುರಡಿಯವರು "ಶ್ರೀಮಂತ ನಾನಾಸಾಹೇಬ ಪೇಶವೆ" ಎಂಬ ಈ ಗ್ರಂಥದಲ್ಲಿ ಭರತಖಂಡದ ಚರಿತ್ರೆಯ ಒಂದು ಮಹತ್ವವುಳ್ಳ ವಿಷಮ ಸಂಧಿಯನ್ನು ರಮ್ಯವಾಗಿ ವಿವರಿಸಿರುತ್ತಾರೆ. ಇಂಗ್ಲಿಷ್, ಬಂಗಾಳಿ, ಮರಾಠಿ ಭಾಷೆಗಳಲ್ಲಿರುವ ಇತಿಹಾಸ ಗ್ರಂಥಗಳಿಂದ ಸತ್ಯಾಂಶಗಳನ್ನು ಆಯ್ದುಕೊಂಡು, ಬರಿಯ ಒಣಚರಿತ್ರೆಮಾತ್ರವೆನ್ನಿಸದೆ, ಕಾದಂಬರಿಯ ರಸ ರಂಜನೆಗಳು ಸ್ಫುರಿಸುವಂತೆ ಕಥೆಯನ್ನು ನೆಯ್ದಿದ್ದಾರೆ. ಇವರ ಕಲಾ ಕೌಶಲ್ಯದಿಂದ ಚರಿತ್ರೆ ರಂಜಸಕಥೆಯಂತೆ ಮನಸ್ಸನ್ನು ಸೆಳೆಯುತ್ತದೆ.

ಶ್ರೀ. ಕುರಡಿಯವರ ಗ್ರಂಥಗಳಲ್ಲಿ ಮೂರು ಶ್ಲಾಘ್ಯವಾದ ಗುಣಗಳು ಎದ್ದುಕಾಣಿಸುತ್ತವೆ ಎಂದು ಹೇಳಬಹುದು. ಅವು ಯಾವುವೆಂದರೆ–ಸ್ವಧರ್ಮ ಶ್ರದ್ಧೆ; ಸ್ವದೇಶ ಭಕ್ತಿ; ಸ್ವಭಾಷಾಪ್ರೇಮ. ಭಾರತಭೂಮಿಯನ್ನು ಪವಿತ್ರ ಮಾಡಿದ ಮಹರ್ಷಿಗಳ ಸನಾತನ ಧರ್ಮದ ಸಾರವನ್ನು ಒಂದಲ್ಲ ಒಂದು ಸಂದರ್ಭದಲ್ಲಿ ಅವಕಾಶಮಾಡಿಕೊಂಡು, ತಮ್ಮ ಗ್ರಂಥಗಳಲ್ಲಿ ಇವರು ತುಂಬಿರುತ್ತಾರೆ. ಇವರ ನಾಯಕ ನಾಯಕಿಯರು ಉದಾತ್ತಚರಿತರು,–ಸಾವಿತ್ರಿ, ಸತ್ಯವಾನ; ದಾಕ್ಷಾಯಣಿ, ಪಾರ್ವತಿ; ಪದ್ಮಿನಿ, ಲಕ್ಷ್ಮೀಬಾಯಿ; ಶ್ರೀರಾಮಕೃಷ್ಣ ಪರಮಹಂಸರು;– ಭಾರತಭೂಮಿಯನ್ನು ಪ್ರಕಾಶಗೊಳಿಸಿರುವ ಪೂಜ್ಯರಾದ ದೇವತೆಗಳು, ವೀರ ಸ್ತ್ರೀಪುರುಷರು, ಧರ್ಮಬೋಧಕರು, ಇಂಥ ಮಹಾವ್ಯಕ್ತಿಗಳಿಂದಲೂ, ಅವರು ಸಾಧಿಸಿದ ಮಹಾಕಾರ್ಯಗಳಿಂದಲೂ, ಭರತಖಂಡದ ಇತಿಹಾಸ ಪುರಾಣ ಸನ್ನಿವೇಶಗಳಿಂದಲೂ, ಸ್ವದೇಶಪ್ರೇಮ

ವನ್ನು ಉಕ್ಕಿಸುವುದರಲ್ಲಿ ಶ್ರೀ. ಕುರಡಿಯವರು ಚತುರರು. ಈ ಗ್ರಂಥದಲ್ಲಿಯೂ. ಮಿಕ್ಕ ಸ್ಥಳಗಳಲ್ಲಿಯೂ, ಇವರು ತಮ್ಮ ದೇಶೀಯರ ದೋಷ–ದುರ್ಬಲತೆಗಳನ್ನು ಮುಚ್ಚದೆ, ಅನ್ಯದೇಶೀಯರ ಕುಂದುಕೊರತೆಗಳನ್ನು ಮಾತ್ರ ಎತ್ತಿಹಿಡಿಯದೆ, ಒಂದು ಕಡೆ ಎಲ್ಲಾ ಧರ್ಮ, ಮತ್ತೊಂದು ಕಡೆ ಎಲ್ಲಾ ಅಧರ್ಮ ಎಂಬ ಪಕ್ಷಪಾತವನ್ನು ಹೃದಯದಲ್ಲಿ ಬೇರೂರಲೀಸದೆ, ಸರ್ವಸಮತಾದೃಷ್ಟಿಯಿಂದ ವಿಮರ್ಶೆಮಾಡಿ,ನಮ್ಮ ಸ್ವಾತಂತ್ರ್ಯಸಂಗ್ರಾಮದಲ್ಲಿ ಸೋಲಾದ್ದಕ್ಕೆ ಕಾರಣಗಳನ್ನು ಸೂಚಿಸಿ, ಮುಂದೆ ಗೆಲವಾಗುವ ನಂಬಿಕೆಗೆ ಆಧಾರವಾದ ಗುಣ ಶಕ್ತಿಗಳನ್ನು ಸ್ಪಷ್ಟಪಡಿಸಿ, ಸರ್ವರ ಮೈತ್ರಿಯಲ್ಲಿ ದೇಶದ ಕಲ್ಯಾಣವನ್ನು ಬಯಸುತ್ತಾರೆ. ಈ ಮನೋಭಾವದಲ್ಲಿ ಇವರ ಸಾತ್ವಿಕ ಸ್ವಭಾವ ಚೆನ್ನಾಗಿ ಕಾಣಬರುತ್ತದೆ.

ಇನ್ನು ಇವರ ಕನ್ನಡದ ಅಕ್ಕರೆ. ಹಿಂದಿನ ಸಾಹಿತ್ಯದಲ್ಲಿ ಹೇಗೆ ಕವಿಗಳು ಭಾಷಾಶುದ್ಧಿಗೆ ಮನಸ್ಸುಕೊಟ್ಟು ಕನ್ನಡನಾಡಿನಲ್ಲೆಲ್ಲಾ ಒಂದೇ ಭಾಷೆ, ಒಂದೇ ಕಟ್ಟು ಸಲ್ಲುವಂತೆ ಮಾಡಿದ್ದರೋ, ಹಾಗೆಯೇ ಈಗಿನ ಹೊಸ ಸಾಹಿತ್ಯದಲ್ಲೂ ಕನ್ನಡ ನಾಡಿನಲ್ಲೆಲ್ಲಾ ಒಂದೇ ಭಾಷೆ, ಒಂದೇ ಕಟ್ಟು ನಡೆಯಬೇಕೆಂದು ನಿಶ್ಚಯಿಸಿರುವವರಲ್ಲಿ ಶ್ರೀ. ಕುರಡಿಯವರೂ ಒಬ್ಬರು. ಮೊದಲಿನಿಂದಲೂ ಇವರು ಈ ಸೂತ್ರವನ್ನು ಮೀರದೆ, ಅದನ್ನು ಸಾಧಿಸುವುದಕ್ಕಾಗಿ ಒಂದೇ ಸಮವಾಗಿ ಪ್ರಯತ್ನವನ್ನು ಮಾಡುತ್ತಿದ್ದಾರೆ. ಇವರ ಭಾಷಾಶೈಲಿ ಎಷ್ಟು ಸರಳ, ಎಷ್ಟು ಹಿತ, ಎಲ್ಲಾ ಪ್ರಾಂತಗಳ ಕನ್ನಡಿಗರಿಗೂ ಎಷ್ಟು ಸ್ಪಷ್ಟ ಎಂಬುದು ಇವರ ಗ್ರಂಥಗಳನ್ನು ನೋಡಿದವರೆಲ್ಲರೂ ಬಲ್ಲ ಸಂಗತಿ; ಎಲ್ಲಾ ಪ್ರಾಂತಗಳಲ್ಲಿಯೂ ಅವನ್ನು ಪಾಠದ ಪುಸ್ತಕಗಳಾಗಿ ನಿಯಮಿಸುತ್ತಿರುವುದೇ ಇದಕ್ಕೆ ಸಾಕ್ಷಿ.

ಭಾಷಾವಿಷಯದಲ್ಲಿಯೂ, ವಸ್ತುವಿಷಯದಲ್ಲಿಯೂ ಈ ಬಗೆಯ ಉತ್ತಮ ಧ್ಯೇಯಗಳನ್ನುಳ್ಳ ಶ್ರೀ. ಕುರಡಿಯವರಂಥ ಶ್ರೇಷ್ಠಸಾಹಿತಿಗಳ ನಿರಂತರ ಸೇವೆಯಿಂದ "ಸಿರಿಗನ್ನಡಂ ಗೆಲ್ಗೆ" ಎಂದು ಪ್ರಾರ್ಥಿಸಿ ಈ ಮುನ್ನುಡಿಯನ್ನು ನಿಲ್ಲಿಸುತ್ತೇನೆ.

ಬೆಂಗಳೂರು,
೨೮–೯–೧೯೩೩

ಬಿ. ಎಂ. ಶ್ರೀಕಂಠಯ್ಯ.

# ನಿವೇದನೆ

ಕನ್ನಡದ ಏಕೀಕರಣವೇ ನಮ್ಮ ಗುರಿ. ಅದಕ್ಕಾಗಿ ಈಗ ೧೦–೧೫ ವರ್ಷಗಳಿಂದಲೂ ಪ್ರಯತ್ನಿಸುತ್ತಿದ್ದೇನೆ. ಆ ಗುರಿಯನ್ನಿಟ್ಟು ಕೊಂಡೇ ಈ ಗ್ರಂಥವನ್ನು ಕೂಡ ಬರೆದಿರುವೆನು. ಮೈಸೂರು ಮದ್ರಾಸ ಪ್ರಾಂತಗಳ ಕನ್ನಡಿಗರಿಗೆ ಅರ್ಥವಾಗದ ಮತ್ತು ಶ್ರವಣಕಟುವಾದ ಪದ ಪ್ರಯೋಗಾದಿಗಳನ್ನೂ ಸಾಧ್ಯವಾದಷ್ಟು ಬಿಟ್ಟುಬಿಡಲು ಯತ್ನಿಸಿರುವೆನು. ಮೈಸೂರಿನ ಆಧುನಿಕ ಕಾವ್ಯ-ಸಹೃದಯ-ಧುರೀಣರಲ್ಲಿ ಗಣ್ಯರಾಗಿ ಭಾಷಾ ದ್ವಯ (ಇಂಗ್ಲಿಷು, ಕನ್ನಡ) ವಿಶಾರದರೆನಿಸಿಕೊಂಡ ಶ್ರೀಮಾನ್ ಬಿ. ಎಂ. ಶ್ರೀಕಂಠಯ್ಯನವರೂ ಧಾರವಾಡದ ಕನ್ನಡ ಪಂಡಿತ ಶ್ರೀಮಾನ್ ಪೂಜಾರ ರವರೂ ಹಸ್ತಲಿಖಿತ ಪ್ರತಿಯನ್ನು ಸಾದ್ಯಂತವಾಗಿ ಓದಿನೋಡಿ ತಕ್ಕ ಸಲಹೆ ಗಳನ್ನು ಕೊಟ್ಟಿರುವರು; ಅಲ್ಲದೆ ಗ್ರಂಥವನ್ನು ಯಾವ ದೃಷ್ಟಿಯಿಂದ ಓದ ಬೇಕೆಂಬುದನ್ನು ಶ್ರೀಮಾನ್ ಶ್ರೀಕಂಠಯ್ಯನವರು ತಮ್ಮ ಅಮೂಲ್ಯವಾದ ಮುನ್ನುಡಿಯಲ್ಲಿ ಹೇಳಿರುವರು. ಅದರಲ್ಲಿ ಅವರು ಹೇಳಿರುವ ಗುಣಗಳು ಈ ಗ್ರಂಥದಲ್ಲಿವೆಯೆಂದು ನಾನು ಹೇಳಲಾರೆನಾದರೂ ಅಖಿಲ ಕರ್ಣಾಟಕ ದಲ್ಲಿಯೂ ತಮ್ಮ ಕೃತಿಗಳು ಮಾನ್ಯವಾಗಬೇಕೆಂದು ಬಯಸುವ ಲೇಖಕರು ಈ ವಿಧದ ಭಕ್ತಿ-ಶ್ರದ್ಧೆ-ಪ್ರೇಮಗಳನ್ನು ತಳೆದು ಗ್ರಂಥರಚನೆ ಮಾಡಬೇಕೆಂದು ದಾರಿ ತೋರಿಸಿದಂತಾಗಿದೆ. ಇದಕ್ಕೆ ಮೊದಲು ನಾನು ಬರೆದು ಪ್ರಕಟಿಸಿದ ಅನೇಕ ಕೃತಿಗಳಂತೆಯೇ ಇದೂ ಬಹುಜನಮಾನ್ಯವಾಗಲಿ, ಕರ್ನಾಟಕ ವಾಣೀದೇವಿಯು ನನಗೆ ಶಕ್ತಿಯನ್ನಿತ್ತು ಇದಕ್ಕೂ ಮಿಗಿಲಾದ ಸೇವೆಯನ್ನು ಸ್ವೀಕರಿಸಲಿ ಎಂದು ಕೋರಿ ಪ್ರಾರ್ಥಿಸುವೆನು.

ನಾನೊಬ್ಬ ಸಾಮಾನ್ಯವ್ಯಕ್ತಿ; ನನ್ನ ಗ್ರಂಥವೂ ಅಂಥದೇ. ಏನೂ ಅರಿಯದವನಾಗಿ ಎಲ್ಲವನ್ನೂ ಬಲ್ಲವನಂತೆ ನಟಿಸಲು ಹೊರಟ ನನ್ನನ್ನೂ ನನ್ನ ಕೃತಿಯನ್ನೂ ಉದಾರಬುದ್ಧಿಯಿಂದ ನೋಡಿ, ಅಭಿಮಾನದಿಂದ ಎತ್ತಿ, ಆದರದಿಂದ ಬಣ್ಣಿಸಿ, ಕತ್ತಲೆಯ ಮನೆಯನ್ನು ಮಣಿದೀಪದಿಂದ ಬೆಳಗಿಸಿದಂತೆ ತಮ್ಮ ಅಮೂಲ್ಯ ಮುನ್ನುಡಿಯಿಂದ ಬೆಳಕುಬೀರಿ, ಕಥಾಮಂದಿರದ ಪ್ರವೇಶಕ್ಕೆ

ದಾರಿ ತೋರಿ, ಕನ್ನಡಿಗರ ಮುಂದಿರಿಸಿದ ಶ್ರೀಮಾನ್ ಶ್ರೀಕಂಠಯ್ಯನವರ ಸೌಜನ್ಯವನ್ನೂ ಭಾಷಾಪ್ರೇಮ ನಿರಭಿಮಾನಗಳನ್ನೂ ಏನೆಂದು ಅಭಿನಂದಿಸಲಿ, ಅವರ ಉಪಕಾರವನ್ನು ಹೇಗೆ ಸ್ಮರಿಸಿ ಕೃತಜ್ಞನಾಗಲಿ, ಎಂಬುದೇ ನನಗೆ ತಿಳಿಯದ ಮಾತಾಗಿದೆ. ಶ್ರೀಮಾನ್ ಪಂಡಿತ ಪೂಜಾರರವರಿಗೂ ನನ್ನ ಅನೇಕಾನೇಕ ವಂದನೆಗಳು.

ಶ್ರೀ ಸರಸ್ವತೀ ಮಂದಿರಮ್,
ಧಾರವಾಡ.
ಮಹಾಶಿವರಾತ್ರಿ, ೧೮೫೫.

ದೇಶಭಾಷಾಸೇವಕರ ಕಿಂಕರ,
— ನಾರಾಯಣ.

---

## ಎರಡನೆಯ ಮುದ್ರಣ

ಇದು ಮೊದಲನೆಯ ಮುದ್ರಣದ ಪ್ರತಿ ಮುದ್ರಣವಾಗಿರುವುದರಿಂದ ಹೆಚ್ಚಿಗಿನ್ನೇನು ಹೇಳುವುದು ?

ಓದುಗರಲ್ಲಿ ಸ್ವಜನಾಭಿಮಾನ ಸ್ವದೇಶಾಭಿಮಾನಗಳನ್ನು ಹುಟ್ಟಿಸಿ ಬೆಳೆಯಿಸಿ ಮೈಗೂಳಿಸುವ ಈ ಗ್ರಂಥದ ಹಿರಿಯ ಗುರಿಯನ್ನು ಗುರುತಿಸಿ ತಿಳಿದ ಮಹನೀಯರನೇಕರು, ಭವಿಷ್ಯದ ಕರ್ಣಾಟಕದ ನಾಗರಿಕರಾಗಲುಳ್ಳ ವಿದ್ಯಾರ್ಥಿಗಳು ಇದನ್ನು ಓದಲೇಬೇಕೆಂದು ಬಗೆದು ಭಾವಿಸಿ, ಮೈಸೂರ ಸರಕಾರದ ಹೈಸ್ಕೂಲುಗಳ ಆರನೆಯ ಫಾರ್ಮಿಗೆ (೧೯೩೬ನೆಯ ಇಸ್ವಿಯ S. S. L. C. ಪರೀಕ್ಷೆಗೆ ) ಪಾಠಪುಸ್ತಕವಾಗಿ ನಿಯಮಿಸಿದರು. ಆ ಸಂದರ್ಭದಲ್ಲಿ ಇದನ್ನು ಓದಿದ ವಿದ್ಯಾರ್ಥಿಗಳೂ ಪಾಠಹೇಳಿದ ಉಪಾಧ್ಯಾಯರೂ ಅಚ್ಚುಮೆಚ್ಚಾದ ಆಕರ್ಷಕವಾದ ವಿಷಯ ವಿವೇಚನೆ, ಮನೋಭಾವನೆಗಳನ್ನು ಚೋದಿಸಿ ಒಡಮೂಡಿಸುವ ಶೈಲಿ, ಪರಿಶುದ್ಧವಾದ ಸ್ಪಷ್ಟಾರ್ಥವ್ಯಂಜಕವಾದ ಭಾಷೆ, ಇವುಗಳಿಗಾಗಿ ಪ್ರೀತಿಸಿ ಬಣ್ಣಿಸಿ ಪತ್ರ ಬರೆದಿರುವರು. ಕರ್ಣಾಟಕದ ಬೇರೆ ಬೇರೆ ಭಾಗಗಳ ಪತ್ರಿಕಾಕರ್ತರು ಇದರಲ್ಲಿ ವರ್ಣಿತವಾದ ಐತಿಹಾಸಿಕ ಸತ್ಯತೆಯನ್ನು ಕುರಿತು ಪ್ರಸಂಸೆ ಮಾಡಿರುವರು. ಬರಿಯ ಹೆಸರನ್ನು ನೋಡಿದರೆ ಇದು ನಾನಾಸಾಹೇಬ ಪೇಶವೆಯ ಜೀವನಚರಿತೆಯೆಂದು ಭಾಸವಾಗುವಂತಿದ್ದರೂ

ಭರತಖಂಡದ ಸ್ವಾತಂತ್ರ್ಯ ಸಂಗ್ರಾಮಕ್ಕೆ ಸಂಬಂಧಿಸಿದ ಎಲ್ಲ ಐತಿಹಾಸಿಕ ಘಟನೆಗಳು ಇದರಲ್ಲಿ ಸಮಾವೇಶವಾಗಿರುವುದರಿಂದಲೂ, ನಮ್ಮವರ ಅಭಿಮಾನಕ್ಕೆ ಕಾರಣವಾದ ಹಲವು ಐತಿಹಾಸಿಕ ಸಂಗತಿಗಳು ಬಯಲಿಗೆ ಬಂದು, ನಾನಾಸಾಹೇಬನ ಸಂಬಂಧದಿಂದಲೂ ಆ ಕಾಲದ ಮಿಕ್ಕ ಐತಿಹಾಸಿಕ ವ್ಯಕ್ತಿಗಳ ವಿಷಯದಲ್ಲಿಯೂ ನಮ್ಮವರಲ್ಲಿ ಉಂಟಾಗಬಹುದಾದ ತಪ್ಪುತಿಳಿವಳಿಕೆಗಳು ಬಯಲಾಗುವುದರಿಂದಲೂ, ಇತಿಹಾಸಪ್ರಿಯರೂ ದೇಶಾಭಿಮಾನಿಗಳೂ ಇದನ್ನು ಅವಶ್ಯವಾಗಿ ಓದಲೇಬೇಕೆಂದು ಹಲವರು ವಿದ್ವಾಂಸರು ಅಭಿಪ್ರಾಯಪಟ್ಟಿರುವರು. ಆ ಎಲ್ಲ ಮಹನೀಯರಿಗೆ ನಾನು ಅತ್ಯಂತ ಕೃತಜ್ಞನಾಗಿರುವೆನು. ಆ ಮಹನೀಯರ ಅನುಗ್ರಹದ ಫಲವಾಗಿಯೇ ಈ ಎರಡನೆಯ ಮುದ್ರಣದ ಸುಯೋಗವು ಒದಗಿ ಬಂದಿತು.

ಈ ವರ್ಷ ಮತ್ತೆ ಈ ಪುಸ್ತಕವನ್ನು ಮೈಸೂರ ವಿಶ್ವವಿದ್ಯಾನಿಲಯದವರು ಇಂಟರ್ ಮೀಡಿಯೆಟ್ ಪರೀಕ್ಷೆಗಾಗಿ ಓದುವ ವಿದ್ಯಾರ್ಥಿಗಳ ಪಾಠಕ್ಕಾಗಿ ನಿಯಮಿಸಿರುವರೆಂದು ಗೊತ್ತಾಗಿದೆ. ಮುಂಬಯಿ ಮದ್ರಾಸ ಪ್ರಾಂತಗಳ ವಿಶ್ವವಿದ್ಯಾನಿಲಯಗಳ ಚಾಲಕರು ಕೂಡ ನಮ್ಮ ಈ ಅಲ್ಪ ಸೇವೆಯನ್ನು ಆದರದಿಂದ ನೋಡಿ ತಕ್ಕ ಪ್ರೋತ್ಸಾಹನೆ ಕೊಡುವರೆಂದು ನಂಬಿರುವೆವು. ಭಗವಂತನು ಅನುಗ್ರಹಿಸಲಿ. ಕೊನೆಗೆ ಅಖಿಲ ಕರ್ಣಾಟಕಾತ್ಮನಾದ ಶ್ರೀ ಹರಿಯನ್ನು—

“ ಹರಿಯೆ ನಿನ್ನೊಳು ಭಕ್ತಿ ಮುಕ್ತಿಗೆ ।
ಸರಳ ಮಾರ್ಗವದೆಂಬುದರಿಯದೆ ।
ತಿರುತಿರುಗಿ ಮಾಯಾಪ್ರಪಂಚದಿ ಸುತ್ತಿ ಬೇಸತ್ತೆ ।
ಪರಮ ಭಕ್ತಿಯೊಳೀಗ ನಿನ್ನಯ ।
ಚರಣತಲದಲಿ ಬಿದ್ದು ಬೇಡುವೆ ।
ಪರಿಹರಿಸೊ ನರಜನ್ಮವನು ಕೊಂಡೀ ಸುಮಾಂಜಲಿಯ ”

ಹೀಗೆಂದು ಪ್ರಾರ್ಥಿಸಿ ಆತನ ದಿವ್ಯಪದತಲದಲ್ಲಿ ಈ ಕೃತಿ ಕುಸುಮಾಂಜಲಿಯನ್ನರ್ಪಿಸಿ ಈ ಚಿಕ್ಕ ನಿವೇದನೆಯನ್ನು ಮುಗಿಸುವೆನು.

ಶ್ರೀ ಸರಸ್ವತೀ ಮಂದಿರಮ್
ಧಾರವಾಡ
ಆಷಾಢ ಏಕಾದಶಿ, ೧೮೪೫

ದೇಶಭಾಷಾಸೇವಕರ ಕಿಂಕರ
—ನಾರಾಯಣ.

# ಅನುಕ್ರಮಣಿಕೆ



ಆಧುನಿಕ ಕಾವ್ಯ-ಸಹೃದಯರಲ್ಲಿ ಗಣ್ಯರೂ ಭಾಷಾದ್ವಯ ವಿಶಾರದರೂ ಆದ
**ಶ್ರೀಮಾನ್ ಬಿ. ಎಂ. ಶ್ರೀಕಂಠಯ್ಯನವರು,** M.A., B.L.

K.P.W.D.



ಶ್ರೀಮಂತ ನಾನಾಸಾಹೇಬ ಪೇಶವೆ

K.P.W.D.

# ಅವತರಣಿಕೆ

**ಕರ್ಮಣ್ಯೇವಾಧಿಕಾರಸ್ತೇ ಮಾ ಫಲೇಷು ಕದಾಚನ |**
**ಮಾ ಕರ್ಮಫಲಹೇತುರ್ಭೂಃ ಮಾ ತೇ ಸಂಗೋಽಸ್ತ್ವಕರ್ಮಣಿ ||**
**ತಸ್ಮಾದಸಕ್ತಃ ಸತತಂ ಕಾರ್ಯಂ ಕರ್ಮ ಸಮಾಚರ |**
**ಅಸಕ್ತೋಹ್ಯಾಚರನ್ ಕರ್ಮ ಪರಮಾಪ್ನೋತಿ ಪೂರುಷಃ ||**



ನಿಬಿಡವಾದ **ಘೋರಾರಣ್ಯ.** ಗಿಡುಮರಗಳು ಆಕಾಶವನ್ನು ಮುಟ್ಟಲು ಯತ್ನಿಸುವಂತೆ ಬೆಳೆದು ನಿಂತಿವೆ, ಸುವಿಶಾಲವಾದ ರೆಂಬೆಗಳಿಂದಲೂ ದಟ್ಟವಾಗಿ ಬೆಳೆದಿರುವ ಎಲೆಗಳಿಂದಲೂ ಅವು ಮೇಲ್ಭಾಗದಲ್ಲಿ ಆಕಾಶವನ್ನು ಮರೆಮಾಡಿರುವಂತೆ ಎಡೆಬಿಡದೆ ಬೆಳೆದಿರುವ ಹುಲ್ಲು, ಚಿಕ್ಕ ಕಂಟಿಗಳು ಇವು ಕೆಳಗೆ ಭೂಮಿಯನ್ನು ಮುಚ್ಚಿರುವುವು. ಇಂತಿರುವ ಕಾಡಿನಲ್ಲಿ ಸೂರ್ಯಪ್ರಕಾಶಕ್ಕೆ ಒಳಸೇರಲು ಬಿಡುವಿಲ್ಲದಿರುವುದರಿಂದ ಹಗಲೇ ಇರುಳೆನ್ನುವಷ್ಟು ಕತ್ತಲೆಯಿರುವುದು.

ಇಂತಹ ಅಂಧಕಾರಮಯವಾಗಿ ಭಯಂಕರವಾಗಿರುವ ಘೋರಾರಣ್ಯದ ಮಧ್ಯದಲ್ಲಿ ಹಾಯ್ದಿರುವ ಒಂದು ಕಾಲುದಾರಿಯಿಂದ ಮಧ್ಯರಾತ್ರಿಯ ಸಮಯದಲ್ಲಿ ಒಬ್ಬ ದಾರಿಕಾರನು ಹೊರಟಿದ್ದನು. ಆತನು ನಡೆದು ಹೋಗುತ್ತಿದ್ದನೆನ್ನುವುದಕ್ಕಿಂತ, ಕುರುಡನು ತನಗೆ ಚಿರಪರಿಚಿತವಾದ ದಾರಿಯಲ್ಲಿ ಊರುಗೋಲಿನ ನೆರವಿನಿಂದ ತೂಕ ನೋಡಿ ಮೆಲ್ಲಡಿಯಿಡುತ್ತಿರುವಂತೆ, ಎಡಬಲದ ಕಂಟಿಗಳನ್ನು ಓರೆಮಾಡಿ ಎಣಿಸಿ ಎಣಿಸಿ ಹಜ್ಜೆಯಿಡುತ್ತ ಮುಂದೆ ಸಾಗಿದ್ದನೆನ್ನುವುದೇ ಸರಿಯೆನಿಸುವುದು. ಕೊನೆಗೆ ಆತನು ತನ್ನ ದಾರಿಯನ್ನು ಅಡ್ಡಗಟ್ಟಿದ ಒಂದು ಮಂದಿರದ ಗೋಡೆಯನ್ನು ಕೈಗಳಿಂದ ಗುರುತಿಸಿ ನೋಡುತ್ತ ಮುಂಭಾಗಕ್ಕೆ ಬಂದನು. ಆ ಶಿವಾಲಯದ ನಂದಾದೀಪವನ್ನು ನೋಡಿ ಆತನಿಗೆ ಮುಚ್ಚಿದ ಕಣ್ಣು ತೆರೆದಂತಾಯಿತು; ಅಂಧಕಾರಮಯವಾದ ಆಕಾಶದಲ್ಲಿ ಒಂದು ನಕ್ಷತ್ರವು ಉದಯವಾದಂತಾಯಿತು; ನಿರಾಶೆಯ ಮಣ್ಣಿನ ರಾಶಿಯಲ್ಲಿ ಆಶಾಲತೆಯ ಒಂದು ಅಂಕುರವು ಮೊಳೆತಂತಾಯಿತು.

ದಾರಿಕಾರನು ಶಿವಾಲಯಕ್ಕೆ ಬಂದು ದೇವಾಧಿದೇವ ಮಹಾದೇವನಿಗೆ ಸಾಷ್ಟಾಂಗ ನಮಸ್ಕಾರ ಮಾಡಿ ಹೊಸ್ತಿಲ ಮೇಲಿರುವ ಪ್ರಸಾದವನ್ನು ಸ್ವೀಕರಿಸಿ ಮಂದಿರದ ಮುಂಭಾಗದಲ್ಲಿ ಹಾಯ್ದಿರುವ ರಾಜಮಾರ್ಗವನ್ನು ದಾಟಿ ನದಿಯ ಘಟ್ಟವನ್ನಿಳಿದು ಹೋಗಿ ಮನದಣಿಯೆ ನೀರು ಕುಡಿದು ಉಸ್ಸೆಂದು ಉಸಿರ್ಗರೆದು ಕುಳಿತುಕೊಂಡನು.

ನಿಶ್ಶಬ್ದ. ನಿರ್ಜನವಾಗಿದ್ದ ಆ ಪ್ರದೇಶದಲ್ಲಿ ಪಶುಪಕ್ಷಿಗಳು ಕೂಡ ನೀರವವಾಗಿದ್ದುವು. ಕಲನಿನಾದಿನಿಯಾದ ಭಗವತಿ ಭಾಗೀರಥಿಯು ಕೂಡ ನಿದಾಘದ ಭೀಷಣತೆಗೆ ಬೆದರಿ ಮೌನಧಾರಣೆಮಾಡಿದಂತಿದ್ದಳು. ಶ್ಮಶಾನ ಭೀಷಣವಾಗಿ ಪ್ರಶಾಂತವಾದ ಆ ನಿಶೆಯ ನಿಶ್ಶಬ್ದತೆಯೊಡನೆ ಗಾಢವಾದ ಅಂಧಕಾರವು ಕೂಡಿ ಆ ಸ್ಥಳವು ಇನ್ನಷ್ಟು ಭಯಂಕರವಾಗಿದ್ದಿತು. ಆ ದಾರಿಕಾರನು, ಅಂತರಂಗದ ಅಂಧಕಾರವು ಬಾಹ್ಯಪ್ರಪಂಚದ ಅಂಧಕಾರ ದೊಡನೆ ಬೆರೆತುದರಿಂದ ತನ್ನನ್ನು ತಾನೇ ಮರೆತವನಾಗಿದ್ದನು. ಉದ್ವೇಗ ದಿಂದ ಹೊಡೆದುಕೊಳ್ಳುತ್ತಿರುವ ಹೃದಯದ ಬಡಿತಗಳು ಕೂಡ ಆತನ ಕಿವಿಗೆ ಬಹು ಭಯಂಕರವಾಗಿ ಕೇಳಿಸುತ್ತಿದ್ದುವು; ತನ್ನ ಉಸಿರಿನ ಗಾಳಿಯೇ ಭೀಷಣ ಮಾರುತದಂತೆ ಭಾಸವಾಗುತ್ತಿದ್ದಿತು. ಇಂತಹ ಭೀಷಣಸ್ಥಿತಿ ಯಲ್ಲಿ ತುಸ ಹೊತ್ತು ಕುಳಿತು ದಣಿವಾರಿಸಿಕೊಂಡ ತರುವಾಯ ಆತನು ಪ್ರಶಾಂತವಾದ ಆ ನಿಶೆಯ ನಿಶ್ಶಬ್ದತೆಯನ್ನು ಭೇದಿಸಿ ಈ ರೀತಿ ಹಾಡಿದನು. ಕಿರುದನಿಯಲ್ಲಿ ಆರಂಭಿಸದ ಕೋಮಲ ಗಾನವು ಹೃದಯದ ಆವೇಗದಲ್ಲಿ ಬಹು ಗಂಭೀರವಾಗಿ ಪರಿಣಮಿಸಿತು.

**ನಿಖಿಲ ಜನನಿ ಸಾದರಂ ತ್ವಾಂ ನಮಾಮಿ ಮಾತರಂ || ಪಲ್ಲ ||**
**ಮಂದಹಸಿತ ನಿಂದಿತಸಿತ ಸರಸಿಜಮುಖಿ ದೇವ್ಯಹಂ || ಅ. ಪ. ||**
**ದರವಿದಲಿತ ಸುಮುಕುಲಾಂ | ಸಾರಮಧುರ ಸತ್ಫಲಾಂ |**
**ಸುರಭಿ ಶೀತ ಶುಭಜಲಾಂ | ಸುರಭಿ·ಶೀತ ಶುಭಜಲಾಂ || ತ್ವಾಂ—**
**ತ್ವಮಸಿ ದೇವಿ ಶುಭಕರೀ | ತ್ವಮಾನಂದ ಶಂಕರೀ |**
**ತ್ವಮಸಿ ಧೈರ್ಯಬಲಕರೀ | ತ್ವಮಸಿ ಧೈರ್ಯಬಲಕರೀ || ತ್ವಾಂ—**
**ಭಾರತೀಯ ಪೂಜಿತಾಂ | ಕುರು ಲೋಕ ಬಾಂಧವಾನ್ |**
**ಪುರುಷಕಾರ ಸುಫಲಿತಾನ್ | ಪುರುಷಕಾರ ಸುಫಲಿತಾನ್ || ತ್ವಾಂ—**

ಕೋಮಲವಾಗಿದ್ದರೂ ನಿಶೆಯ ನಿಶ್ಶಬ್ದತೆಯಲ್ಲಿ ಭೀಕರವೆನಿಸುತ್ತಿದ್ದ ಆ ಹಾಡಿನ ದನಿಯು ಸುತ್ತಲಿನ ವನವನಾಂತರಗಳಲ್ಲಿ ಮಾರ್ದನಿಗೊಂಡಿತು; ಅನಂತವಾದ ಆಕಾಶದಲ್ಲಿ ವಿಲೀನವಾಗಿ ಹೋಗತೊಡಗಿತು. ಮತ್ತೆ ಮತ್ತೆ ಹಾಡಿದನು. ಆತನ ಅಂತಃಕರಣವು ತುಂಬಿ ಬಂದಿತು ; ಧ್ವನಿಯು ಕುಗ್ಗಿತು; ಕಣ್ಣುಗಳಲ್ಲಿ ನೀರು ತುಂಬಿತು ; ಮೈ ನಡುಗಿತು. ಕೊನೆಗೆ ತಾನು ಕುಳಿತ ಮೆಟ್ಟಲಿನ ಮೇಲೆಯೇ ಅಡ್ಡಮಲಗಿದನು. ಆತನ ಆ ಅವಸ್ಥೆಯನ್ನು ನೋಡುವವರು ಅಲ್ಲಿ ಇನ್ನಾರೂ ಇರಲಿಲ್ಲ. ಆ ಭಗವತಿ ಭೂಮಾತೆ; ಕೆಳಗೆ ಮಂದಗತಿಯಿಂದ ನಡೆದಿರುವ ಗಂಗಾಮಾತೆ ; ಮೇಲೆ ಮಿಣಮಿಣನೆ ಮಿನುಗುತ್ತಿರುವ ನಕ್ಷತ್ರ ಮಾಲೆ ; ಇವಿಷ್ಟೇ.

ಇಂತಹ ವಿಪನ್ನಾವಸ್ಥೆಯಲ್ಲಿ ಆತನು ಎಷ್ಟೋ ಹೊತ್ತು ಮಲಗಿದ್ದನು. ಬೆಳಗಿನ ಜಾವದ ತಂಗಾಳಿಗೆ ಪ್ರಾರಂಭವಾಯಿತು. ಗಿಡುಮರಗಳು ತೊನೆಯ ತೊಡಗಿದುವು. ಪಕ್ಷಿಗಳ ಕಿಲಕಿಲ ನಿನಾದಕ್ಕಾರಂಭವಾಯ್ತು. ಪಥಿಕನು ಎಚ್ಚತ್ತನು. ಮತ್ತೆ "ನಿಖಿಲ ಜನನಿ ಸಾದರಂ ತ್ವಾಂ ನಮಾಮಿ ಮಾತರಂ......" ಎಂದು ಹಾಡಿದನು.

"ಹಾ ದೇವೀ ! ಭೂಮಾತೇ ! ಧರ್ಮಪುರುಷನೇ ! ನಿಮಗೆ ಉದ್ಧಾರವಿಲ್ಲವೇ ? ನಿಮ್ಮ ಮಕ್ಕಳೆಲ್ಲರೂ ಹತವೀರ್ಯರಾದರೇ ? ವೀರಮಾತೆಯೆನಿಸಿಕೊಂಡ ನೀನಿಂದು ಬಂಜೆಯಾದೆಯೇನಮ್ಮಾ ! ಪವಿತ್ರವಾದ ಕ್ಷಾತ್ರತೇಜಸ್ಸಿನಿಂದ ಬೆಳಗುತ್ತಿದ್ದ ಕರ್ಣಾರ್ಜುನರಂತಹ ಧನುರ್ಧಾರಿಗಳೂ ಭೀಷ್ಮನಂತಹ ಪ್ರತಿಜ್ಞಾಪಾಲನ ಶೀಲರೂ ಧರ್ಮರಾಜನಂತಹ ಧರ್ಮರಕ್ಷಕರೂ ಈ ಪುಣ್ಯಭೂಮಿಯಲ್ಲಿ ಇನ್ನು ಅವತರಿಸುವುದಿಲ್ಲವೇನಮ್ಮಾ ? ಹಾ!.."

ಪಥಿಕನ ಮಾತು ಅರ್ಧಕ್ಕೇ ನಿಂತಿತು. "ಇಲ್ಲ, ಇಲ್ಲ; ಆಗ ದ್ವಾಪರಯುಗ; ಈಗ ಕಲಿಯುಗ; ಅಂದಿಗೆ ಅದೇ ಸುಖ! ಇಂದಿಗೆ ಇದೇ ಸುಖ !" ಎಂದು ದೂರದಲ್ಲಿ ಯಾರೋ ಉತ್ತರ ಹೇಳಿದರು.

"ಹಾ ! ದೇವೀ, ನಿನಗೆ ಬಿಡುಗಡೆಯಿಲ್ಲವೇ ? ನನ್ನ ಸಂಕಲ್ಪವು ಸಿದ್ಧಿಸಲಾರದೇನಮ್ಮಾ ? ಹಾಗಿದ್ದರೆ ನಾನಿನ್ನು ಬದುಕಿ ಫಲವೇನು ? ಯವನರ ಕೈಯಲ್ಲಿ ಸೆರೆಸಿಕ್ಕಿದ ಮಾತೆಯನ್ನು ಬಿಡಿಸಿಕೊಳ್ಳುವ ಆಶೆಯಿಲ್ಲದ ಮೇಲೆ, ಧರ್ಮಪುರುಷನನ್ನು ಸಂರಕ್ಷಿಸಿಕೊಳ್ಳಲಾರದ ಮೇಲೆ, ಪರದಾಸ್ಯಪಂಕದಲ್ಲಿ

ತೊಳಲಾಡುತ್ತ ಗಂಜಿಯಲ್ಲಿ ಬಿದ್ದ ನೊಣದಂತೆ ಇನ್ನೆಷ್ಟು ಕಾಲ ತಾನೆ ಒದ್ದಾಡುತ್ತಿರಬೇಕು? ಧಿಕ್ಕಾರವಿರಲಿ ಈ ಜನ್ಮಕ್ಕೆ! ಇದೋ ಭೂಮಾತೇ! ಗಂಗಾಮಾತೇ! ಅಸ್ಥಿರವಾದ, ಅಪ್ರಯೋಜಕವಾದೀ ದೇಹವನ್ನು ನಿಮಗೆ ಅರ್ಪಿಸಿ ಬಿಡುವೆನು" ಎನ್ನುತ್ತ ತನ್ನ ಕೈಗೋಲಿನ ಬುಡವನ್ನು ಬಲಗೈಯಲ್ಲಿಯೂ ತುದಿಯನ್ನು ಎಡಗೈಯಲ್ಲಿಯೂ ಹಿಡಿದು ಸರ್ರನೆ ಎಳೆದನು. ಪ್ರಭಾತ ಸಮಯದ ನಸುಗತ್ತಲೆಯಲ್ಲಿ ಕೋಲ್ಮಿಂಚು ಹೊಳೆದಂತೆ ತೀಕ್ಷ್ಣವಾದ ಧಾರೆಯಿಂದ ಝುಗಝುಗಿಸುತ್ತಿದ್ದ ಖಡ್ಗವು ಹೊರಗೆ ಬಂದಿತು. ಖಡ್ಗವು ಆತನ ತಲೆಯ ಹಿಂದೆ ಹೋಯಿತೋ ಇಲ್ಲವೋ ಇಷ್ಟರಲ್ಲಿ ಯಾರೋ ತಟ್ಟನೆ ಬಂದು ಆತನ ಕೈಯನ್ನು ಹಿಡಿದರು. ಆ ಹಿಡತದ ಬಿಗುವಿನಿಂದ ಕೈಯ ನರಗಳು ಶಿಥಿಲವಾಗಿ ಬೆರಳುಗಳು ತಾವಾಗಿ ಖಡ್ಗವನ್ನು ಬಿಟ್ಟುವು. ಆಗಂತುಕನು ಕತ್ತಿಯನ್ನು ಕಿತ್ತುಕೊಂಡು "ಅಯ್ಯೋ, ಎಂತಹ ಹೇಡಿತನ! ಎಂತಹ ನಾಚಿಕೆಗೇಡಿತನ! ಎಂತಹ ಅವಿವೇಕ! ನಾವು ಮಾಡುವುದನ್ನೆಲ್ಲ ಮಾಡಬೇಕು. ಇಂದಿಲ್ಲ ನಾಳೆ ಧರ್ಮಕ್ಕೆ ಜಯವಾಗಲೇ ಬೇಕು. ಅಸತ್ಯವು ಸತ್ಯವನ್ನು ಜಯಿಸಲಾರದು. ಇಂದು ನಮಗೆ ಅಪಜಯವಾಗಬಹುದು. ಆದರೆ ಅಪಜಯದಲ್ಲಿಯೇ ಜಯವಿದೆ. ಸೋಲಿನಲ್ಲಿಯೇ ಗೆಲುವಿದೆ. ಸಾವಿನ ಹೊಟ್ಟೆಯಲ್ಲಿಯೇ ಹುಟ್ಟಿನ ಗುಟ್ಟು ಅಡಗಿರುವಂತೆ, ಅಸ್ತವೇ ಉದಯಕ್ಕೆ ಕಾರಣವಾಗುವಂತೆ, ಜಯಾಪಜಯಗಳು ಒಂದನ್ನೊಂದು ಬಿಟ್ಟಿಲ್ಲ. ಸದ್ಯದಲ್ಲಿಯೇ ಮಹಾಸಂಗ್ರಾಮವು ಆರಂಭವಾಗುವುದು. ನಿನಗೆ ಜಯಾಪಜಯಗಳ ಚಿಂತೆ ಬೇಡ. ಅದು **ಆತನಿಗೆ** ಸೇರಿದುದು. ನಾವು ಕರ್ಮಕ್ಕೆ ಅಧಿಕಾರಿಗಳು, ಫಲಕ್ಕೆ ಅಲ್ಲ" ಎಂದನು.

"ತಂದೆಯೇ ನೀನಾರು? ಅಪಜಯದ ಭೀತಿಯಿಂದ ಅಧೀರನಾದೆನಗೆ ಧೈರ್ಯವನ್ನು ತೋರುವ ಧೀರನಾರು? ನಿರಾಶ್ರಯದಲ್ಲಿ ಆಶ್ರಯ ಕೊಡುವೆನೆನ್ನುವ ಆಶ್ರಯದಾತನಾರು?"

"ನಾನು ಧರ್ಮ, ನಾನು ಸತ್ಯ, ನಾನು ನಿಷ್ಕಾಮಿ; ಧರ್ಮವು ಶಾಶ್ವತವಾಗಲಿ. ಸತ್ಯವು ಪರಿಪಾಲಿತವಾಗಲಿ. ನಿಷ್ಕಾಮಿಗಳು ಸುಖಿಗಳಾಗಲಿ."

---

# ಉಪಕ್ರಮಣಿಕೆ

The real cause of the mutiny may be expressed in condensed form in two words "Bad faith"

—*Kayee.*



ಪುಣ್ಯಭೂಮಿ ಭರತಖಂಡದ ಸೌಭಾಗ್ಯಕ್ಕೆ ಕಾರಣವಾದ ಅನೇಕ ಪುಣ್ಯನದಿಗಳಲ್ಲಿ ಗಂಗಾನದಿ ಮುಖ್ಯವಾದುದು. ಶಿವನ ಆವಾಸವಾದ ಕೈಲಾಸಪರ್ವತದಲ್ಲಿ ಉಗಮಹೊಂದಿದ ಆ ಪುಣ್ಯವಾಹಿನಿಯು ದಾರಿಯಲ್ಲಿ ಅನೇಕಾನೇಕ ಗಿರಿ-ಕಂದರಗಳನ್ನು ದಾಟಿ ಅನೇಕಾನೇಕ ಚಿಕ್ಕ ದೊಡ್ಡ ಪ್ರವಾಹಗಳನ್ನೊಳಗೊಂಡು ಉತ್ತರ ಹಿಂದುಸ್ಥಾನದ ಬಯಲು ಪ್ರದೇಶಕ್ಕೆ ಬರುವಳು. ಆ ಗಂಗಾ ಮಾತೆಯ ಎರಡು ದಂಡೆಗಳೂ ಹಿಮಾಲಯದ ಅಂಚಿನಲ್ಲಿ ಘೋರವಾದ ಅರಣ್ಯದಿಂದ ಆವೃತವಾಗಿರುವವು. ಇಂತಹ ಗುಡ್ಡಗಾಡಿನಲ್ಲಿಯೂ ಘೋರಾರಣ್ಯದಲ್ಲಿಯೂ ಪ್ರವಾಸಮಾಡುತ್ತಿರುವ ಗಂಗಾ ಪ್ರವಾಹದ ಆಶ್ರಯದಲ್ಲಿ ಅನೇಕ ಪುಣ್ಯ ಸ್ಥಳಗಳು ನೆಲಸಿರುವವು. ಅವುಗಳಲ್ಲಿ ಬ್ರಹ್ಮಾವರ್ತವು ಒಂದು. ಬ್ರಹ್ಮಾವರ್ತದಿಂದ ಮುಂದೆ ಸುಮಾರು ಹತ್ತು ಮೈಲುಗಳ ಅಂತರದಲ್ಲಿ ಅರ್ವಾಚೀನ ಇತಿಹಾಸದಲ್ಲಿ ಹೆಸರುಗೊಂಡಿದ್ದ ಕಾನಪುರ ನಗರವಿರುವುದು. ಬ್ರಹ್ಮಾವರ್ತ ಕಾನಪುರಗಳೆರಡೂ ಗಂಗಾ ನದಿಯ ದಂಡೆಯಲ್ಲಿರುವಂತೆಯೇ ಪೇಶಾವರದಿಂದ ಕಲಕತ್ತೆಗೆ ಹೋಗಿರುವ ಸುಪ್ರಶಸ್ತವಾದ ರಾಜಮಾರ್ಗದ ಅಂಚಿನಲ್ಲಿಯೂ ಇರುವವು. ಈ ಊರುಗಳ ನಡುವೆ ಘೋರಾರಣ್ಯವು ಮುಸುಕಿರುವುದು.

ಈ ಅರಣ್ಯದ ನಡುವೆ ಒಂದು ಸುಂದರವಾದ ಶಿವಾಲಯವುಂಟು. ಹಿಂದೆ ಬಹು ರಮ್ಯವಾಗಿದ್ದ ಆ ಶಿವಾಲಯವು ಈಗ ಜೀರ್ಣವಾಗಿ ಹೋಗಿದೆ.

ಒಂದು ಗೋಡೆಯು ಬಿದ್ದು ಹೋಗಿ ಮೇಲೆ ಹುಲ್ಲು ಬೆಳೆದಿದೆ. ಶಿವಾಲಯದ ಗೋಡೆಯವರೆಗೂ ಸುತ್ತಲೂ ಅಡವಿ ಬೆಳೆದುದರಿಂದ ದೂರದಿಂದ ನೋಡುವವರಿಗೆ ಗಿಡಗಳ ಗುಂಪೇ ಕಾಣಿಸುವುದಲ್ಲದೆ ಶಿವಾಲಯವು ಕಾಣಿಸದು. ಶಿವಾಲಯದ ಮುಂಭಾಗದಲ್ಲಿ ತುಸ ದೂರದಲ್ಲಿ ಮೇಲೆ ಹೇಳಿದ ರಾಜಮಾರ್ಗವು ಹಾಯ್ದಿರುವುದು. ಅದಕ್ಕೆ ಹೊಂದಿ ಗಂಗಾ ನದಿ; ನದಿಗೆ ಇಳಿಯುವುದಕ್ಕೆ ಕಟ್ಟಿದ ಘಟ್ಟದ ಮೆಟ್ಟಲುಗಳು. ಕೆಳಗೆ ವಿಶಾಲವಾದ ಪಾತ್ರದಲ್ಲಿ ಅತಿಮಂದವಾಗಿ ಹರಿಯುತ್ತಿರುವ ಗಂಗಾ ಪ್ರವಾಹವು ಕಂಡೂ ಕಾಣದಷ್ಟು ಚಲಿಸುತ್ತಿರುವುದು. ಇಂತಹ ಪ್ರಶಾಂತವಾದ ಸ್ಥಳದಲ್ಲಿ ಆ ಶಿವಾಲಯಕ್ಕೆ ತುಸ ದೂರದಲ್ಲಿ ಚಿಕ್ಕದೊಂದು ಗುಡಿಸಲಿನಲ್ಲಿ ಆನಂದಮಿಶ್ರನೆಂಬ ಸಂನ್ಯಾಸಿಯು ವಾಸವಾಗಿರುವನು.

ರಾತ್ರಿ ಹತ್ತು ಗಂಟೆಯಾಗಿರಬಹುದು. ಆನಂದಮಿಶ್ರನು ಪಾದುಕೆಗಳನ್ನು ಮೆಟ್ಟಿಕೊಂಡು ತನ್ನ ಗುಡಿಸಲಿನಿಂದ ಹೊರಗೆ ಬಂದನು. ಬಲಗೈಯಲ್ಲಿ ಕಮಂಡಲು; ಎಡಗೈಯಲ್ಲಿ ಉರಿಯುತ್ತಿರುವ ಚಿಕ್ಕ ಪಂಜು. ಪಂಜಿನ ಬೆಳಕಿನಲ್ಲಿ ಆನಂದಮಿಶ್ರನು ಮುಂದೆ ಸಾಗಿ ಘಟ್ಟವನ್ನಿಳಿದು ಸ್ನಾನಮಾಡಿ, ಶಿವಾಲಯಕ್ಕೆ ಬಂದು ನಿತ್ಯಕ್ರಮದಂತೆ ಪೂಜೆಯನ್ನು ಸಾಂಗಗೊಳಿಸಿದನು. ಆ ಬಳಿಕ ಹೊರಗೆ ಬಂದು "ಕುಮಾರ, ಕುಮಾರ" ಎಂದು ಕೂಗಿದನು. ದೂರದಲ್ಲಿ "ಗುರುದೇವ" ಎಂದುದು ಕೇಳಿಸಿತು. ಕೂಡಲೆ ಅವಸರದಲ್ಲಿ ಎಡವುತ್ತ ಮಧ್ಯಮ ವಯಸ್ಸಿನ ಮನುಷ್ಯನೊಬ್ಬನು ಅಲ್ಲಿಗೆ ಬಂದು ಸಾಷ್ಟಾಂಗ ನಮಸ್ಕಾರ ಮಾಡಿ ನಿಂತನು. "ಕುಮಾರ, ದೇವಾಧಿದೇವ ಮಹಾದೇವನ ಪ್ರಸಾದವನ್ನು ಸ್ವೀಕರಿಸು. ಆತನ ಅನುಗ್ರಹದಿಂದ ನೀನು ಕೃತಕಾರ್ಯನಾಗುವೆ. ಧರ್ಮವನ್ನೂ ಸತ್ಯವನ್ನೂ ಕಾಪಾಡಿಕೊಳ್ಳು. ದೀನಾನಾಥರನ್ನು ಮರೆಯದಿರು. ಪ್ರಾಣಿಹಿಂಸೆಯು ಅಧರ್ಮವಾದರೂ ಕ್ಷತ್ರಿಯೋಚಿತವಾದ ಕಾರ್ಯವನ್ನು ಕೈಕೊಂಡಾಗ ರಣಭೂಮಿಯಲ್ಲಿಯೂ ಆತ್ಮರಕ್ಷಣೆಗಾಗಿಯೂ ಅದು ಕ್ಷಮ್ಯವೆನಿಸುವುದು. ನಿಶ್ಶಸ್ತ್ರರಾದವರ ಮೇಲೆ ಕೈಯೆತ್ತಬೇಡ. ಶರಣಾಗತರನ್ನು ರಕ್ಷಿಸುವುದೂ ವಚನವನ್ನು ಕಾದುಕೊಳ್ಳುವುದೂ, ಸದಾ ಪ್ರಜೆಗಳ ಹಿತವನ್ನೇ ಬಯಸುವುದೂ ರಾಜೋಚಿತವಾದ ಧರ್ಮಗಳು." ಎನ್ನುತ್ತ ಆನಂದಮಿಶ್ರನು ಶಿವನ ಪ್ರಸಾದವನ್ನು ನೀಡಿದನು.

ಆಗಂತುಕನು ಅದನ್ನು ಸ್ವೀಕರಿಸಿ "ಗುರುದೇವಾ, ತಮ್ಮ ಆಜ್ಞೆಯನ್ನು ಅಕ್ಷರಶಃ ಪಾಲಿಸುವೆನು." ಎನ್ನುತ್ತ ಆತನ ಪಾದಗಳಿಗೆ ಎರಗಿದನು.

ಆನಂದಮಿಶ್ರನು ಶಿವಾಲಯದ ಮುರಿದು ಉಳಿದ ಒಂದೇ ಕದವನ್ನು ಮುಂದೆಮಾಡಿ ಹೊರಗೆ ಬಂದನು. ಇಬ್ಬರೂ ನಾಲ್ಕು ಹಜ್ಜೆ ಮುಂದೆ ಸಾಗುವಷ್ಟರಲ್ಲಿ ಆನಂದಮಿಶ್ರನು ಕಿವಿಗೊಟ್ಟು ಆಲಿಸಿ "ಕುಮಾರ, ಅವರು ಬಂದರು. ನಾನು ಕುಟೀರಕ್ಕೆ ಹೋಗಿ ಉಪಕರಣಗಳನ್ನು ಇಟ್ಟು ಬಟ್ಟೆಯನ್ನು ಬದಲಿಸಿಕೊಂಡು ಬರುವೆನು," ಎನ್ನುತ್ತ ಮುಂದೆಸಾಗಿದನು.

ಅಸ್ಪಷ್ಟವಾಗಿ ಕೇಳಿಸುತ್ತಿದ್ದ ಖುರಗಳ ಸಪ್ಪಳವು ಸ್ಪಷ್ಟವಾಗುತ್ತ ಬಂದಿತು. ರಾಜಮಾರ್ಗದಲ್ಲಿ ಎರಡು ಕುದುರೆಗಳು ಒಂದೇ ವೇಗದಿಂದ ಒಂದರ ಮಗ್ಗುಲಲ್ಲಿ ಒಂದು ನಡೆದಿದ್ದುವು. ಶಿವಾಲಯದ ಕಾಲುದಾರಿಯ ಬಳಿಗೆ ಬಂದೊಡನೆ ಒಬ್ಬನು ಸಂಜ್ಞೆಮಾಡಿದನು. ಇಬ್ಬರೂ ಕುದುರೆಗಳಿಂದ ಇಳಿದು ಲಗಾಮು ತೆಗೆದು ಅವನ್ನು ಮೇಯಲಿಕ್ಕೆಬಿಟ್ಟರು. ಅಷ್ಟರಲ್ಲಿ ಆನಂದಮಿಶ್ರನೂ, ಕುಮಾರ ಸಾಹೇಬನೂ ಅಲ್ಲಿಗೆ ಬಂದರು. ಇನ್ನು ಮುಂದೆ ಅವರಾಡುವ ಮಾತುಗಳಿಗೆ ಸರಿಯಾದ ಅರ್ಥವಾಗಬೇಕಾದರೆ ಅವರ ಪರಿಚಯವಿರುವುದು ಅವಶ್ಯಕವೆನಿಸುವುದು.

ಕುಮಾರನೆಂದು ಹೇಳಲ್ಪಟ್ಟವನು ನಮ್ಮ ಕಥಾನಾಯಕ; ಶ್ರೀಮಂತ ನಾನಾಸಾಹೇಬ ಪೇಶವೆ; ಎರಡನೆಯ ಬಾಜೀರಾಯನ ಎರಡನೆಯ ದತ್ತಪುತ್ರನು. ಆನಂದಮಿಶ್ರಠಾಕೂರನು ಸಂನ್ಯಾಸಿ, ವೇದವೇದಾಂಗಗಳಲ್ಲಿಯೂ ಫಲಜ್ಯೋತಿಷ್ಯದಲ್ಲಿಯೂ ನಿಷ್ಣಾತನು; ಆತನು ನಾನಾಸಾಹೇಬನ ಗುರು. ಆ ಶಿವಾಲಯವು ಆತನ ಆವಾಸ. ಇವರಿಬ್ಬರ ದರ್ಶನಕ್ಕಾಗಿಯೂ ಆಪ್ತಾಲೋಚನೆಗಾಗಿಯೂ ಇನ್ನಿಬ್ಬರು ಮಹಮ್ಮದೀಯರು ಬಂದಿರುವರು. ಅವರಲ್ಲಿ ಒಬ್ಬನು ತರುಣನು. ಸೂಕ್ಷ್ಮವಾದ ಸುಸಂಘಟಿತವಾದ ಶರೀರಾವಯವಗಳೂ ಶುಭ್ರವಾದ ಮುಖದಲ್ಲಿಯ ಅಚ್ಚುಕಪ್ಪಾದ ಗಡ್ಡಮೀಶೆಗಳೂ ಆತನು ಸುಂದರಾಂಗನೆಂದು ಹೇಳುತ್ತಿದ್ದುವು. ಸೂಕ್ಷ್ಮವಾದ ರೇಶಿಮೆಯ ಉಡುಗೆ ತೊಡುಗೆಗಳೂ, ಬಂಗಾರದ ಜರಿಯ ಶಿರೋಭೂಷಣವೂ, ಹಿಂದೆ ಅಲೆಯಬಿಟ್ಟ ಅದರ ಸೆರಗೂ ಪಂಜಿನ ಬೆಳಕಿನಲ್ಲಿ ತಳತಳಿಸಿ ಹೊಳೆದು ಆತನು ಶ್ರೀಮಂತನೆಂದು ಸೂಚಿಸುತ್ತಿದ್ದುವು. ಆತನು

ಶ್ರೀಮಂತ ನಾನಾಸಾಹೇಬನ ಒಹುಕಾಲದ ಅನುಚರ; ಹಿತಾಕಾಂಕ್ಷಿ; ಮಂತ್ರಿ; ಅಜೀಮುಲ್ಲಾಖಾನನೆಂದು ಆತನ ಹೆಸರು. ಇನ್ನೊಬ್ಬನು ನಮಗೆ ಅಪರಿಚಿತನು. ಐವತ್ತೈದಕ್ಕೆ ಮಿಕ್ಕು ಆತನ ವಯಸ್ಸಿರಬಹುದು. ಸ್ಥೂಲದೇಹಿಯಾಗಿದ್ದರೂ ಪ್ರತಿ ಅವಯವವೂ ಪ್ರಮಾಣಾನುರೂಪವಾಗಿ ಬಳೆದು ಸುದೃಢವಾಗಿದ್ದುದರಿಂದ ವಿರೂಪನಾಗಿರಲಿಲ್ಲ. ಆತನೂ ಮಹಮ್ಮದೀಯನು. ಆದರೆ ಭಾರತೀಯ ಮುಹಮ್ಮದೀಯರ ಹಾಗೆ ಆತನ ಮುಖ ಲಕ್ಷಣವಿರಲಿಲ್ಲ. ಉಡುಗೆತೊಡುಗೆಗಳೂ ತುಸ ಭಿನ್ನತರದವು. ಅಜೀಮುಲ್ಲಾಖಾನನು ಈತನು ರಶಿಯದ ದರ್ಬಾರಿನ ಗುಪ್ತಚರನೆಂದು ಪರಿಚಯಮಾಡಿಕೊಟ್ಟನು.

ಎಲ್ಲರೂ ಸಾವಕಾಶವಾಗಿ ಮುಂದೆ ಸಾಗಿ ಗಂಗಾನದಿಯ ಘಟ್ಟಕ್ಕೆ ಮುಟ್ಟಿದರು. ಆನಂದಮಿಶ್ರನು ಅತಿಥಿಗಳನ್ನು ಕುರಿತು ಉಪಾಹಾರದ ಮಾತೆತ್ತಲು "ನಾವಿಬ್ಬರೂ ಒಂದೇ ಗಳಿಗೆ ಮೊದಲು ಕಾನಪುರದಲ್ಲಿ ಊಟ ಮಾಡಿ ಬಂದಿರುವುದರಿಂದ ನಮಗಾಗಿ ಶ್ರಮಪಡುವ ಕಾರಣವಿಲ್ಲ. ನಿಮ್ಮ ಊಟ ಉಪಾಹಾರಗಳು ಆಗಿರದಿದ್ದರೆ ಆದ ತರುವಾಯವೇ ಮಾತಾಡುವ" ಎಂದರು. ಆನಂದಮಿಶ್ರನು "ನಮಗಿಂದು ಏಕಾದಶಿ; ನಿರಾಹಾರ; ಭವಾನೀಪತಿಯ ಪಾದತೀರ್ಥದ ಹೊರತು ಇನ್ನೇನನ್ನೂ ಗ್ರಹಿಸುವುದಿಲ್ಲ" ಎಂದನು.

**ಗು. ಚಾ:—**ಸರಿ. ಸರಿ. ಕುಮಾರಸಾಹೇಬರೂ ಎಂದಿನಿಂದ ವ್ರತೋಪವಾಸಗಳನ್ನು ಕಲಿತರು? ಹಾ! ಮರೆತೆ. ಅವರು ಈಗ ಕೆಲವು ದಿನಗಳಿಂದಲೂ ತೀರ್ಥಯಾತ್ರೆಗಾಗಿ ಊರೂರು ಅಲೆಯುತ್ತಿದ್ದರೆಂದು ಕೇಳಿದ್ದೇನೆ.

**ಕುಮಾರ:—**ಹಿಂದುಮುಹಮ್ಮದೀಯರಿಬ್ಬರೂ ಸೇರಿ ಒಂದೇ ಉದ್ದೇಶದಿಂದ ಕಲಕತ್ತೆಯಿಂದ ಪೇಶಾವರದ ವರೆಗೆ ಹಲವು ಪುಣ್ಯಕ್ಷೇತ್ರಗಳಲ್ಲಿ ಸಂಚರಿಸಿ ಬಂದೆವು. ಅದರ ಫಲವನ್ನು ಮಾತ್ರ ಭಗವಂತನು ಯಾವ ರೀತಿಯಾಗಿ ಕರುಣಿಸುವನೋ ತಿಳಿಯದು.

**ಆನಂದಮಿಶ್ರ:—** ಸತ್ಕರ್ಮಕ್ಕೆ ಸತ್ಫಲವು ನಿಶ್ಚಿತವಾದುದು. ಭಗವಂತನ ರಾಜ್ಯದಲ್ಲಿ ಅನ್ಯಾಯವಿಲ್ಲ; ಪಕ್ಷಪಾತವಿಲ್ಲ; ಧರ್ಮರಕ್ಷಣೆಯು ಭಗವಂತನ ಕರ್ತವ್ಯ; ಆ ಕರ್ತವ್ಯಕ್ಕಾಗಿ ಯತ್ನಿಸುವವರನ್ನು ಆತನು ಎಂದೂ ಕೈಬಿಡನು. ಯತೋಧರ್ಮಸ್ತತೋ ಜಯಃ.

**ಅಜೀಮುಲ್ಲಾ:—** ರಾಕೂರ ಸಾಹೇಬ, ತಮ್ಮ ಜ್ಯೋತಿಷ್ಯವು ಈ ವಿಷಯದಲ್ಲಿ ಏನು ಹೇಳುತ್ತಿದೆ? ಮೊನ್ನೆ ಕಾನಪುರದಲ್ಲಿ ಒಬ್ಬ ಮೌಲ್ವಿ ಯವರು **ರಮಲ** ದಂತೆ ಗುಣಿಸಿ ಹೇಳಿದ್ದಾರೆ. ಸದ್ಯದಲ್ಲಿಯೇ ಈ ಕಾಫರರು ದೇಶಬಿಟ್ಟು ಓಡಿ ಹೋಗುವರಂತೆ.

**ಆನಂದಮಿಶ್ರ:—** ಖಾನಸಾಹೇಬ, ನಮ್ಮ ಗಣಿತವು ಹಿಂದೆ ಎಂದೂ ತಪ್ಪಾಗಿಲ್ಲ. ಒಂದು ನೂರು ವರ್ಷ ಕಾಲಕ್ಕಿಂತ ಹೆಚ್ಚಿಗೆ ಒಂದು ಗಳಿಗೆಯೂ ಅವರು ಈ ದೇಶದಲ್ಲಿ ನಿಲ್ಲಲಾರರು. ೧೭೫೭ನೆಯ ಇಸವಿಯ ಜೂನ್ ತಿಂಗಳ ೨೩ ನೆಯ ತಾರೀಖಿಗೆ ಪ್ಲಾಸಿಯ ಕಾಳಗವಾಯಿತು. ಅಂದಿನಿಂದ ಕಂಪನಿ ಸರಕಾರವು ಈ ದೇಶದಲ್ಲಿ ಕಾಲೂರಿ ನಿಂತಿತು. ಬರುವ ಜೂನ್ ತಿಂಗಳಿಗೆ ಒಂದು ನೂರು ವರ್ಷಗಳು ತುಂಬುವವು.

**ಗುಪ್ತಚರ:—** ನಾನು ಹಿಂದುಸ್ತಾನದ ಇತಿಹಾಸವನ್ನು ಚೆನ್ನಾಗಿ ಅಭ್ಯಾಸ ಮಾಡಿದ್ದೇನೆ. ರಾಮದಾಸ ಸ್ವಾಮಿಗಳು ಶಿವಾಜಿ ಮಹಾರಾಜ ನಿಂದ ಮಹಾರಾಷ್ಟ್ರ ರಾಜ್ಯವನ್ನು ಸ್ಥಾಪಿಸಿದರು. ವಿದ್ಯಾರಣ್ಯ ಸ್ವಾಮಿ ಗಳು ವಿಜಯನಗರದ ಸಾಮ್ರಾಜ್ಯ ಸ್ಥಾಪನೆಗೆ ಮೂಲ ಕಾರಣರಾದರು. ನಾನು ಮಹಮ್ಮದೀಯನಾಗಿ ಅವರ ಹಗೆಗಳನ್ನು ಹೊಗಳುವುದೇಕೆಂದು ಆಲೋಚಿಸಕೂಡದು. ಆಯಾ ವ್ಯಕ್ತಿಗಳು ನಮಗೆ ಹಗೆಗಳಾಗಿದ್ದರೂ ಅವರಲ್ಲಿದ್ದ ಶೌರ್ಯ ವೀರ್ಯ ಪ್ರತಾಪಗಳೂ ಕರ್ತೃತ್ವಶಕ್ತಿಯೂ ನಮಗೆ ವೈರಿಗಳಲ್ಲ. ತಾವು ಈ ಶ್ರೀಮಂತರ ಗುರುಗಳು. ತಮ್ಮ ಉಪದೇಶ ಆಶೀರ್ವಾದಗಳ ಬಲದಿಂದ ಕುಮಾರಸಾಹೇಬರು ಈ ಕಾಫರರನ್ನು ಹೊಡೆ ದೋಡಿಸಿ ಧನ್ಯರಾಗಲಿ. ಭಾರತಮಾತೆಯು ಸ್ವತಂತ್ರಳಾಗಲಿ.

**ಆನಂದಮಿಶ್ರ:—** ಭಗವಂತನ ಇಚ್ಛೆಯಿದ್ದರೆ ಹಾಗೆಯೇ ಆದೀತು. ನಾವು ಮಾಡುವುದನ್ನಂತೂ ಮಾಡಲೇಬೇಕಲ್ಲವೆ?

**ಅಜೀಮುಲ್ಲಾ:—** ನಮ್ಮ ದೇಶಬಾಂಧವರೆಲ್ಲರೂ ಒಮ್ಮನಸ್ಸಿನಿಂದ ಮುಂದೆ ಬಂದರೆ, ಹಿಂದು ಮುಹಮ್ಮದೀಯರೆಂಬ ಭೇದಭಾವವನ್ನು ಮರೆತು ಕೈಯಲ್ಲಿ ಕೈಯಿಟ್ಟು ಕೆಲಸಮಾಡಿದರೆ, ಮೂರೇ ದಿನಗಳಲ್ಲಿ ಈ ಕಂಪನಿ ಯವರು ಸುದ್ದಿಯಿಲ್ಲದೆ ಹಡಗು ಹತ್ತಿ ಓಡಿ ಹೋಗುವರು. ಇವರು ನಿಜ ವಾಗಿ ವೀರರಲ್ಲ. ರಶಿಯದ ಝಾರ ಬಹಾದ್ದೂರರೊಡನೆ ಹೊಡಿದ ಯುದ್ಧ

ದಲ್ಲಿ ಇವರು ಏನೇನು ಶತಕೃತ್ಯಮಾಡಿದರೆಂಬುದನ್ನು ನಾನು ಮೊನ್ನೆ ಇಂಗ್ಲೆಂಡಿನಿಂದ ತಿರುಗಿ ಬರುವಾಗ ಕಣ್ಣಾರೆ ಕಂಡುಬಂದಿರುವೆನು. ಸೆಬಾಸ್ತೊಪೂಲದ ಕಾಳೆಗದಲ್ಲಿ ಇಂಗ್ಲಿಷರೂ ಫ್ರೆಂಚರೂ ಸದ್ದಿಲ್ಲದೆ ಓಡಿ ಹೋದರು.*

**ಗುಪ್ತಚರ:—** ನಿಮ್ಮವರೇ ನಿಮಗೆ ಹಗೆಗಳಾಗಿದ್ದಾರೆ. ಸಮಯವು ಒದಗಿ ಬಂದರೆ ಇಂಗ್ಲಿಷರ ಹೇಡಿತನವನ್ನು ನೀವೂ ನೋಡಬಹುದು. ನಿಮ್ಮ ದೇಶೀಯ ಸೈನಿಕರೇ ಅವರಿಗೆ ರಾಜ್ಯವನ್ನು ಗೆದ್ದುಕೊಟ್ಟರು. ಇನ್ನು ಮುಂದೆಯೂ ಅವರೇ ಕೊಡಲಿಯ ಕಾವಿನಂತೆ ತಮ್ಮ ಕುಲಕ್ಕೆ ತಾವೇ ಮೃತ್ಯುವಾಗಿ ಪರಿಣಮಿಸದಿದ್ದರೆ ಸಾಕು.

**ನಾನಾಸಾಹೇಬ:—** ನಮ್ಮೊಳಗಿನ ರಾಜತಂತ್ರಗಳ ಒಡಕು, ಧರ್ಮದ ತೊಡಕು, ಸ್ವಾರ್ಥದ ಕಲಕುಮಲಕು, ಇವು ಅವರಿಗೆ ಅನುಕೂಲವಾದುವು. ಉಂಡಮನೆಯಗಳ ಎಣಿಸುವಂತಹ ಹಲವರು ಪಾಷಂಡಿಗಳೂ ಅವರನ್ನು ಕೂಡಿದರು. ತಕ್ಕಡಿಯನ್ನು ಹಿಡಿದುಕೊಂಡು ಇಲ್ಲಿಗೆ ಬಂದ ಬಣಜಿಗರು ರಾಜ್ಯಸೂತ್ರವನ್ನು ಕೈಕೊಂಡು ರಾಜಾಧಿರಾಜರಾಗಿ ಮೆರೆಯುವುದಕ್ಕೆ ಇವೇ ಮೂಲ ಕಾರಣಗಳಾದುವು.

**ಗುಪ್ತಚರ:—** ಮುಹಮ್ಮದೀಯರು ನಿಮಗೆ ವಿಧರ್ಮಿಗಳಾದರೂ ವಿದೇಶೀಯರಲ್ಲ. ಅವರು ಈ ದೇಶದಲ್ಲಿ ವಾಸಮಾಡಿ ಭಾರತವಾಸಿಗಳಾಗಿ ನಿಮ್ಮ ಬಂಧುಗಳಾಗಿದ್ದಾರೆ. ಹಿಂದು ಮುಹಮ್ಮದೀಯರಿಬ್ಬರೂ ತಮಗೆ ಸಾಮಾನ್ಯ ವೈರಿಗಳನ್ನು ಎದುರಿಸುವಾಗ ತಮ್ಮ ತಮ್ಮೊಳಗಿನ ವೈಮನಸ್ಯವನ್ನು ಬದಿಗಿಡುವುದು ಇಬ್ಬರಿಗೂ ಹಿತಕರವು. ಇಬ್ಬರಿಗೂ ಆವಶ್ಯಕವು.

**ಆನಂದಮಿಶ್ರ:—** ನಮ್ಮ ಸಾಮಾನ್ಯ ಜನತೆಯು ತಮಗೊದಗಿರುವ ಆಪತ್ತನ್ನು ಅರಿಯಲಾರದಷ್ಟು ಅಜ್ಞಾನಾಂಧಕಾರದಲ್ಲಿ ಮುಳುಗಿರುವುದು. ಪುಣ್ಯಭೂಮಿ ಭರತಖಂಡದ ಅನ್ನನೀರುಗಳ ಗುಣದಿಂದ ಅವರೆಲ್ಲರೂ ಒಂದೇ

---

* On his way back to India Azemoolah stayed at Constantinople just after the repulse of the Allies in their assault on Sebastepol ..Azemoolah returned to his disappointed master fully convinced that the power of English was on the wane .....

*Indian mutiny—by Forrest*

ಸ್ವಭಾವದವರಾಗಿ ಪರಿಣಮಿಸಿದ್ದಾರೆ. ಅವರಿಗೆ ಕಲಹ ಬೇಡ; ದ್ವೇಷಬೇಡ. ಎಲ್ಲರೂ ಶಾಂತಿಪ್ರಿಯರು. ಯಾರು ಅರಸರಾದರೂ ನಮ್ಮ ದಿನದ ಕಷ್ಟ ಬಿಡುವುದೇ ಎನ್ನುವರು. ವೈಯಕ್ತಿಕ ಜೀವನದ ಗೊಂದಲದಲ್ಲಿ ಜನಾಂಗ ಜೀವನದ ಕಲ್ಪನೆಯು ಅವರಿಗೆ ತಿಳಿಯದಾಗಿದೆ. ವೈಯಕ್ತಿಕ ಹಿತವನ್ನು ಮರೆತು ಜನಾಂಗದ ಹಿತವನ್ನು ಬಯಸುವ ಉದಾರಬುದ್ಧಿಯು ಜನತೆಯಲ್ಲಿ ಹೆಚ್ಚಿದಂತೆ ಆ ಜನಾಂಗದ ಶಕ್ತಿ ಹೆಚ್ಚುವುದು. ನಮ್ಮ ಸಾಮಾನ್ಯ ಜನತೆಯಲ್ಲಿ ಇನ್ನೂ ಈ ಕಲ್ಪನೆ ಹುಟ್ಟಿಯೇ ಇಲ್ಲ.

**ಗುಪ್ತಚರ** — ಸಾಮಾನ್ಯಜನತೆಯು ಹೀಗೆ ತಟಸ್ಥವಾಗಿದ್ದರೂ ಇರಲಿ. ಭರತಖಂಡದ ಸೇನಾಬಲವು ಅಷ್ಟು ಸಾಮಾನ್ಯವಾಗಿಲ್ಲ. ೩೩ಕೋಟಿ ಜನವಸತಿಯುಳ್ಳ ಈ ದೇಶದಲ್ಲಿ ಕೇವಲ ೨೩ ಸಾವಿರ ಬ್ರಿಟಿಷ ಸೈನಿಕರಿರುವರು. ಸಾಮಾನ್ಯ ಜನತೆಯನ್ನು ಬಿಟ್ಟರೂ ಒಂದಕ್ಕೆ ಇಪ್ಪತ್ತರಷ್ಟು ಪ್ರಮಾಣದಲ್ಲಿರುವ ಏತದ್ದೇಶೀಯ ಸೈನಿಕರೆಲ್ಲರೂ ಒಂದಾಗಿ ಒಮ್ಮನಸ್ಸಿನಿಂದ ಎದ್ದು ನಿಂತರೆ ಪರದಾಸ್ಯಪಂಕದಲ್ಲಿ ತೊಳಲುತ್ತಿರುವ ಭರತಖಂಡದ ಭಾಗ್ಯಲಕ್ಷ್ಮಿಯು ನಾಳೆಯೇ ಸ್ವಾತಂತ್ರ್ಯಸುಖವನ್ನು ಅನುಭವಿಸುವಳು.

**ಅಜೀಮುಲ್ಲಾಖಾನ:**— ನಿಜವಾಗಿ ಹೇಳಿದಿರಿ. ನಾವೂ ಅದನ್ನೇ ಆಲೋಚಿಸಿರುವೆವು. ಭಾರತೀಯ ಸೇನಾಬಲವನ್ನು ನಮ್ಮ ವಶಮಾಡಿಕೊಂಡ ಹೊರತು ಅನ್ಯ ಉಪಾಯವಿಲ್ಲ. ನೂತನವಾಗಿ ಬ್ರಿಟಿಷರು ಪ್ರಚಾರದಲ್ಲಿ ತಂದಿರುವ ಜನರಲ್ ಸರ್ವಿಸ ಆಕ್ಟಿನಿಂದ ಸೈನಿಕರಲ್ಲಿ ಅಸಂತೋಷವು ಹೆಚ್ಚಿರುವುದು. ಅವರ ರಾಜನಿಷ್ಠೆಯು ನಷ್ಟಪ್ರಾಯವಾಗಿರುವುದು. ಈ ಕಾಯಿದೆಯಿಂದ ಪೃಥ್ವಿಯ ಯಾವಭಾಗದಲ್ಲಿ ಬ್ರಿಟಿಷರು ಯುದ್ಧವನ್ನು ಹೂಡಿದರೂ ಭಾರತೀಯ ಸೈನಿಕರು ಅಲ್ಲಿಗೆ ಹೋಗಬೇಕಾಗುವುದು. ಧರ್ಮನಿಷ್ಠರಾದ ಹಿಂದುಗಳು ಹಡಗಿನಲ್ಲಿ ಕುಳಿತು ಪರಧರ್ಮೀಯರೊಡನೆ ಆಹಾರ ವ್ಯವಹಾರ ಮಾಡಿ ಕುಲಗೆಟ್ಟು ಪತಿತರಾಗಿ ಪರದೇಶಗಳಿಗೆ ಹೋಗಿ ಅಲ್ಲಿ ಯುದ್ಧಮಾಡಿ ಬ್ರಿಟಿಷರಿಗೆ ರಾಜ್ಯವನ್ನು ಗಳಿಸಿಕೊಡಬೇಕಂತೆ. ಅವರು ಭಾರತೀಯರ ವೀರಶ್ರೀಯನ್ನೂ ಧನಧಾನ್ಯಬಲವನ್ನೂ ಉಪಯೋಗಿಸಿಕೊಂಡು ಸಾಮ್ರಾಜ್ಯ ಸ್ಥಾಪನೆಯ ಕಾರ್ಯದಲ್ಲಿ ತೊಡಗಿರುವರು.

**ಗುಪ್ತಚರ:**— ನಾನೂ ಹಲವು ಸೇನಾನಿವಾಸಗಳಲ್ಲಿ ಸಂಚರಿಸಿ

ಬಂದಿರುವೆನು. ಉಗ್ರವಾದ ಸೈನ್ಯದ ಶಾಸನಗಳಿಂದಲೂ ಅಧಿಕಾರಿಗಳ ಹೇಯವಾದ ನಿಷ್ಕರುಣೆಯ ನಡತೆಯಿಂದಲೂ ದೇಶೀಯ ಸೈನಿಕರೂ ಅಧಿಕಾರಿಗಳೂ ಅತಿಶಯ ಅಸಂತುಷ್ಟರಾಗಿರುವರು; ಉದ್ವಿಗ್ನರಾಗಿರುವರು. ತುಪಾಕಿಯನ್ನು ಸರಿಯಾಗಿ ಹಿಡಿಯಲು ಕೂಡ ಬಾರದ ಗೌರವರ್ಣದ ಸಾಹೇಬರು, ಹಲವು ಕಾಳೆಗಗಳಲ್ಲಿ ತೋಫಿನ ಗುಂಡಿಗೆ ಎದೆಗೊಟ್ಟು ಕಾದಿ ಜಯಶಾಲಿಗಳಾಗಿ ಬ್ರಿಟಿಷ ರಾಜ್ಯಸ್ಥಾಪನೆಗೆ ಸಹಾಯಮಾಡಿದ ಸೈನಿಕ ಸೇನಾಧಿಕಾರಿಗಳ ಎದೆಯ ಮೇಲೆ ಲೆಫ್ಟಿನೆಂಟ್, ಕರ್ನಲ್ ಮುಂತಾದ ಅಧಿಕಾರಿಗಳಾಗಿ ಬಂದು ನಿಲ್ಲುವರು. ಮತ್ತು ಮಾತುಮಾತಿಗೆ "ಡ್ಯಾಮ್, ನಿಗ್ರೋ" ಎಂದು ತುಚ್ಛೀಕರಿಸಿ ಮಾತಾಡುವರು. ದೇಶೀಯ ಸೈನಿಕರ ಗುಣಕ್ಕೆ ಆದರವಿಲ್ಲ; ಶ್ರಮಕ್ಕೆ ಬೆಲೆಯಿಲ್ಲ; ಸಾಹಸಕ್ಕೆ ಪ್ರತಿಫಲವಿಲ್ಲ; ಅವರ ಯೋಗ್ಯತೆಗೆ ತಕ್ಕ ಸ್ಥಾನಮಾನಗಳಿಲ್ಲ. ಇವಕ್ಕೆಲ್ಲಾ ವರ್ಣಭೇದವೊಂದೇ ಕಾರಣ. ಆದುದರಿಂದ ಪ್ರತಿ ಸೇನಾನಿವಾಸವೂ ಅಸಂತೋಷ ಉದ್ವೇಗಗಳ ಆಗರವಾಗಿ ಪರಿಣಮಿಸಿದೆ.

**ಆನಂದಮಿಶ್ರ:—** ಇನ್ನೂ ಅನೇಕ ಕಾರಣಗಳಿಂದ ಬ್ರಿಟಿಷರು ಏತದ್ದೇಶೀಯರ ಪ್ರೀತಿ ವಿಶ್ವಾಸಗಳನ್ನು ಕಳೆದುಕೊಂಡಿರುವರು. ಅಯೋಧ್ಯಾ ಪ್ರಾಂತವನ್ನು ಕೈವಶಮಾಡಿಕೊಂಡು, ಮೊಗಲ್ ಬಾದಷಹರ ಅಧಿಕಾರ ವೈಭವಗಳನ್ನು ನಷ್ಟಗೊಳಿಸಿ ಮುಹಮ್ಮದೀಯರ ವೈರವನ್ನು ಕಟ್ಟಿಕೊಂಡರು. ಸಾತಾರೆ ಝಾಂಸಿ ಪಂಜಾಬಗಳ ರಾಜ್ಯಗಳನ್ನು ಅಪಹರಿಸಿದುದರಿಂದ ಜನತೆಯ ಮತ್ತು ರಾಜಕುಟುಂಬಗಳ ವಿಶ್ವಾಸವು ಹಾರಿಹೋಗಿರುವುದು. ಬ್ರಿಟಿಷರಿಗೂ ಏತದ್ದೇಶೀಯರ ಮೇಲೆ ಎಳ್ಳಷ್ಟೂ ನಂಬುಗೆಯಿಲ್ಲವಾಗಿದೆ. **ಈ ಅವಿಶ್ವಾಸವನ್ನೇ ನಾವು ಮುಖ್ಯ ಆಧಾರವಾಗಿ ಅವಲಂಬಿಸಬೇಕು.**

ಆನಂದಮಿಶ್ರನ ಮಾತುಗಳನ್ನು ಕೇಳಿ ನಾನಾಸಾಹೇಬನು—ವಿಷಣ್ಣವದನನಾಗಿ ಕುಗ್ಗಿದ ದನಿಯಿಂದ "ಗುರುದೇವಾ, ತಾವು ಹೇಳುವ ಮಾತು ಮರಾಟರಿಗೆ ಇನ್ನೂ ಮನವರಿಕೆಯಾಗಿಲ್ಲ. ಮರಾಠಾವೀರರು ರಾಜ್ಯಶ್ರೀಯೊಡನೆ ವೀರಶ್ರೀಯನ್ನೂ ಕ್ಷತ್ರಿಯ ತೇಜಸ್ಸನ್ನೂ ಕಳೆದುಕೊಂಡು ಹತವೀರ್ಯರಾಗಿರುವರು. ಅವರ ಮನಸ್ಸು ಅಭಿಮಾನಶೂನ್ಯ; ಬುದ್ಧಿ ವಿಚಾರ ಶೂನ್ಯ; ಶರೀರವು ಶಕ್ತಿಶೂನ್ಯವಾಗಿರುವುದು." ಎಂದನು.

**ಅಜೀಮುಲ್ಲಾ ಖಾನ:—** ಹಾಗಲ್ಲ, ಕುಮಾರಸಾಹೇಬ; ಮನುಷ್ಯನ ಸ್ಥಿತಿಯೇ ಹಾಗಿರುವುದು. ಸ್ವಾತಂತ್ರ್ಯಜೀವನದ ವಾತಾವರಣದಲ್ಲಿರುವವರು ಸ್ವಾತಂತ್ರ್ಯಪ್ರಿಯರಾಗುವರು. ಪಂಜರದಲ್ಲಿ ಬೆಳೆದ ಪಕ್ಷಿಗೆ ಪಂಜರವಾಸವೇ ಸುಖವೆನಿಸುವುದು. ನಾನು ಮಹಮ್ಮದೀಯ ಸೈನಿಕರ ಮನಸ್ಸನ್ನು ಚೆನ್ನಾಗಿ ಪರೀಕ್ಷಿಸಿರುವೆನು. ಅವರೆಲ್ಲರೂ ಮೊಗಲ್ ಸಾಮ್ರಾಜ್ಯದ ವಿನಾಶದಿಂದಲೂ ಅಯೋಧ್ಯೆಯ ರಾಜ್ಯದ ದುರವಸ್ಥೆಯಿಂದಲೂ ಉದ್ವಿಗ್ನರಾಗಿರುವರು. ಮೊಗಲ್ ಸಾಮ್ರಾಜ್ಯದ ಪುನರುದ್ಧಾರವಾಗುವುದೆಂದರೆ ಅಖಿಲ ಮಹಮ್ಮದೀಯರೂ ಒಂದಾಗಿ ಬ್ರಿಟಿಷರ ಮೇಲೆ ತಿರುಗಿ ಬೀಳುವರು.

**ಕುಮಾರ:—** ಸರಿ. ಆ ವೃದ್ಧ, ಗತಪ್ರಾಣ ಬಹಾದ್ದೂರಷಹನಿಗಾಗಿ ನಾವು ಯುದ್ಧವನ್ನು ಹೂಡಬೇಕು. ಅಯೋಧ್ಯೆಯ ರಾಜ್ಯವೂ ಆ ನವಾಬನಿಗೆ ಬೇಕೇ ಬೇಕು.

**ಗುಪ್ತಚರ:—** ತನ್ನ ಜೇಬಿನಿಂದ ಒಂದು ಕಾಗದವನ್ನು ಹೊರಗೆ ತೆಗೆದು ನೆಲದ ಮೇಲೆ ಬಿಡಿಸಿಟ್ಟು ಕೈಯಲ್ಲಿ ಪಂಜನ್ನು ಹಿಡಿದು, ಇಲ್ಲಿ ನೋಡಿರಿ! ನಿಮ್ಮ ನಿಮ್ಮೊಳಗೆ ವೈಮನಸ್ಯವು ಬೇಡ. ಹಿಂದು ಮಹಮ್ಮದೀಯರೊಳಗೆ ಐಕ್ಯವಿಲ್ಲದುದರಿಂದಲೇ ಭರತಭೂಮಿಯ ಅವಸ್ಥೆ ಇಷ್ಟು ಕರುಣಾಜನಕವಾಗಿ ಪರಿಣಮಿಸಿದೆ. ನರ್ಮದಾನದಿಯ ದಕ್ಷಿಣಕ್ಕೆ ಕನ್ಯಾಕುಮಾರಿಯವರೆಗೆ ಹಬ್ಬಿರುವ ವಿಶಾಲವಾದ ಭೂಭಾಗವನ್ನು ಈ ನಕಾಶೆಯಲ್ಲಿ ಹಸುರು ಬಣ್ಣದಿಂದ ತೋರಿಸಿದೆ; ಈ ಅಖಿಲ ಭೂಭಾಗಕ್ಕೆ ತಾವು ಸ್ವತಂತ್ರ ರಾಜರಾಗಬೇಕು. ತಮ್ಮ ರಾಜಧಾನಿ ಪುಣೆ. ಆಗ್ರಾದಿಂದ ಪೂರ್ವಕ್ಕೆ ಬ್ರಹ್ಮದೇಶದವರೆಗೆ ಹಬ್ಬಿರುವ ಪ್ರದೇಶವು ಹಳದಿಯಲ್ಲಿ ಚಿತ್ರಿತವಾಗಿದ್ದು ಅಯೋಧ್ಯೆಯ ನವಾಬನ ರಾಜ್ಯವನ್ನು ಸೂಚಿಸುವುದು. ಲಖನೌ ನಗರವು ಆತನ ರಾಜಧಾನಿ, ಭರತಖಂಡದ ಮಿಕ್ಕುಳಿದ ಭಾಗವನ್ನು ನೀಲ ಬಣ್ಣದಿಂದ ರಂಜಿಸಿದೆ. ಇದು ಉಳಿದೆರಡು ಭಾಗಗಳಿಂತಲೂ ಚಿಕ್ಕದಾಗಿದ್ದು ಮೊಗಲ್ ಬಾದಷಹನು ಅದರ ಒಡೆಯನಾಗುವನು. ಆದರೆ ಇನ್ನೊಂದು ಮಾತಿದೆ. ಪುಣೆಯ ಮಹಾರಾಷ್ಟ್ರಾಧಿಪತಿಗಳೂ, ಲಖನೌವಿನ ಮಹಮ್ಮದೀಯ ಸುಭೇದಾರರೂ ತಮ್ಮ ತಮ್ಮ ರಾಜ್ಯಗಳಲ್ಲಿದ್ದ ಚಿಕ್ಕಪುಟ್ಟ ರಾಜರ ಹಿತವನ್ನು ನೋಡಿಕೊಂಡು ಅವರಿಂದ ಕಾಣಿಕೆಗಳನ್ನು

ಪಡೆದು ಸ್ವತಂತ್ರ ರಾಜರಾಗಿರಬಹುದು. ಆದರೆ ಅವರು ದಿಲ್ಲಿಯ ಬಾದಷಹನ ನಾಮಮಾತ್ರ ಅಧಿಕಾರವನ್ನು ಒಪ್ಪಿಕೊಂಡಿರಬೇಕು. ಮತ್ತು ಈ ಸಾರ್ವಭೌಮಪದದ ಕುರುಹೆಂದು ಪ್ರತಿವರ್ಷ ಕೆಲವು ಆನೆ ಕುದುರೆಗಳನ್ನೂ ಕೆಲ ಕಾಣಿಕೆಯನ್ನೂ ಕೊಡಬೇಕು.

ನಾನಾಸಾಹೇಬನು ಮರುಮಾತಾಡಲಿಲ್ಲ. ನೀರವವಾಗಿ ಕುಳಿತು ಗಂಗಾನದಿಯನ್ನು ನೋಡಿದನು.

**ಆನಂದಮಿಶ್ರ:—** ಮಹಾರಾಷ್ಟ್ರ ರಾಜ್ಯಲಕ್ಷ್ಮಿಯು ದಿಲ್ಲೀಶ್ವರನ ಅನುಗ್ರಹೀತ ದಾಸಿಯೆಂಬುದನ್ನು ಒಪ್ಪಿಕೊಳ್ಳಲು ಕುಮಾರಸಾಹೇಬನು ಅನುಮಾನಪಡುವಂತಿದೆ.

**ಗುಪ್ತಚರ:—** ಪ್ರಸ್ತುತದ ಪರಿಸ್ಥಿತಿಯೇ ಹಾಗಿದೆ. ಭರತಖಂಡದಲ್ಲಿ ಬಹುಕಾಲದ ಮೊದಲೇ ಸ್ಥಾಪಿತವಾದ ಮೊಗಲ್ ಸಾಮ್ರಾಜ್ಯವು ಬ್ರಿಟಿಷರ ತಂತ್ರಗಳಿಂದ ನಷ್ಟಪ್ರಾಯವಾಗಿದ್ದರೂ ಜನತೆಯ ಮನಸ್ಸಿನಲ್ಲಿ ಅದರ ವಿಷಯದಲ್ಲಿ ಉಂಟಾಗಿದ್ದ ಆದರ ಅಭಿಮಾನಗಳು ಇನ್ನೂ ನಷ್ಟವಾಗಿಲ್ಲ; ಬಹುಜನ ಸಮಾಜದ ಒಲವನ್ನು ಅನುಲಕ್ಷಿಸುವುದು ರಾಜಕಾರಣಪಟುಗಳ ಅವಶ್ಯ ಕರ್ತವ್ಯವು.

**ಅಜೀಮುಲ್ಲಾಖಾನ:—** ಕುಮಾರಸಾಹೇಬ, ನಾನು ಮುಹಮ್ಮದೀಯರ ಅಭಿಮಾನದಿಂದ ಹೀಗೆ ಮಾತಾಡುವೆನೆಂದು ಭಾವಿಸಕೂಡದು. ತಾವು ನನ್ನನ್ನು ಬಾಲ್ಯದಿಂದಲೂ ಬಲ್ಲಿರಿ. ನಾನು ತಮ್ಮ ಅಭಿಮಾನದಿಂದಲೇ ಈ ಮಾತನ್ನು ಹೇಳುವೆನು. ತಮ್ಮ ಹಿತಕ್ಕಾಗಿಯೇ ತಾವು ಈ ಮಾತನ್ನು ಸಮ್ಮತಿಸಬೇಕು. ಇವರು (ಗುಪ್ತಚರ) ಅಖಿಲ ಸೇನಾನಿವಾಸಗಳಲ್ಲಿ ಸಂಚರಿಸಿ ಬಹುಜನ ರಾಜಕರಣಪಟುಗಳ ಅನುಮತಿಯಿಂದ ಈ ಯೋಜನೆಯನ್ನು ಸಿದ್ಧಪಡಿಸಿರುವರು. ಇದರಿಂದ ಹಿಂದು ಮುಹಮ್ಮದೀಯರಿಬ್ಬರಿಗೂ ಸಮಾಧಾನವಾಗುವುದು. ಇಬ್ಬರ ಹಿತವೂ ಸಾಧಿಸುವುದು.

**ಆನಂದಮಿಶ್ರ:—** ಒಂದು ಕಾಲದಲ್ಲಿ ಮುಹಮ್ಮದೀಯರು ಭರತಖಂಡದಲ್ಲಿ ಸಾಮ್ರಾಜ್ಯಾಧಿಪತ್ಯವನ್ನು ಪಡೆದರು. ಇನ್ನೊಂದು ಕಾಲದಲ್ಲಿ ಮಹಾರಾಷ್ಟ್ರೀಯರು ಅವರನ್ನು ಮೀರಿ ರಾಜಾಧಿರಾಜರಾಗಿ ಮೆರೆದರು. ಮೊದಲು ದೇಶದ ಹಿತ, ಆ ಬಳಿಕ ವ್ಯಕ್ತಿಯ ಹಿತ. ನಾವಿಂದು ದೇಶದ

ಉದ್ಧಾರಕ್ಕಾಗಿ ಯತ್ನಿಸಬೇಕಾಗಿದೆ. ಒಂದು ಧರ್ಮದವರ, ಒಬ್ಬ ಅರಸನ, ಹಿತಕ್ಕಾಗಿ ಅಲ್ಲ. ಆದುದರಿಂದ ಈ ವಾದವನ್ನು ನಿಲ್ಲಿಸಿ ಮುಂದಿನ ಕಾರ್ಯದ ರೂಪರೇಷೆಯನ್ನು ಗೊತ್ತುಮಾಡಿಕೊಂಡು ಕಾರ್ಯಾರಂಭ ಮಾಡುವ.

ಅಜೀಮುಲ್ಲಾ ಖಾನ:— ಅದೂ ಆಗಿದೆ, ಪ್ರತಿಸೇನಾನಿವಾಸದಲ್ಲಿಯೂ ನಮ್ಮ ಅನುಚರರನ್ನು ಗೊತ್ತುಮಾಡಿಕೊಂಡು ಬಂದಿರುವೆವು. ಒಂದೊಂದು ಸೇನಾನಿವಾಸದಲ್ಲಿಯೂ ಮೂವರು ದೇಶೀಯ ಸೇನಾಧಿಕಾರಿಗಳು ನಮ್ಮ ಸಂಘದ ವತಿಯಿಂದ (ಪರವಾಗಿ) ಕೆಲಸ ಮಾಡಬೇಕೆಂದು ಗೊತ್ತಾಗಿದೆ. ಭರತಭೂಮಿ ಧರ್ಮಭೂಮಿ. ಧರ್ಮನಾಶದ ಭೀತಿಯಿಂದ ನಮ್ಮವರು ಜಾಗ್ರತರಾಗುವಷ್ಟು ಇನ್ನೇತರಿಂದಲೂ ಆಗರು. ಮಹಾಸಾಮ್ರಾಜ್ಯ ಸ್ಥಾಪನೆಮಾಡುವೆವೆಂದರೂ ಅದರಲ್ಲಿ ಅವರಿಗೆ ಅಂತಹ ಅಭಿಮಾನಹುಟ್ಟದು. ಇಂತಹ ಸಾಮ್ರಾಜ್ಯ ಸ್ಥಾಪನೆಯ ವಿಚಾರದಿಂದ ಕೆಲವರ ಮನಸ್ಸಿನಲ್ಲಿ ಉತ್ಸಾಹವುಂಟಾದರೂ ಅವರ ಅಂತಃಕರಣವು ಅಷ್ಟು ಚಲವಿಚಲವಾಗಲಾರದು. ಆದರೆ ಧರ್ಮನಾಶದ ಭೀತಿಯಿಂದ ಎಲ್ಲರೂ ತುಳಿದೆಬ್ಬಿಸಿದ ಭುಜಂಗನ ಹಾಗೆ ಬುಸುಗುಟ್ಟುತ್ತ ಎದ್ದುನಿಲ್ಲುವರು. ವಿಧವಾವಿವಾಹದ ಕಾಯದೆ, ಜನರಲ್ ಸರ್ವಿಸ ಆಕ್ಟು, ಇವುಗಳಿಂದ ಜನತೆಯ ಮತ್ತು ಸೈನಿಕರ ಮನಸ್ಸಿನಲ್ಲಿ ಧರ್ಮನಾಶದ ಭೀತಿಯ ಅಂಕುರವು ಮೊಳೆತಿರುವುದು. ಅದನ್ನೇ ನೀರೆರೆದು ಬೆಳೆಯಿಸಿ ಫಲಫಲಿಸುವಂತೆ ಮಾಡಬೇಕು. ಕಲಕತ್ತೆಯಿಂದ ಪೇಶಾವರದ ವರೆಗಿನ ಯಾವತ್ತು ಸೇನಾನಿವಾಸಗಳಲ್ಲಿ ನಮ್ಮವರು ಫಕೀರರಾಗಿ, ಬೈರಾಗಿಗಳಾಗಿ, ಭಿಕ್ಷುಗಳಾಗಿ, ಸಂಚರಿಸಿ ಜನಜಾಗ್ರತೆಯನ್ನುಂಟುಮಾಡಬೇಕು. ಸಾತಾರೆಯ ರಂಗೂಬಾಪೂಜಿಯವರಂತಹ ರಾಜತಂತ್ರ ಪ್ರವೀಣರು ದಕ್ಷಿಣದಲ್ಲಿ ಕೆಲಸ ಮಾಡಲು ಒಪ್ಪಿಕೊಂಡಿರುವರು. ತಾತ್ಯಾಟೋಪಿಯವರಂತಹ ರಣಪಟುಗಳು ಸೇನಾನಾಯಕರಾಗಿ ಕಾರ್ಯಮಾಡಲು ತುದಿಗಾಲ ಮೇಲೆ ನಿಂತಿರುವರು.

ಆನಂದಮಿಶ್ರ:— ನಿಮ್ಮಂತಹ ಕಾರ್ಯಕುಶಲರೂ ಬುದ್ಧಿಶಾಲಿಗಳೂ ಕೆಲಸವನ್ನು ಕೈಕೊಂಡ ಬಳಿಕ ನಾವು ಹೆಚ್ಚಿಗೆ ಆಲೋಚನೆ ಮಾಡಬೇಕಾದ ಆವಶ್ಯಕತೆಯೇ ಉಳಿಯದು. ಆದರೂ ಕಾರ್ಯಕ್ರಮದ ರೂಪರೇಷೆ ಎಲ್ಲ

ರಿಗೂ ಗೊತ್ತಾಗಿರುವುದು ಒಳ್ಳೆಯದೆಂದು ನಾಲ್ಕುಮಾತು ಹೆಚ್ಚಿಗೆ ಕೇಳಬೇಕಾಗಿದೆ. ಬಹಿರಂಗ ಯುದ್ಧವು ಎಂದು ಪ್ರಾರಂಭವಾಗುವುದು ?

**ಅಜೀಮುಲ್ಲಾ ಖಾನ:—** ಮೇ ತಿಂಗಳ ೩೦ನೆಯ ತಾರೀಖಿನ (೧೮೫೭) ಮಧ್ಯರಾತ್ರಿಯ ವೇಳೆಗೆ ಸರಿಯಾಗಿ ಅಖಿಲ ಭರತಖಂಡದಲ್ಲಿಯೂ ವಿದ್ರೋಹಾಗ್ನಿಯು ಪ್ರಜ್ವಲಿತವಾಗುವುದು. ಮೇ ತಿಂಗಳ ಬಿಸಿಲಿನ ಸಂತಾಪದಲ್ಲಿ ಯುರೋಪಿಯನ್ ಸೈನಿಕರು ಹುರಿದು ಬೀಳುವರು. ಅದೇ ಕಾಲಕ್ಕೆ ಅವರ ಮೇಲೆ ಲೋಹಾಗ್ನಿಯ ವೃಷ್ಟಿಯನ್ನು ಸುರಿಸಿ ಸುಟ್ಟು ಬಿಡಬೇಕು. ಒಡನೆಯೇ ಮಳೆಗಾಲವು ಪ್ರಾರಂಭವಾಗುವುದರಿಂದ ಸಮ್ಮುವರ ವಿರುದ್ಧ ಯುದ್ಧಮಾಡುವುದಕ್ಕೆ ದೂರದೂರದ ಪ್ರದೇಶಗಳಿಂದ ಸೈನ್ಯವನ್ನು ಒಂದುಗೂಡಿಸುವುದು ಅವರಿಗೆ ಅಸಾಧ್ಯವಾಗುವುದು.

**ಗುಪ್ತಚರ:—** ಅಖಿಲ ಭರತಖಂಡದಲ್ಲಿಯೂ, ಏಕಕಾಲಕ್ಕೆ ಯುದ್ಧಾರಂಭವಾಗಬೇಕು. ಒಡನೆಯೇ ಸಾಮ್ರಾಜ್ಯ ಸ್ಥಾಪನೆಯ ಕಾರ್ಯವೂ ನಡೆಯಲೇಬೇಕು. ಭಾರತೀಯ ಸೈನಿಕರ ಅಭಿಮಾನಕ್ಕೆ ಕಾರಣವಾದ ಸಾಮ್ರಾಜ್ಯ ಸ್ಥಾಪನೆಯಾದ ಹೊರತು ಎಲ್ಲ ಕಾರ್ಯಗಳು ಏಕಕೇಂದ್ರವಾಗಿ ನಡೆಯಲಾರವು; ಶಕ್ತಿಯು ಏಕೀಕರಣವಾಗಲಾರದು ಮೊದಲು ದಿಲ್ಲಿ, ಲಖನೌ, ಪುಣೆ, ಝಾಂಸಿ ಮುಂತಾದ ಕಡೆಗಳಲ್ಲಿ ರಾಜಾಧಿರಾಜರು ವಿರಾಜಿಸಿ, ಅವರ ಆಜ್ಞೆಯಂತೆ ಸೈನಿಕರೂ ಜನತೆಯೂ ಕೆಲಸಕ್ಕೆ ತೊಡಗಬೇಕು.

**ಆನಂದಮಿಶ್ರ:—** ನಿರ್ದಿಷ್ಟ ಸಮಯವು ಒದಗುವವರೆಗೂ ಯಾರೂ ಯಾವಸಂಗತಿಯನ್ನೂ ಬಹಿರಂಗಪಡಿಸಕೂಡದು. ಎಂತಹ ಆಪತ್ತಿನಲ್ಲಿಯೂ ಇನ್ನೊಬ್ಬರ ಹೆಸರು ಒಡೆಯಲಾಗದು.

ಇದೇ ರೀತಿ ಇನ್ನೂ ಅನೇಕ ಮಾತುಕತೆಗಳು ನಡೆದ ತರುವಾಯ ಪರಸ್ಪರ ಪ್ರೀತಿ ವಿಶ್ವಾಸಗಳ ಆಣೆ ಭಾಷೆಗಳಾದ ಬಳಿಕ ಎಲ್ಲರೂ ಮುಂದಿನ ಕಾರ್ಯಕ್ರಮದ ಮತ್ತು ಪರಿಣಾಮದ ವಿಷಯದಲ್ಲಿ ಆಲೋಚಿಸುತ್ತ ತಮ್ಮ ತಮ್ಮ ನಿವಾಸಗಳಿಗೆ ತೆರಳಿದರು. ಏಕಾದಶಿಯ ಶೀರ್ಣ ಶರೀರದ ಚಂದ್ರನು ಮೂಡಲಲ್ಲಿ ಮೂಡಿಬಂದು ಧರೆಯನ್ನು ಬೆಳಗತೊಡಗಿದನು. ನಿಶಾಂತ ಯಾಮವು ಸಮೀಪಿಸಿತು. ಪಕ್ಷಿಗಳ ಕಲಕಲನಿನಾದವು ಪ್ರಾರಂಭವಾಯಿತು.

---

# ಮೊದಲನೆಯ ಖಂಡ



## ಧರ್ಮಭ್ರಾಂತಿ



"..... Especially as it appears to me, that probably the main body of this regiment, in refusing to bite these cartridges, did so refuse, not from any feeling of disloyalty or disaffection towards the Government or their officers, but from an unfeigned and sincere dread, owing to their belief in the late rumours about the construction of those cartridges, that the act of biting them would involve a serious injury to their caste and to their future respectability of character In short, that if they were to bite these cartridges, they would be guilty of a heinous sin in a religious point of view."

—*The Indian Mutiny*
*by Forrest.*

# ಮೊದಲನೆಯ ಪರಿಚ್ಛೇದ

## ಧರ್ಮಭಯ

" ... The chronic ill-feeling had become intensified and gave an exceptional colour and weight to the cartridge incident."

—*Forrest.*



ಅನಂತವಾದ ಕಾಲಪ್ರವಾಹದಲ್ಲಿ ಕ್ರಿಸ್ತಶಕದ ೧೮೫೬ನೆಯ ಇಸವಿಯು ವಿಲೀನವಾಗಿ ಹೋಯಿತು. ೧೮೫೭ನೆಯ ಇಸವಿಯು ಪ್ರಸನ್ನಭಾವದೊಡನೆ ಪ್ರಾರಂಭವಾಯಿತು. ಭರತಖಂಡದ ಶಾಸನಾಧಿಕಾರಿ ಲಾರ್ಡ ಕ್ಯಾನಿಂಗ್ ಸಾಹೇಬನು ದೇಶದಲ್ಲೆಲ್ಲ ಸುಖ-ಸುಶಾಂತಿಗಳನ್ನು ನಿರೀಕ್ಷಿಸುತ್ತಿದ್ದನು. ನೂತನ ವತ್ಸರಾರಂಭದಲ್ಲಿ ಎಲ್ಲೆಡೆಯಲ್ಲಿಯೂ ಸುಖಶಾಂತಿಗಳು ವಿರಾಜಿಸುತ್ತಿದಂತೆ ತೋರಿದುವು. ಬ್ರಿಟಿಷ ಅಧಿಕಾರಿಗಳ ಶಾಸನಾಧಾರವಾಗಿದ್ದ ಸೈನ್ಯ ಶಾಖೆಯು ಪ್ರಸನ್ನಭಾವದಿಂದಿರುವಂತೆ ತೋರಿತು ; ಸೈನ್ಯಾಧಿಕಾರಿಗಳು ತಮ್ಮ ತಮ್ಮ ಅಧಿಕಾರಕ್ಕೊಳಪಟ್ಟ ಸೈನಿಕರ ಕಾರ್ಯಕಲಾಪಗಳನ್ನು ನಿರೀಕ್ಷಿಸಿ ಪರೀಕ್ಷಿಸಿ ಸಮಾಧಾನ ಮಾಡಿಕೊಂಡರು. ೧೮೫೭ನೆಯ ಕ್ರಿಸ್ತಾಬ್ದದ ಶೀತಕಾಲದ ಪ್ರಥಮಭಾಗವು ಸುಖರೂಪವಾಗಿ ಕಳೆಯಿತು.

ತಟ್ಟನೆ ಎಲ್ಲವೂ ಬದಲಾಯಿತು. ಸುಖಶಾಂತಿಗಳ ಬದಲು ಪ್ರಬಲವಾದ ಅಸಂತೋಷ ಪ್ರತಿಹಿಂಸಾಪ್ರವೃತ್ತಿಗಳು ತಲೆದೋರಿದುವು. ನಿರ್ಮಲವಾದ ಆಕಾಶದಲ್ಲಿ ಒಮ್ಮೆಲೆ ಕಾರ್ಮೋಡಗಳು ಹರಡಿಕೊಂಡು ಪ್ರತಿಕ್ಷಣಕ್ಕೂ ಅತಿ ಭಯಂಕರವಾಗಿ ಗರ್ಜನೆ ತರ್ಜನೆ ಮಾಡತೊಡಗಿದುವು. ಎಲ್ಲೆಡೆಯಲ್ಲಿಯೂ ಪ್ರಲಯಕಾಲದ ಪೂರ್ವಚಿಹ್ನೆಗಳು ತೋರಿಬಂದುವು.

ಹಿಂದುಸ್ಥಾನದ ಸೈನ್ಯ ಶಾಖೆಯಲ್ಲಿಯು ಸೈನಿಕರು ಉಪಯೋಗಿಸು ತ್ತಿದ್ದ ಬ್ರಾವುನ್ ಬ್ರೇಸ ತುಬಾಕಿಗಳ ಬದಲು ಹೊಸತರದ ತುಬಾಕಿಗಳನ್ನು ಪ್ರಚಾರದಲ್ಲಿ ತರಬೇಕೆಂದು ೧೮೫೭ನೆಯ ಇಸವಿಯ ಪ್ರಾರಂಭದಲ್ಲಿ ಸರಕಾರದ ನಿರ್ಣಯವಾಯಿತು. ಈ ತುಬಾಕಿಗಳಿಂದ ಗುಂಡುಗಳು ಹೆಚ್ಚು ದೂರ ಹೋಗುತ್ತಿರುವುದರಿಂದ ಯುದ್ಧಕಾಲದಲ್ಲಿ ಹೆಚ್ಚು ಅನುಕೂಲ ವಾಗುತ್ತಿದ್ದಿತು. ಈ ತುಬಾಕಿಗಳಿಗೆ ಉಪಯೋಗಿಸುವ ತೋಟೆಗಳನ್ನು ತುಬಾಕಿಗೆ ತುಂಬುವುದಕ್ಕಿಂತ ಮೊದಲು ಸೈನಿಕರು ಅದಕ್ಕೆ ಅಂಟಿಸಿರುವ ಒಂದು ವಿಧದ ನುಣುಪಾದ ಕಾಗದವನ್ನು ಹಲ್ಲಿನಿಂದ ಹರಿಯಬೇಕಾಗು ತ್ತಿದ್ದಿತು. ಇಲ್ಲಿಯೇ ಅಸಂತೋಷದ ಬೀಜೋತ್ಪತ್ತಿಯಾಯಿತು. ಚಿಕ್ಕದಾದ ದೀಪದ ಕಡ್ಡಿಯ ತುದಿಯೊಳಗಿನ ಮದ್ದಿನಲ್ಲಿ ಪ್ರಲಯಾಗ್ನಿಯ ಒಂದು ಕಿಡಿಯು ಗುಪ್ತವಾಗಿರುವಂತೆ ೧೮೫೭ನೆಯ ಇಸವಿಯಲ್ಲಿ ಭರತಖಂಡ ದಲ್ಲೆಲ್ಲ ಆಲ್ಲೋಲ ಕಲ್ಲೋಲವನ್ನುಂಟುಮಾಡಿದ, ಮಹಾ ಪ್ರಲಯ ಕಾರಿಯಾದ "ಸಿಪಾಯಿ ದಂಗೆಗೆ" ಕಾರಣವಾದ, ವಿದ್ರೋಹಾಗ್ನಿ ಇಲ್ಲಿಯೇ ಉದ್ಭೂತವಾಯಿತು.

ಕಲಕತ್ತೆಯಿಂದ ಉತ್ತರಕ್ಕೆ ಎಂಟು ಮೈಲು ದೂರದಲ್ಲಿ "ಡಮ್ ಡಮಾ" ಎಂಬುದೊಂದು ಸೇನಾನಿವಾಸವಿದ್ದಿತು. ಇಲ್ಲಿ ಸೈನ್ಯಕ್ಕೆ ಬೇಕಾ ಗುವ ಮದ್ದು ಗುಂಡುಗಳ ಕಾರಖಾನೆಯನ್ನು ನೂತನವಾಗಿ ಆರಂಭಿಸಿದ್ದರು.

ಒಂದುದಿನ ಡಮ್ ಡಮಾ ಸೇನಾನಿವಾಸದಲ್ಲಿದ್ದ ಮದ್ದುಗುಂಡುಗಳ ಕಾರಖಾನೆಯಲ್ಲಿ ಕೆಲಸಮಾಡುತ್ತಿದ್ದ ಕೂಲಿಕಾರನೊಬ್ಬನು ನೀರಡಿಸಿ ಕಾರಖಾನೆಯಿಂದ ಹೊರಗೆ ಬಂದು, ಅಲ್ಲಿಯೇ ಬಾವಿಯ ದಂಡೆಯ ಮೇಲೆ ಸೈನಿಕನೊಬ್ಬನು ನೀರು ತುಂಬಿದ ಕೊಡವನ್ನು ಎತ್ತಿಕೊಂಡು ನಿಂತಿರುವು ದನ್ನು ಕಂಡು, ಆತನ ಬಳಿಗೆ ಹೋಗಿ– "ಅಣ್ಣಾ, ಬಲು ನೀರಡಿಕೆಯಾಗಿದೆ. ತುಸ ನೀರುಕೊಡುವೆಯಾ ?" ಎಂದನು.

"ನೀರು ಕೊಡದೆ ಏನು ? ಬೊಗಸೆಯೊಡ್ಡು; ಎರೆಯುವೆನು."

"ಅಣ್ಣಾ ಕೈಯೊಳಗಿನ ಆ ಬಟ್ಟಲಿನಲ್ಲಿ ಕೊಡಬಾರದೆ ?"

"ನೀನು ಯಾವಜಾತಿಯವನೋ ? ಬ್ರಾಹ್ಮಣನ ಬಟ್ಟಲು ಬೇಡುವೆ?"

"ನಾನು ಶೂದ್ರನು. ಇಲ್ಲಿಯೇ ಮದ್ದು ಗುಂಡುಗಳ ಕಾರಖಾನೆ

ಯಲ್ಲಿ ಕೆಲಸ ಮಾಡುತ್ತಿದ್ದೇನೆ. ನೀವು ಕಂಪನಿಯ ಸರಕಾರದ ಸೈನಿಕರಲ್ಲವೇ ? ಮಡಿವಂತರು; ಜಾತಿವಂತ ಬ್ರಾಹ್ಮಣರು. ಶೂದ್ರರಿಗೆ ನೀರು ಕುಡಿಯಲಿಕ್ಕೆ ಬಟ್ಟಲು ಕೊಟ್ಟರೆ ನಿಮ್ಮ ಕುಲವು ಕೆಟ್ಟು ಹೋಗುವುದು!"

"ಹಾಗೆಂದರೇನೋ, ಮರುಳಾ ? ನನ್ನ ಬಟ್ಟಲು ಬೇಡಿ ನನಗೇ ನೂರೆಂಟು ಮಾತಾಡುವುದೆಲ್ಲಿಯ ನೀತಿಯೋ ? "

"ಅಣ್ಣಾ ! ಮಡಿ ಮೈಲಿಗೆ, ಆಚಾರ ವಿಚಾರ, ಜಾತಿ ಗೋತ್ರ ಇವನ್ನೆಲ್ಲ ಇಲ್ಲಿಗೆ ಸಾಕುಮಾಡಿರಿ. ನೀವು ಬ್ರಾಹ್ಮಣರು; ನೀವು ಹಲ್ಲಿನಿಂದ ಕಡಿಯಲಿಕ್ಕೆಂದು ಗೋಮಾತೆಯ ನೆಣವನ್ನು ಲೇಪಿಸಿದ ಕಾಗದವನ್ನು ಅಂಟಿಸಿ ತುಬಾಕಿಯ ತೋಟೆಗಳನ್ನು ನಾವು ಇಲ್ಲಿ ಸಿದ್ಧಪಡಿಸುತ್ತಲಿದ್ದೇವೆ. ಇವಕ್ಕೆ ಹಂದಿಯ ನೆಣವನ್ನೂ ಸೇರಿಸುವರು; ಮುಹಮ್ಮದೀಯರದೂ ಆಯಿತು.

ಈ ಮಾತುಗಳನ್ನು ಕೇಳುತ್ತಿದ್ದ ಬ್ರಾಹ್ಮಣ ಸಿಪಾಯಿಯ ಹೆಗಲ ಮೇಲಿನ ನೀರುತುಂಬಿದ ಕೊಡವು ಸರಿದು ಉರುಳಿತು. ಕೈಯಲ್ಲಿದ್ದ ಬಟ್ಟಲು ಕಳಚಿ ಬಿದ್ದಿತು. ಕೂಲಿಯುವನು ಹೊರಟು ನಡೆದನು. ಸಂಭ್ರಾಂತನಾದ ಬ್ರಾಹ್ಮಣ ಸಿಪಾಯಿಯು "ಸರ್ವನಾಶವಾಯಿತು. ಜಾತಿಗೆಟ್ಟೆವು. ಧರ್ಮನಾಶವಾಯಿತು" ಎಂದು ಕೂಗುತ್ತ ತನ್ನ ಬರಾಕಿನೊಳಗೆ ಹೋದನು. ಬಹುಜನ ಸೈನಿಕರು ಅಲ್ಲಿ ನೆರೆದು ಎಲ್ಲವನ್ನೂ ಕೂಲಂಕಷವಾಗಿ ಕೇಳಿಕೊಂಡರು. ಎಲ್ಲರೂ ಕಳವಳಪಡುತ್ತ ಮುಂದೇನು ಗತಿಯೆಂದು ಚಿಂತಿಸತೊಡಗಿದರು. "ಹಾ ! ದೇವಾ! ಯಾ ! ಅಲ್ಲಾ ! ಕೊನೆಗೆ ಈ ಅವಸ್ಥೆಯೇ? ಬಹುಕಾಲ ಅವಿಚಲವಾದ ಭಕ್ತಿಯಿಂದ ಕಂಪನಿಯ ಸರಕಾರದ ಸೇವೆಮಾಡಿ ನಮ್ಮ ಜನ್ಮದ ಹಾಡು ಈ ಪಲ್ಲವಿಯಲ್ಲಿ ಕೊನೆಗಂಡಿತೇ ? ಜಾತಿಗೆಟ್ಟು ಧರ್ಮಭ್ರಷ್ಟರಾಗಿ ನರಕಭಾಜನರಾಗಿ ಜೀವಿಸುವುದಕ್ಕಿಂತ ಸಾಯುವುದೇ ಲೇಸಲ್ಲವೇ ?" ಎಂದು ಮುಂತಾಗಿ ಎಲ್ಲರೂ ಚಿಂತಿಸತೊಡಗಿದರು.

ಕಂಪನಿಯ ಸರಕಾರವು ತನ್ನ ಬಾಹುಬಲದಿಂದಲೂ ರಾಜನೀತಿ ಕೌಶಲದಿಂದಲೂ ಭರತಖಂಡದಲ್ಲಿ ಸಾಮ್ರಾಜ್ಯ ಸ್ಥಾಪನೆ ಮಾಡಿತು. ತಮ್ಮ ಸಂಘಟನಾಶಕ್ತಿ, ಸುವ್ಯವಸ್ಥೆ, ದರ್ಪ, ಸೇನಾಬಲ ಇವುಗಳ ಮೇಲೆ ಅವಿಚಲವಾದ ಶ್ರದ್ಧೆಯುಳ್ಳ ಕಂಪನಿಯ ಅಧಿಕಾರಿಗಳಿಗೆ ಏತದ್ದೇಶೀಯರ ಮನೋಭಾವನೆಗಳ ಕಡೆಗೆ ಎಷ್ಟು ಮಾತ್ರವೂ ಲಕ್ಷ್ಯವಿರಲಿಲ್ಲ. ತುಬಾಕಿಗಳ ತೋಟೆ

ಗಳಲ್ಲಿ ನೆಣವನ್ನು ಸೇರಿಸುವ ವಿಚಾರದಲ್ಲಿ ಸರಕಾರದ ಅಂಗವು ಇಲ್ಲದಿದ್ದರೂ ಅದರಲ್ಲಿ ದೋಷಯುಕ್ತ ಪದಾರ್ಥಗಳ ಉಪಯೋಗವಾಗುತ್ತಿತ್ತೆಂಬ ಮಾತು ಕೇವಲ ನಿರಾಧಾರವಾಗಿರಲಿಲ್ಲ. *

ಡಮ್‌ಡಮಿನಲ್ಲಿ ಘಟಿಸಿದ ಈ ಆಕಸ್ಮಿಕ ಘಟನೆಯಿಂದ ಮುಂದೆ ಎಂತಹ ಜ್ವಾಲೆಯುಂಟಾಗಬಹುದೆಂಬುದನ್ನು ಕಂಪನಿಯು ಸರಕಾರವು ತರ್ಕಿಸಿ ನೋಡಲಿಲ್ಲ. ಅಲ್ಪಾವಕಾಶದಲ್ಲಿಯೇ ಈ ದುರ್ವಾರ್ತೆ ಹಿಂದುಸ್ತಾನದೊಳಗಿನ ಎಲ್ಲ ಸೇನಾನಿವಾಸಗಳಲ್ಲಿ ಒಂದಕ್ಕೆ ಎರಡಾಗಿ, ಹತ್ತಾಗಿ, ಹಲವಾಗಿ ಹಬ್ಬಿತು. ಯಾವ ಅದ್ಭುತಶಕ್ತಿಯು ಬಲದಿಂದ ಈ ವಾರ್ತೆ ಇಷ್ಟು ಬೇಗನೆ ವಿದ್ಯುದ್ವೇಗದಿಂದ ಅಥವಾ ಅದಕ್ಕೂ ಹೆಚ್ಚಿನ ವೇಗದಿಂದ ದೇಶದಲ್ಲೆಲ್ಲ ಹರಡಿಕೊಂಡಿತೆಂಬುದನ್ನು ಹೇಳಲಾಗುವುದಿಲ್ಲ; ಯಾರು ಈ ಕಾರ್ಯವನ್ನು ಕೈಕೊಂಡಿದ್ದರೆಂಬುದನ್ನೂ ನಿಷ್ಕರ್ಷೆಯಿಂದ ಗೊತ್ತುಪಡಿಸಲು ಸಾಧ್ಯವಿಲ್ಲ.

ಡಾಲ್‌ಹೌಸಿ ಸಾಹೇಬನ ಆಳಿಕೆಯಲ್ಲಿ ಪ್ರಚಾರದಲ್ಲಿ ಬಂದ ದತ್ತಕದ ಕಾಯದೆಯಿಂದ ರಾಜ್ಯವನ್ನು ಕಳೆದುಕೊಂಡವರಷ್ಟೇ ತಮ್ಮ ಸರ್ವನಾಶವಾಯಿತೆಂದು ರುಷ್ಟರಾಗಿದ್ದರೆಂತಲ್ಲ; ಧರ್ಮಸಮ್ಮತವಾದ ದತ್ತಸ್ವೀಕಾರದ ಹಕ್ಕನ್ನು ಅಲ್ಲಗಳೆದು ಒಂದಿಲ್ಲೊಂದು ದಿನ ತಮ್ಮೆಲ್ಲರ ರಾಜ್ಯವನ್ನೂ ಅಪಹರಿಸುವ ಪೂರ್ವಸಿದ್ಧತೆಯುಂಟಾಯಿತೆಂದು ದೇಶೀಯ ಸಂಸ್ಥಾನಿಕರೆಲ್ಲರೂ ಚಿಂತಾಕುಲರಾಗಿದ್ದರು. ಪಂಜಾಬ-ಅಯೋಧ್ಯಾ-ಪ್ರಾಂತಗಳನ್ನು ಏತದ್ದೇಶೀಯರ ದೃಷ್ಟಿಯಿಂದ ಅನ್ಯಾಯವಾಗಿ ಕಂಪನಿಯು ಸರಕಾರವು ಸೆಳೆದುಕೊಂಡಿದ್ದಿತು. ಹಿಂದೆ ರಾಜ್ಯವನ್ನು ವಶಮಾಡಿಕೊಂಡಾಗ ಪೇಶವೆ ಮುಂತಾದ ಅರಸರಿಗೆ ಕೊಡಲೊಪ್ಪಿದ ಪೆನ್‌ಶನ್ ಹಣವು ಮುಂದೆ ಒಂದಿಲ್ಲೊಂದು ಕಾರಣದಿಂದ ನಿಲ್ಲಿಸಲ್ಪಟ್ಟಿತು. ಈ ರೀತಿ ಅನೇಕಾನೇಕ ರಾಜ

* "The utmost care had heretofore been customary in preventing the use of objectionable ingredients; but in the present case the contractor had managed without detection by the authorities, to introduce as one of the lubricants cows' fat, the use of which would have involved contamination to a Hindoo."

—*McLeod Innes*

ಕುಟುಂಬಗಳು ಬ್ರಿಟಿಷರ ಆಡಳಿತೆಯ ವಿರುದ್ಧವಾಗಿ ಮನಸ್ಸಿನಲ್ಲಿ ತಳಮಳಿಸುತ್ತಿದ್ದುವು. ಮುಂಬಯಿ ಮದ್ರಾಸಗಳ ಇನಾಮು ಕಮಿಷನ್ನಿನ ಕಾರ್ಯಭಾರದಿಂದಲೂ ಅಯೋಧ್ಯಾಪ್ರಾಂತದಲ್ಲಿಯ ತಾಲೂಕುದಾರರ ವಿರುದ್ಧವಾಗಿ ಭೂಸ್ವಾಮಿತ್ವದ ನಿರ್ಣಯವಾದುದರಿಂದಲೂ ಮಿಕ್ಕ ಕಡೆಗಳಲ್ಲಿಯ ಕಂದಾಯದ ವಸೂಲಿ ಕ್ರಮದ ಬದಲಾವಣೆಯಿಂದಲೂ ಮಧ್ಯಮವರ್ಗದ ಜನತೆಯು ತನ್ನ ಅಧಿಕಾರ ವೈಭವಗಳನ್ನು ಕಳೆದುಕೊಂಡು ಗೋಳಾಡುತ್ತಿದ್ದಿತು. ವಿಧವಾವಿವಾಹದ ಕಾಯದೆಯಂತಹ ಕಾಯದೆಯಿಂದ ಸಾಮಾಜಿಕ ಆಚಾರಗಳಲ್ಲಿ ಸರಕಾರವು ಮನಸ್ಸು ಹಾಕಿದುದನ್ನು ನೋಡಿ ಸಾಮಾನ್ಯ ಜನತೆಯು ರುಷ್ಟವಾಗಿದ್ದಿತು. ಕ್ರೈಸ್ತ ಧರ್ಮಪ್ರಚಾರಕರ ಕೃತಿಗಳಿಂದಲೂ ಜನರ ಮನಸ್ಸು ಕಲುಷಿತವಾಗಿದ್ದಿತು. ಒಟ್ಟಿಗೆ ತೀರ ಸಾಮಾನ್ಯವ್ಯಕ್ತಿಯಿಂದ ರಾಜಾಧಿರಾಜರವರೆಗಿನ ಎಲ್ಲ ಜನರೂ ಕಂಪನಿಯ ಸರಕಾರದ ವಿಷಯದಲ್ಲಿ ಒಳಗೊಳಗೆ ವಿರೋಧಭಾವವನ್ನು ತಳೆದಿದ್ದರು. ಇಂತಹ ವಿರುದ್ಧ ವಾತಾವರಣದಲ್ಲಿ ಕಂಪನಿಯ ಸರಕಾರದ ವಿರುದ್ಧವಾದ ಒಂದು ತೀರ ಸಾಮಾನ್ಯವಾದ ಮಾತೇ ಇದ್ದರೂ ಅದು ಅಲ್ಪಾವಕಾಶದಲ್ಲಿ ದೇಶದ ತುಂಬೆಲ್ಲ ಹರಡುತ್ತಿದ್ದಿತು. ಇಂತಿರುವಾಗ ಡಮ್‌ಡಮಿನಲ್ಲಿ ಹುಟ್ಟಿದ ಧರ್ಮನಾಶದ ವಾರ್ತೆ ವಿದ್ಯುದ್ವೇಗದಿಂದ ದೇಶದ ತುಂಬ ಹರಡಿದುದರಲ್ಲಿ ಆಶ್ಚರ್ಯವೇಸಿದೆ? ತೀರ್ಥಕ್ಷೇತ್ರಗಳಲ್ಲಿಯೂ ಹೆಚ್ಚು ಜನವಸತಿಯುಳ್ಳ ನಗರಗಳಲ್ಲಿಯೂ ಸೇನಾನಿವಾಸಗಳಲ್ಲಿಯೂ ಸಂಚರಿಸುತ್ತಿದ್ದ ಬೈರಾಗಿಗಳೂ ಫಕೀರರೂ ಭಿಕ್ಷುಗಳೂ ಈ ವಾರ್ತೆಯನ್ನು ಹೆಚ್ಚು ಕುತೂಹಲದಿಂದ ಕೇಳಿ ನಿಟ್ಟುಸಿರು ಬಿಡುತ್ತಿದ್ದರು. ಅವರ ದುಃಖೋದ್ಗಾರಗಳಿಂದ ಜನರು ಉದ್ವಿಗ್ನರಾಗುತ್ತಿದ್ದರು. ಸಾಮ್ರಾಜ್ಯ ಸ್ಥಾಪನೆಯೊಂದೇ ಅಲ್ಲದೆ ಅಖಿಲ ಭರತಖಂಡವನ್ನೂ ಕ್ರೈಸ್ತಮಯವಾಗಿ ಮಾಡಿಬಿಡಬೇಕೆಂದು ಕಂಪನಿಯ ಸರಕಾರವು ನಿರ್ಣಯಿಸಿರುವುದೆಂಬ ಭಯಜನಕವಾದ ದುರ್ವಾರ್ತೆಯಿಂದ ದೇಶವೇ ತಲ್ಲಣಗೊಳ್ಳುತ್ತಿದ್ದಿತು. ಭೀತಿಯಿಂದ ಬೆದರೇಭೂತವಾಗುವಂತೆ ಈ ಪರಿಸ್ಥಿತಿಯ ಮೂಲಕ ತುಬಾಕಿಯ ತೋಟೆಯ ಕತೆಗೆ ವಿಚಿತ್ರ ಸ್ವರೂಪವುಂಟಾಯಿತು.

---

# ಎರಡನೆಯ ಪರಿಚ್ಛೇದ

## ಉತ್ಪಾತ ಭಯ

"We have at Barrackpor been dwelling upon a mine ready for explosion"

—*Forrest*

ಡಮ್‌ಡಮಿನಿಂದ ಉತ್ತರಕ್ಕೆ ಕಲಕತ್ತೆಯಿಂದ ಹದಿನಾರು ಮೈಲು ದೂರದಲ್ಲಿ ಭಾಗೀರಥಿಯು ತೀರದಲ್ಲಿ ಬರಾಕಪುರ ವೆಂಬುದೊಂದು ಸೇನಾನಿವಾಸವಿರುವುದು. ಬಂಗಾಲ ಪ್ರಾಂತಿಕ ಸೈನ್ಯದ ಬಹುಭಾಗವು ಇಲ್ಲಿಯೆ ಇರುವುದು. ಈ ಸೇನಾನಿವಾಸವು ಒಂದು ಸುವಿಶಾಲವಾದ ಸುರಮ್ಯವಾದ ಅರಣ್ಯದ ಮಧ್ಯ ದಲ್ಲಿ ಸ್ಥಾಪಿತವಾಗಿದ್ದು ಈಶ್ವರ ನಿರ್ಮಿತವಾದ ಸೃಷ್ಟಿಸೌಂದರ್ಯ ದೊಡನೆ ಮಾನವಕೃತ ಶಿಲ್ಪಸೌಂದರ್ಯವು ಸೇರಿ ಬರಾಕಪುರವು ಅತ್ಯಂತ ರಮಣೀಯವಾಗಿದ್ದಿತು. ಅಖಿಲ ಭರತಖಂಡದ ಸರ್ವಾಧಿಕಾರಿ ಗವರ್ನರ ಜನರಲ್ ಸಾಹೇಬನು ಕಲಕತ್ತೆಯಂತಹ ಜನಸಂದಣಿಯ ಕೋಲಾಹಲದಲ್ಲಿ ವಾಸವಾಗಿದ್ದು ಬೇಸರುಗೊಂಡಾಗ ವಿಶ್ರಾಂತಿಗೆಂದು ಇಲ್ಲಿಗೆ ಬಂದು ಕೆಲವು ದಿನ ಉಳಿದುಕೊಳ್ಳುವನು. ಕಲಕತ್ತೆಯ ವಾಸದಿಂದ ಆಯಾಸಗೊಂಡ ಯುರೋಪಿಯನ್ ಅಧಿಕಾರಿಗಳೂ ಇಲ್ಲಿಗೆ ಬಂದು ಕೆಲವು ದಿನ ನಿಂತು ವಿಶ್ರಾಂತಿ ಪಡೆದು ಮರಳಿ ಹೋಗುತ್ತಿದ್ದರು. ಒಟ್ಟಿಗೆ ಬರಾಕಪುರವು ಕಂಪ ನಿಯ ಸರಕಾರದ ಸೇನಾನಿವಾಸವಾಗಿರುವಂತೆ ಪ್ರಕೃತಿದೇವಿಯ ವಿಲಾಸದ ಉಪವನವಾಗಿ ಯುರೋಪಿಯನ್ ಅಧಿಕಾರಿಗಳ ವಿಹಾರಸ್ಥಾನವೂ ಆಗಿದ್ದಿತು.

ಬರಾಕಪುರದ ಮುಖ್ಯ ಸೇನಾಪತಿ ಹಿಯರ್ ಸೇ ಸಾಹೇಬನು ಜನವರಿ ತಿಂಗಳ ೨೪ನೆಯ ತಾರೀಖಿನ ದಿನ ಮೇಲಧಿಕಾರಿಗಳಿಗೆ ಒಂದು ಪತ್ರ ವನ್ನು ಬರೆದನು. ಅದರ ಅಭಿಪ್ರಾಯವು ಈ ರೀತಿಯಾಗಿದ್ದಿತು:-"ಬರಾಕ ಪುರದ ಸೇನಾನಿವಾಸದಲ್ಲಿರುವ ಸೈನಿಕರು ತೀವ್ರ ಅಸಂತುಷ್ಟರಾಗಿರುವರು.

ಅವರ ಅಂತಃಕರಣದಲ್ಲಿ ದ್ವೇಷಬುದ್ಧಿ ಉತ್ತೇಜಿತವಾಗತೊಡಗಿದೆ. ಕೆಲವರು ವಿರೋಧಿಗಳು (ಅವರು ಬಹುಶಃ ಕಲಕತ್ತೆಯ ಬ್ರಾಹ್ಮಣ ಸಭೆಗೆ ಸಂಬಂಧಿಸಿದವರಾಗಿರಬಹುದು) ಸರಕಾರದವರು ಸೈನಿಕರೆಲ್ಲರನ್ನು ಬಲಾತ್ಕಾರದಿಂದ ಕ್ರೈಸ್ತಧರ್ಮಕ್ಕೆ ಸೇರಿಸುವರೆಂಬ ದುರ್ವಾರ್ತೆಯನ್ನು ಸೇನಾನಿವಾಸದಲ್ಲಿ ಹರಡಿರುವರು. ಈ ಮಾತಿನಿಂದ ಅವಿಚಾರಿಗಳಾದ ಸೈನಿಕರ ಮನಸ್ಸಿನಲ್ಲಿ ಇಲ್ಲದ್ದೊಂದು ಭಯವು ಹುಟ್ಟಿ ಅವರು ಅಸಂತುಷ್ಟರಾಗಿದ್ದಾರೆ. ವಿರೋಧಿಗಳು ಈ ರೀತಿ ಸೈನಿಕರ ಮನಸ್ಸನ್ನು ಕೆಡಿಸಿ ಕಂಪನಿಯ ಸರಕಾರದ ವಿರುದ್ಧ ಅವರನ್ನು ಉತ್ತೇಜನಗೊಳಿಸಲು ಪ್ರಯತ್ನಿಸುತ್ತಿದ್ದಾರೆ. ''

ಇದೇ ಸಮಯಕ್ಕೆ ಡಮ್‌ಡಮಿನಲ್ಲಿ ಹುಟ್ಟಿದ ನೆಣಮಿಶ್ರಿತ ತೋಟೆಗಳ ಸುದ್ದಿಯು ಬರಾಕಪುರದ ಸೇನಾನಿವಾಸಕ್ಕೆ ಮುಟ್ಟಿತು. ಒಬ್ಬೊಬ್ಬ ಸೈನಿಕನೂ ಹಗಲಿರುಳು ಇದನ್ನೇ ಚಿಂತಿಸುವನು. ನಾಲ್ಕು ಜನರು ಕೂಡಿದಲ್ಲೆಲ್ಲ ಇದೇ ಮಾತು. ಪ್ರಬಲವಾದ ಚಿಂತೆ, ಪ್ರಬಲವಾದ ಸಂಶಯ, ಇವುಗಳಿಂದ ಎಲ್ಲರ ಮನಸ್ಸೂ ಚಂಚಲವಾಗಿ ಸಂತಾಪಗೊಂಡಿತು. ಕ್ರೈಸ್ತ ಧರ್ಮಾವಲಂಬಿಯಾದ ಕಂಪನಿಯ ಸರಕಾರವು ಭರತಖಂಡದಲ್ಲಿ ತನ್ನ ರಾಜಕೀಯ ಸಾಮ್ರಾಜ್ಯ ಸ್ಥಾಪನೆ ಮಾಡಿಕೊಂಡುದಲ್ಲದೆ, ಧರ್ಮಸಾಮ್ರಾಜ್ಯವನ್ನೂ ಸ್ಥಾಪಿಸಿಕೊಳ್ಳಲು ಹವಣಿಸುತ್ತಿದೆಯೆಂದು ಎಲ್ಲರ ಭಾವನೆ. ಅವರಲ್ಲಿ ಕರ್ಮಠರಾದ ಹಲವರಿಗೆ ಈ ಮಾತಿನಲ್ಲಿ ಸಂಪೂರ್ಣ ವಿಶ್ವಾಸವುಂಟಾಗಿದ್ದಿತು. ಮತ್ತೆ ಕೆಲವರು ಅನ್ಯರ ಹೇಳಿಕೆಯಿಂದ ಮನಸ್ಸು ಕೆಟ್ಟು ಸಂಶಯದಲ್ಲಿದ್ದರು.

ಸೈನಿಕರ ಮನಸ್ಸಿನಲ್ಲಿಯ ಪ್ರತಿಹಿಂಸಾಪ್ರವೃತ್ತಿಯು ಕಾರ್ಯರೂಪದಲ್ಲಿ ವ್ಯಕ್ತವಾಗತೊಡಗಿತು. ಒಂದು ದಿನ ಅಕಸ್ಮಾತ್ ಬರಾಕಪುರದ ತಾರಾಯಂತ್ರದ ಕಚೇರಿಗೆ ಬೆಂಕಿ ಹತ್ತಿತು ; ಬ್ರಿಟಿಷ ಅಧಿಕಾರಿಗಳ ಮನೆಗಳು ಅಲ್ಲೊಂದು ಇಲ್ಲೊಂದು ಅಗ್ನಿನಾರಾಯಣನಿಗೆ ಆಹುತಿಯಾಗತೊಡಗಿದುವು. ರಾತ್ರಿಯಲ್ಲಿ ಸೈನಿಕರು ಅಲ್ಲಲ್ಲಿ ಗುಂಪುಗೂಡಿ ಮಾತುಕತೆ ನಡೆಯಿಸುವರು. ಎಲ್ಲೆಡೆಯಲ್ಲಿಯೂ ಒಂದೇ ಮಾತು; ಒಂದೇ ವಿಚಾರ;ಕಂಪನಿಯ ಸರಕಾರವು ತಮ್ಮ ಧರ್ಮನಾಶಕ್ಕೆ ಪ್ರಯತ್ನಿಸುತ್ತಿರುವುದರಿಂದ ಅದರ ಸೇಡು ತೀರಿಸಿಕೊಳ್ಳುವ ಬಗೆ ಯಾವುದೆಂದು ಎಲ್ಲರೂ ಒಂದಾಗಿ ಬೇರೆಬೇರೆಯಾಗಿ ಆಲೋಚನೆ ಮಾಡುತ್ತಿದ್ದರು. ಬರಾಕಪುರ ಕಲಕತ್ತೆಗಳ ಅಂಚೆಯ ಕಚೇರಿ

ಗಳಿಂದ ದಿನಾಲು ನೂರಾರು ಪತ್ರಗಳು ದೇಶದ ಬೇರೆಬೇರೆ ಭಾಗಗಳಲ್ಲಿರುವ ಸೇನಾನಿವಾಸಗಳಿಗೆ ಹೋಗತೊಡಗಿದುವು. ಅವುಗಳಲ್ಲೆಲ್ಲ ಇದೊಂದೇ ವಿಚಾರ. ಇಂತಿರುವಾಗ ಬರಾಕಪುರದ ಸೇನಾನಿವಾಸದಲ್ಲಿ ಹೀಗೊಂದು ದುರ್ವಾರ್ತೆ ಹಬ್ಬಿತು: "ಹಿಂದುಸ್ಥಾನ ಸರಕಾರವು ವಿಲಾಯತಿಯ ಸರಕಾರ ದೊಡನೆ ಪತ್ರವ್ಯವಹಾರ ನಡೆಯಿಸಿ ಧರ್ಮಾಂತರದ ಕಾರ್ಯಕ್ಕೆ ಸಮ್ಮತಿ ಪಡೆದುಕೊಂಡಿರುವುದು; ಮೊತ್ತಮೊದಲು ಮೂರು ಲಕ್ಷ ವೈದಿಕ ಬ್ರಾಹ್ಮಣರನ್ನೂ ಮೂರು ಲಕ್ಷ ಮೌಲವಿಗಳನ್ನೂ ಬಲಾತ್ಕಾರದಿಂದ ಲಾದರೂ ಕ್ರೈಸ್ತಧರ್ಮಕ್ಕೆ ಸೇರಿಸಿ ಬಿಡಬೇಕು: ಇಲ್ಲವೆ ಅವರನ್ನು ಕೊಂದು ಬಿಡಬೇಕು. ಇವರೇ ಧರ್ಮಾಂತರದ ಕಾರ್ಯಕ್ಕೆ ಪ್ರಬಲರಾದ ವಿರೋಧಿಗಳಾದುದರಿಂದ ಮೊದಲು ಇವರನ್ನು ನಿರ್ಮೂಲನಗೊಳಿಸಬೇಕು; ಎಂದು ಸರಕಾರದ ನಿರ್ಣಯವಾಗಿರುವುದು." ಮರ್ಕಟನಿಗೆ ಸುರಾಪಾನ ಮಾಡಿಸಿ ಚೇಳು ಕಡಿಯಿಸಿದಂತಾಯಿತು. ಸೈನಿಕರೆಲ್ಲರೂ ದಿಙ್ಮೂಢರಾದರು.

ಫೆಬ್ರುವರಿ ತಿಂಗಳ ೨೫ನೆಯ ತಾರೀಖಿನ ದಿನ ಸಾಯಂಕಾಲದಲ್ಲಿ ಬರಾಕ ಪುರದ ಸೇನಾನಿವಾಸದಲ್ಲಿ ಮಹಾಕೋಲಾಹಲವು ಪ್ರಾರಂಭವಾಯಿತು. ಅಸಂಖ್ಯಾಕರಾದ ದೇಶೀಯ ಸೈನಿಕರೆಲ್ಲರೂ ಡ್ರಿಲ್ಲಿನ ಬಯಲಿನಲ್ಲಿ ನೆರೆದಿದ್ದರು. ಸೂರ್ಯನಾರಾಯಣನು ಅದೇ ಆಗ ಅಸ್ತಾಚಲವನ್ನು ಸೇರಿ ಕತ್ತಲೆಯ ತರಂಗಗಳು ಭೂದೇವಿಯನ್ನು ಆಕ್ರಮಿಸುತ್ತಿದ್ದುವು. ಸೈನಿಕರು ತಮ್ಮ ನಿತ್ಯದ ಉಡುಪಿನಲ್ಲಿರಲಿಲ್ಲ ; ಉದ್ದವಾದ ನಿಲುವಂಗಿಯನ್ನು ತೊಟ್ಟು ತಲೆಗೆ ಪಾವುಡವನ್ನು ಸುತ್ತಿಕೊಂಡಿದ್ದರು. ಪಾವುಡವು ಮುಖದ ಮೇಲ್ಭಾಗವನ್ನು ಮುಚ್ಚಿ ಕಣ್ಣುಗಳವರೆಗೂ ಬಂದುದರಿಂದ ನೋಡುವವರಿಗೆ ತಟ್ಟನೆ ಅವರ ಪರಿಚಯವಾಗುವಂತಿರಲಿಲ್ಲ. ಅವರಲ್ಲಿ ಇಬ್ಬರು ಮೂವರು ಆ ಸ್ಥಳದಿಂದ ಸಾವಕಾಶವಾಗಿ ಹೊರಟು ತಮ್ಮ ಹವಾಲದಾರನ ಮನೆಗೆ ಹೋಗಿ ಅದೇನೋ ಕೆಲಸವಿದೆಯೆಂದು ಆತನನ್ನು ಅಲ್ಲಿಗೆ ಕರೆದುಕೊಂಡು ಬಂದರು. ಹವಾಲದಾರನು ಬಂದೊಡನೆ ಎಲ್ಲರೂ ಎದ್ದು ನಿಂತು ಸನ್ಮಾನಿಸಿದರು. ಸೈನಿಕರ ಉಡುಗೆ ತೊಡುಗೆಗಳನ್ನೂ ಮುಖಲಕ್ಷಣವನ್ನೂ ಕಂಡು ಹವಾಲದಾರನ ಮನಸ್ಸು ಶಂಕಿತವಾಯಿತು. ಆತನ ಆ ಸಂಶಯ ನಿವಾರಣೆಗೆ ಇನ್ನು ಹೆಚ್ಚು ಅವಕಾಶವುಳಿಯಲಿಲ್ಲ.

"ಹವಾಲದಾರ ಸಾಹೇಬ! ನಾವೆಲ್ಲರೂ ಮರಣಕ್ಕೆ ಸಿದ್ಧರಾಗಿರುವೆವು. ಧರ್ಮಭ್ರಷ್ಟರಾಗಿ, ಪತಿತರಾಗಿ ಸಾಯುವುದಕ್ಕಿಂತ ಹಗೆಗಳ ಗುಂಡಿಗೆ ಎದೆಯನ್ನು ಒಡ್ಡಿ ಪ್ರಾಣಬಿಡುವುದು ಒಳ್ಳೆಯದಲ್ಲವೇ? ಹುಟ್ಟಿದ ಮನುಷ್ಯನು ಇಂದಿಲ್ಲ ನಾಳೆ ಸಾಯಲೇಬೇಕಷ್ಟೇ?" ಸೈನಿಕರಲ್ಲಿ ಪ್ರಮುಖರಾದವರು ಹವಾಲದಾರನ ಮುಂದೆ ನಿಂತು ವಿನಯದಿಂದ ಈ ರೀತಿ ಮಾತಾಡಿದರು. ಹವಾಲದಾರನು ಈ ಮಾತುಗಳನ್ನು ಕೇಳಿ ಬೆಪ್ಪಾಗಿ ನಿಂತಿರುವುದನ್ನು ಕಂಡು "ನಾವೆಲ್ಲರೂ ಕೂಡಿ ಬಹುಕಾಲ ಆಲೋಚನೆ ಮಾಡಿ ಕೊನೆಗೆ ಹೀಗೆ ನಿರ್ಣಯಿಸಿರುವೆವು. ನಾಳೆ ರಾತ್ರಿಯೇ ನಾವೆಲ್ಲರೂ ಶಸ್ತ್ರಾಸ್ತ್ರ ಸಜ್ಜಿತರಾಗಿ ಮೊದಲು ಯುರೋಪಿಯನ್ನರ ನಿವಾಸವನ್ನು ಹೊಕ್ಕು ಎಲ್ಲರನ್ನೂ ಕಡಿದು ಬಿಸುಡುವೆವು. ಆ ಬಳಿಕ ನಮ್ಮ ನಮ್ಮ ಮನಸ್ಸು ಬಂದತ್ತ ಹೊರಟು ನಡೆಯುವೆವು. ನಮಗಿನ್ನು ಈ ಕಂಪನಿಯ ಸರಕಾರದಲ್ಲಿ ವಿಶ್ವಾಸವಿಲ್ಲ; ಇಂದಿನಿಂದ ನಾವು ಅವರ ಸೇವಕರಲ್ಲ; ಬಹುಕಾಲ ನಂಬುಗೆಯಿಂದ ಸೇವೆ ಮಾಡಿ ಅನೇಕ ಯುದ್ಧಗಳಲ್ಲಿ ಜೀವದ ಹಂಗುದೊರೆದು ಕಾದಿ ಜಯ ದೊರಕಿಸಿದ ಸ್ವಾಮಿಭಕ್ತರಾದ ನಮ್ಮನ್ನು ಇಂತಹ ಕುಯುಕ್ತಿಯಿಂದ ಕುಲಗೆಡಿಸುವ ಆಲೋಚನೆ ಮಾಡಿರುವ ಸರಕಾರದೊಡನೆ ಇನ್ನೆಷ್ಟು ಕಾಲ ಸ್ನೇಹದಿಂದಿರುವುದು? ಇನ್ನೆಷ್ಟು ಕಾಲ ಭಕ್ತಿಯಿಂದ ನಡೆಯುವುದು? ನೀವು ನಮ್ಮ ಧರ್ಮಬಾಂಧವರು; ನಮಗೆ ನಿಮ್ಮಿಂದಾದಷ್ಟೂ ಸಹಾಯ ಮಾಡಲೇಬೇಕು." ಎಂದರು.

ಹವಾಲದಾರನು ಇಷ್ಟು ದೀರ್ಘದ್ವೇಷದಿಂದಲೂ ಪ್ರತಿಹಿಂಸಾ ಪ್ರವೃತ್ತಿಯಿಂದಲೂ ಉತ್ತೇಜಿತರಾಗಿ ಮಾತಾಡುವವರ ವಿರುದ್ಧ ವಾದಿಸಿ ಫಲವಿಲ್ಲೆಂದು ಆಲೋಚಿಸಿ "ಅಣ್ಣಾಗಳಿರಾ! ಸಂಪೂರ್ಣ ವಿಚಾರಮಾಡಿ ನೋಡಿರಿ. ಯಾವುದರಿಂದ ನಿಮ್ಮ ಧರ್ಮರಕ್ಷಣೆಯೂ ಉಪ್ಪನ್ನ ಕೊಟ್ಟ ಸರಕಾರದ ಗೌರವರಕ್ಷಣೆಯೂ ಆಗಬಹುದೋ ಯಾವುದರಿಂದ ನೀವೆಲ್ಲರೂ ಸುಖಿಗಳಾಗಬಹುದೋ ಆ ಮಾರ್ಗದಿಂದ ನಡೆಯಿರಿ. ನಾನು ನಿಮ್ಮೊಳಗಿನವನೇ ಒಬ್ಬ; ನಿಮ್ಮೆಲ್ಲರಿಗೆ ಪ್ರಿಯವಾದುದೇ ನನಗೂ ಪ್ರಿಯಕರವು. ದುಡುಕಿ ಮಾಡಿದ ಯಾವಕಾರ್ಯವೂ ಒಳ್ಳೆಯ ಫಲವನ್ನು ಕೊಡಲಾರದು." ಎಂದು ನುಡಿದು ಮನಸ್ಸಿನ ಭೀತಿಯಿಂದ ನಡುಗುತ್ತ ಮನೆಗೆ ಹೊರಟನು.

ಆತನಿಗೆ ಉಭಯ ಸಂಕಟವೊದಗಿದ್ದಿತು. ಒಂದು ಕಡೆಗೆ ಧರ್ಮನಾಶದ ಭಯ; ಉನ್ಮತ್ತರಾದ ಸೈನಿಕರ ಅವಸ್ಥೆ ಏನಾಗುವುದೋ ಎಂಬ ಭೀತಿ; ಇನ್ನೊಂದು ಕಡೆಗೆ ಪ್ರಾಣಭಯ; ಸೈನಿಕರ ಅತ್ಯಾಚಾರದಿಂದ ಸಂತಾಪ ಗೊಂಡ ಅಧಿಕಾರಿಗಳು ಎಂತಹ ಉಗ್ರಶಾಸನವನ್ನು ವಿಧಿಸುವರೋ ಎಂಬ ಭೀತಿ. ಹೀಗೆ ಭಯಭ್ರಾಂತನಾದ ಹವಾಲದಾರನು ಮನೆತನಕ ಬಂದವನು ಒಳಗೆಹೋಗದೆ ತಿರುಗಿ ಮುಖ್ಯ ಸೇನಾಪತಿಯ ಮನೆಗೆ ನಡೆದನು. ರಾತ್ರಿಯ ಹತ್ತು ಗಂಟೆಯಾಯಿತು. ಸೈನಿಕರು ಮಲಗುವ ಸೂಚನೆಗಾಗಿ ಸೇನಾನಿವಾಸದ ಕಹಳೆ ಮೊಳಗಿತು.

ಅಕಾಲದಲ್ಲಿ ಹವಾಲದಾರನು ಮನೆಗೆ ಬಂದುದನ್ನು ತಿಳಿದು ಸೇನಾಪತಿ ಹಿಯುರಾಸೇ ಸಾಹೇಬನು ತುಸ ಕೋಪಗೊಂಡರೂ ಆಗಿನ ಪರಿಸ್ಥಿತಿಯನ್ನು ಆಲೋಚಿಸಿ ಹವಾಲದಾರನ್ನು ಕರೆದು ಸಮಾಚಾರವೇನೆಂದು ಕೇಳಿದನು. ಭಯಚಕಿತನಾದ ಹವಾಲದಾರನು ಡ್ರಿಲ್ಲಿನ ಬಯಲಿನಲ್ಲಿ ತಾನು ಕಂಡು ಕೇಳಿದುದನ್ನೆಲ್ಲ ಹೇಳಿದನು. ಮತ್ತು "ಇದರಲ್ಲಿ ಕೇವಲ ಸೈನಿಕರೇ ಅಪರಾಧಿ ಗಳೆನ್ನುವಂತೆಯೂ ಇಲ್ಲ; ಅವರ ಮನಸ್ಸಿನಲ್ಲಿ ಹುಟ್ಟಿದ ಧರ್ಮನಾಶದ ಭೀತಿಯೇ ಇಂತಹ ಅಕಾರ್ಯಕ್ಕೆ ಅವರನ್ನು ಪ್ರೇರಿಸುತ್ತಿದೆ. ಅವರು ಮಿಕ್ಕ ವಿಷಯಗಳಲ್ಲಿ ಕೇವಲ ಸ್ವಾಮಿಭಕ್ತರಾದ ಸೇವಕರೆಂಬುದನ್ನು ನಾನು ಬಹುದಿನಗಳ ಅನುಭವದಿಂದ ಹೇಳಬಲ್ಲೆನು. ಏನಾದರೊಂದು ಉಪಾಯ ದಿಂದ ಅವರ ಮನಸ್ಸಿನಲ್ಲಿ ಸೇರಿದ ಸಂಶಯವನ್ನು ಕಳೆದು ಅನಪೇಕ್ಷಿತವಾಗಿ ಒದಗಿರುವ ಅನಿಷ್ಟವನ್ನು ನೀಗಿ ನಮ್ಮೆಲ್ಲರನ್ನು ರಕ್ಷಿಸಬೇಕು. ಮತ್ತು ಇತ್ತೀಚೆಗೆ ಹಲವುಜನ ಬೈರಾಗಿಗಳೂ ಫಕೀರರೂ ನಮ್ಮ ಸೇನಾನಿವಾಸಕ್ಕೆ ಅಡಿಗಡಿಗೆ ಬರುತ್ತಿರುವರು. ಅದನ್ನೂ ಪ್ರತಿಬಂಧಿಸಲೇಬೇಕು" ಎಂದನು.

ಸಾಹೇಬನು ಕುಗ್ಗಿದ ದನಿಯಲ್ಲಿ "ಹೌದು, ಈಗ ಕೆಲವು ದಿನಗಳಿಂದಲೂ ಬರಾಕಪುರದ ಸ್ಥಿತಿ ತೀರ ಬದಲಾಗುತ್ತ ಬಂದಿದೆ. ನನಗೆ ನಾವೊಂದು ಮದ್ದಿನಕಣಿಯ ಮೇಲೆ ವಾಸವಾಗಿರುವೆವೆಂದು ತೋರುತ್ತಿದೆ. ಯಾವಾಗ ಅದರ ಸ್ಫೋಟವಾಗುವುದೋ ತಿಳಿಯದು." ಎಂದು ನುಡಿದು ಮತ್ತೆ ಕೆಲವು ಸಮಾಧಾನದ ಮಾತುಗಳನ್ನು ಹೇಳಿ ಹವಾಲದಾರನನ್ನು ತಿರುಗಿ ಕಳುಹಿ ಒಳಗೆ ಹೋಗಿ ಮಲಗಿಕೊಂಡನು.

ಮಾರನೆಯ ದಿನವೇ ಹಿಯರ್ ಸೇ ಸಾಹೇಬನು ಒಂದು ವಿಚಾರಣಾ ಸಮಿತಿಯನ್ನು ನಿಯಮಿಸಿದನು. ಸೇನಾನಿವಾಸಕ್ಕೆ ಸೇರಿದ ಹಿಂದು ಮಹಮ್ಮದೀಯರೆಲ್ಲರೂ ಹೊಸ ಮದ್ದಿನ ತೋಟೆಗಳ ವಿಷಯದಲ್ಲಿ ತಮ ಗುಂಟಾಗಿರುವ ಸಂಶಯವನ್ನು ಈ ಸಮಿತಿಯ ಮುಂದೆ ನಿರ್ಭಯವಾಗಿ ನಿರೂಪಿಸಬಹುದೆಂದು ಗೊತ್ತಾಯಿತು. ಆ ವಿಚಾರಣಾಸಮಿತಿಯ ಮುಂದೆ ಬಂದ ಸಂಗತಿಗಳಲ್ಲಿ ಕೆಲವನ್ನು ಇಲ್ಲಿ ಹೇಳುವೆವು.

**ವಿಜಯಸಿಂಹ ಪಾಂಡೆ.**— (ಸೈನಿಕ) ನಾನು ಹೊಸ ತೋಟೆಗಳನ್ನು ಉಪಯೋಗಿಸಲು ಸಮ್ಮತಿಸಲಾರೆನು. ಅವುಗಳಿಗೆ ಅಂಟಿಸಿದ ಕಾಗದದಲ್ಲಿ ಹಿಂದುಗಳಿಗೆ ಪರಮಪೂಜ್ಯಳಾದ ಗೋಮಾತೆಯ ನೆಣವು ಮಿಶ್ರವಾಗಿದೆ ಯೆಂದು ನನಗೆ ಸಂಶಯವುಂಟಾಗಿದೆ. ಈ ಕಾಗದದಲ್ಲಿ ನೆಣದ ಮಿಶ್ರಣವಿದೆ ಯೆಂಬುದನ್ನು ಕೇಳಿಬಲ್ಲೆನು. ಸೇನಾನಿವಾಸದೊಳಗಿನ ಸೈನಿಕರೆಲ್ಲರೂ ಬಹುದಿನಗಳಿಂದ ಈ ಮಾತನ್ನು ಆಡಿಕೊಳ್ಳುತ್ತಲಿದ್ದಾರೆ. ನೀವು (ವಿಚಾರಣಾ ಸಮಿತಿಯವರು) ಕೊಟ್ಟಿರುವ ಈ ಕಾಗದವನ್ನು ಚೆನ್ನಾಗಿ ಪರೀಕ್ಷಿಸಿ ನೋಡಿದೆನು. ಇದರಲ್ಲಿ ನೆಣದ ಅಂಶವಿರುವುದೆಂಬ ನನ್ನ ಭಾವನೆ ಈಗಲೂ ಬದಲಾಗಿಲ್ಲ. ಇದು ನುಣುಪಾಗಿ ಹೊಳೆಯುವ ಅರಿವೆಯಂತೆ ಇದ್ದು ಸುಲಭ ವಾಗಿ ಹರಿಯುವುದಿಲ್ಲ. ನೆಣದ ಮಿಶ್ರಣವಿಲ್ಲದ ಕಾಗದವು ಹೀಗಿರಲಾರದು.

**ಚಾಂದಖಾನ:**— (ಸೈನಿಕ) ನಾನೂ ಹೊಸತರದ ತೋಟೆಗಳನ್ನು ಉಪಯೋಗಿಸಲು ಸಮ್ಮತಿಸುವುದಿಲ್ಲ. ಈ ಕಾಗದವನ್ನು ಸುಟ್ಟರೆ ನೆಣಗೂಡಿದ ಪದಾರ್ಥವನ್ನು ಸುಟ್ಟರೆ ಹೊರಡುವಂತಹ ದುರ್ವಾಸನೆ ಹೊರಡುವುದು; ಸುಡುವಾಗ ಚಟ ಪಟ ಸಪ್ಪಳಾಗುವುದು. ಮೊನ್ನೆ ನಾವೆಲ್ಲರೂ ಕೂಡಿ ಬ್ರಹ್ಮಾನಂದ ಸ್ವಾಮಿಗಳ ಸಮಕ್ಷದಲ್ಲಿ ಇಂತಹ ಕಾಗದವನ್ನು ಸುಟ್ಟು ಪರೀಕ್ಷಿಸಿದ್ದೇವೆ. ಇದನ್ನು ಬಾಯಲ್ಲಿಟ್ಟು ಕಡಿಯಲು ನನ್ನ ಮನಸ್ಸೊಪ್ಪುವುದಿಲ್ಲ.

**ಜಮಾದಾರ ಖುದಾಭಕ್ಷ:**—ಹೊಸ ತೋಟೆಗಳನ್ನು ಹಲ್ಲಿನಿಂದ ಕಡಿದು ತುಬಾಕಿಗೆ ಏರಿಸಲು ನನ್ನದೇನೂ ಆಕ್ಷೇಪಣೆಯಿಲ್ಲ. ಆದರೆ ನನ್ನ ಕೈಕೆಳಗಿನ ಸೈನಿಕರಲ್ಲಿ ಬಹುಜನರು ಇದಕ್ಕೆ ಒಪ್ಪುವುದಿಲ್ಲ. ಇವುಗಳ ಕಾಗದದಲ್ಲಿ ನೆಣವು ಕೂಡಿದೆಯೆಂದು ಎಲ್ಲರೂ ಆಡಿಕೊಳ್ಳುವರು.

**ಜಮಾದಾರ ಗುಲಾಬಖಾನ**— ಹೊಸ ತೋಟೆಗಳಿಗೆ ಉಪಯೋಗಿಸಿದ ಕಾಗದವು ನಯವಾಗಿದ್ದು ಈ ಮೊದಲು ತೋಟೆಗಳಿಗೆ ಉಪಯೋಗಿಸುತ್ತಿದ್ದ ಕಾಗದಕ್ಕಿಂತಲೂ ಭಿನ್ನತರದ್ದಾಗಿರುವುದು.

ಸೇನಾಪತಿ ಹಿಯರ್ ಸೇ ಸಾಹೇಬನು ಬಹು ಕುಶಲನು; ಈ ದೇಶದಲ್ಲಿ ಬಹುಕಾಲ ಕೆಲಸ ಮಾಡಿದವನಾದುದರಿಂದ ದೇಶೀಯರ ನಡೆನುಡಿಗಳ ಮತ್ತು ಮನೋಭಾವನೆಗಳ ಪರಿಚಯವು ಆತನಿಗೆ ಚೆನ್ನಾಗಿದ್ದಿತು. ಆತನು ಹಿಂದೀ ಭಾಷೆಯಲ್ಲಿ ಅಸ್ಖಲಿತವಾಗಿ ಮಾತಾಡಬಲ್ಲನು. ಹೊಸತರದ ತೋಟೆಗಳ ಗುಣಾವಗುಣಗಳ ವಿಚಾರವು ಏನೇ ಇದ್ದರೂ ಬಹುಜನರು ಈ ವಿಷಯದಲ್ಲಿ ಸಾಶಂಕವೃತ್ತಿಯವರಾಗಿರುವ್ರದರಿಂದ ಅವನ್ನು ಉಪಯೋಗಿಸಲು ಸೈನಿಕರನ್ನು ಬಲಾತ್ಕಾರಪಡಿಸುವ್ರದು ಒಳ್ಳೆಯದಲ್ಲವೆಂದೂ ಇದರಿಂದ ದೇಶೀಯ ಸೈನಿಕರ ಧಾರ್ಮಿಕ ಭಾವನೆಗೆ ಬಾಧೆಯುಂಟಾಗುವುದರಿಂದ ಈ ವಿಚಾರವನ್ನು ಬಿಟ್ಟುಬಿಡಬೇಕೆಂದೂ ವಿಚಾರಣಾ ಸಮಿತಿಯವರೊಡನೆ ನಿರ್ಣಯಿಸಿ ಸರಕಾರಕ್ಕೆ ವರದಿಯನ್ನು ಕಳುಹಿದನು.

ಮತ್ತೆರಡು ದಿನಗಳ ತರುವಾಯ ಹಿಯರ್ ಸೇ ಸಾಹೇಬನು ಎಲ್ಲ ಸೈನಿಕರನ್ನು ಡ್ರಿಲ್ಲಿನ ಬಯಲಿಗೆ ಕರೆಯಿಸಿ ಹಿಂದೀಭಾಷೆಯಲ್ಲಿ ಅಸ್ಖಲಿತವೂ ಮರ್ಮಸ್ಪರ್ಶಿಯೂ ಆದ ವಾಣಿಯಿಂದ ಭಾಷಣಮಾಡಿದನು.

ಸೇನಾಪತಿಯ ಭಾಷಣದಿಂದ ದೇಶೀಯ ಸೈನಿಕರೂ ಸೇನಾಧಿಕಾರಿಗಳೂ ಸಮಾಧಾನ ಹೊಂದಿದರು. ಅವರು ಮೊದಲಿನಂತೆ ಶಾಂತಚಿತ್ತರಾಗಿ ತಮ್ಮ ತಮ್ಮ ಕಾರ್ಯಕಲಾಪಗಳನ್ನು ನಡೆಯಿಸತೊಡಗಿದರು. ಸೇನಾಪತಿ ಸಾಹೇಬನು ಕೂಡ ಈ ವಿಚಾರವನ್ನು ಯೋಗ್ಯ ಅಧಿಕಾರಿಗಳಿಗೆ ತಿಳುಹಿದನು.

ದುರ್ದೈವದಿಂದ ಈ ಸ್ಥಿತಿ ಬಹುದಿವಸ ಉಳಿಯಲಿಲ್ಲ. ಬಹ್ರಾಮಪುರದ ಸೇನಾನಿವಾಸದಲ್ಲಿ ನಡೆದ ಅತ್ಯಾಚಾರ ಬಲಾತ್ಕಾರಗಳ ವಾರ್ತೆ ಬೆಂಕೆಯಂತೆ ನಾಲ್ಕು ಕಡೆಗೂ ಹಬ್ಬಿತು. ಅಲ್ಲಿಯ ಅಧಿಕಾರಿಗಳ ವರ್ತನವು ಎಲ್ಲರಿಗೂ ಬಲವಾದ ಸಂಶಯಕ್ಕೆ ಕಾರಣವಾಯಿತು. ಬರಾಕಪುರದ ಸೇನಾನಿವಾಸದಲ್ಲಿಯೂ ಮತ್ತೆ ಉತ್ಪಾತದ ಸೂಚನೆಯಾಯಿತು. ಹಿಯರ್ ಸೇ ಸಾಹೇಬನು ಮತ್ತೆ ಚಿಂತಾಕ್ರಾಂತನಾದನು.

---

# ನೂರನೆಯ ಪರಿಚ್ಛೇದ

## ಮರಣಭಯ

"They must take cartridges otherwise they would be sent to Burma and China where they would all die"

—*Forrest*



ಬರಾಕಪುರದಿಂದ ಉತ್ತರಕ್ಕೆ ಸುಮಾರು ಒಂದು ನೂರುಮೈಲು ದೂರದಲ್ಲಿ ಭಾಗೀರಥಿಯ ತೀರದಲ್ಲಿ ಬಹರ್ಾಮುಪುರವೆಂಬ ಇನ್ನೊಂದು ಸೇನಾನಿವಾಸವಿರುವುದು. ಅವರ್ಣನೀಯ ವಾದ ಸೃಷ್ಟಿಸೌಂದರ್ಯದಿಂದ ವಿರಾಜಮಾನವಾಗಿರುವ ಈ ಪ್ರದೇಶವು ಅತ್ಯಂತ ರಮಣೀಯವಾಗಿರುವುದು. ಕೆಳಗೆ ಭಾಗೀರಥಿಯ ಪವಿತ್ರಪ್ರವಾಹವು ಕಲನಿನಾದದೊಡನೆ ಪ್ರವಹಿಸುವುದು. ಮೇಲ್ಭಾಗದಲ್ಲಿ ವನಲಕ್ಷ್ಮಿಯ ವಿಹಾರಭೂಮಿಯೆನಿಸುವಂತಹ ಕಾನನವು ಒಪ್ಪುವುದು. ನೆರೆಯಲ್ಲಿಯೆ ಒಂದು ಕಾಲದಲ್ಲಿ ಬಂಗಾಲ ಬಿಹಾರ ಒಡಿಸಾ ಪ್ರಾಂತಗಳ ಸರ್ವಾಧಿಕಾರಿಯಾಗಿದ್ದ ಸುಭೇದಾರನ ರಾಜಧಾನಿ ಮುರ್ಶಿದಾಬಾದ ನಗರವು ಈಗ ತನ್ನ ಗೌರವವನ್ನು ಕಳೆದುಕೊಂಡಿದ್ದರೂ ರಮಣೀಯವಾಗಿ ಒಪ್ಪುತ್ತಿದ್ದಿತು. ಈ ರಾಜ್ಯವನ್ನು ಕಳೆದುಕೊಂಡ ನಬಾಬ ನಾಜಮು ಖಾನನು ಕಲಕತ್ತೆಯಲ್ಲಿ ಒಬ್ಬ ಸಾಮಾನ್ಯಮನುಷ್ಯನಂತೆ ವಾಸವಾಗಿದ್ದನು.

ಬಹರ್ಾಮುಪುರದಲ್ಲಾಗಲಿ ಅದರ ಸಮೀಪದಲ್ಲಾಗಲಿ ಯುರೋಪಿಯನ್ ಸೈನ್ಯವಿರಲಿಲ್ಲ. ಅಲ್ಲಿ ದೇಶೀಯ ಸೈನ್ಯದ ಒಂದು ಪದಾತಿದಳವೂ ಒಂದು ಅಶ್ವಾರೋಹಿ ಸೈನ್ಯವಿಭಾಗವೂ ಆರು ತೋಪುಗಳೂ ಇದ್ದುವು. ಫೆಬ್ರುವರಿ ತಿಂಗಳ ಎರಡನೆಯ ವಾರದಲ್ಲಿ ಒಂದು ದಿನ ಮಧ್ಯಾಹ್ನ ಸಮಯ ದಲ್ಲಿ ಕರ್ನಲ್ ಮಿಚೆಲ್ ಸಾಹೇಬನು ತನ್ನ ಮನೆಯ ಮುಂದಣ ಉಪವನದಲ್ಲಿ

ವಿಶ್ರಾಂತಿಗಾಗಿ ಅಡ್ಡಾಡುತ್ತಿದ್ದಾಗ ಒಬ್ಬ ಬ್ರಾಹ್ಮಣ ಸುಭೇದಾರನು ಅಲ್ಲಿಗೆ ಬಂದು ಸಲಾಮು ಮಾಡಿ ನಿಂತುಕೊಂಡನು. ಕರ್ನಲ್ ಸಾಹೇಬನು ಸುಭೇದಾರನ ಮುಖಲಕ್ಷಣವನ್ನು ನೋಡಿ " ಸಮಾಚಾರವೇನು? " ಎಂದನು.

**ಸುಭೇದಾರ:** –"ಬರ್ಹಾಮ ಪುರದ ಸೈನಿಕರೆಲ್ಲರೂ ಬಹು ಚಿಂತಾಕುಲರಾಗಿರುವರು. ಸೈನಿಕರು ಉಪಯೋಗಿಸುವ ಹೊಸತರದ ತೋಟೆಗಳಿಗೆ ಆಕಳ ಮತ್ತು ಹಂದಿಯ ನೆಣದಿಂದ ಕೂಡಿದ ಕಾಗದವನ್ನು ಅಂಟಿಸಿರುವುದರಿಂದಲೂ ಅವನ್ನು ತುಬಾಕಿಗೆ ಏರಿಸುವಾಗ ಬಾಯೊಳಗಿಟ್ಟುಕೊಳ್ಳಬೇಕಾಗುವುದರಿಂದಲೂ ತಾವು ಜಾತಿಭ್ರಷ್ಟರಾಗುತ್ತೇವೆಂದು ಎಲ್ಲರೂ ಅಸಂತುಷ್ಟರಾಗಿದ್ದಾರೆ; ಚಿಂತಾತುರರಾಗಿದ್ದಾರೆ; ದಿಙ್ಮೂಢರಾಗಿದ್ದಾರೆ. ಈ ಮಾತಿನ ರಹಸ್ಯವೇನೋ ನನಗಂತೂ ತಿಳಿಯದು. ಆದುದರಿಂದ ತಮ್ಮ ಸನ್ನಿಧಿಗೆ ಬಂದು ಎಲ್ಲವನ್ನೂ ಅರಿಕೆ ಮಾಡಿಕೊಂಡಿರುವೆನು. "

ಕರ್ನಲ್ ಸಾಹೇಬನು ಅಧಿಕಾರದ ದರ್ಪವನ್ನು ಅಭಿನಯಿಸಿ ತಿರಸ್ಕಾರ ದೃಷ್ಟಿಯಿಂದ ಸುಭೇದಾರನ ಮುಖವನ್ನು ನೋಡಿ ಸುಮ್ಮನಾದನು. ಸುಭೇದಾರನ ಮನಸ್ಸು ತಲ್ಲಣಗೊಂಡಿತು. ಯಾವ ಅವಿಚಲವಾದ ಸ್ವಾಮಿಭಕ್ತಿಯಿಂದ ಪ್ರೇರಿತನಾಗಿ ಸ್ವಜನರ ಗುಟ್ಟನ್ನು–ಅವರ ದೃಷ್ಟಿಯಿಂದ ಹಗೆಯಾದವನಿಗೆ–ತಿಳುಹಲು ಅಲ್ಲಿಗೆ ಬಂದಿದ್ದನೋ ಆ ಸ್ವಾಮಿಭಕ್ತಿಗೆ ಈ ಅಧಿಕಾರದ ದರ್ಪ ಈ ತಿರಸ್ಕಾರಗಳೇ ಪುರಸ್ಕಾರವಾದುವಲ್ಲವೇ! ಎಂದು ಆತನು ಮನಸ್ಸಿನಲ್ಲಿ ಮರಮರನೆ ಮರುಗಿದನು; ತನ್ನ ಪ್ರಯತ್ನವು ನಿಷ್ಫಲವಾದುದಕ್ಕಾಗಿ ನೊಂದುಕೊಂಡು ತಲೆತಗ್ಗಿಸಿ ತಿರುಗಿ ಹೊರಟನು.

ಸುಭೇದಾರನು ತಿರುಗಿ ಹೊರಟುದನ್ನು ನೋಡಿ ಸಾಹೇಬನು ಕೋಪಗೊಂಡು ಕಾಲಪ್ಪಳಿಸುತ್ತ " ಸುಭೇದಾರ! ನಿನಗೂ ಈ ಮಾತಿನಲ್ಲಿ ತಥ್ಯಾಂಶವಿರುವುದೆಂದು ತೋರುವುದೇ ? " ಎಂದನು. ಸುಭೇದಾರನು ಸಾಹೇಬನ ಧ್ವನಿ ಆಘಾತಗಳಿಂದ ಆತನ ಅಂತರಂಗವನ್ನು ಅರಿತು– " ಇಲ್ಲ, ಸಾಹೇಬ; ನನಗೆ ಈ ಮಾತಿನಲ್ಲಿ ನಂಬುಗೆದೋರದೆಯೇ ನಾನು ತಮ್ಮ ಬಳಿಗೆ ಬಂದು ಸೈನಿಕರ ಅವಿಚಾರದ ಮಾತುಗಳನ್ನು ಅರಿಕೆಮಾಡಿಕೊಂಡೆನು." ಎಂದನು.

"ಒಳ್ಳೆಯದು, ಈ ಅವಿಚಾರದ ಫಲವು ಸಿಕ್ಕೇ ಸಿಕ್ಕುವುದೆಂದು ಅವರಿಗೆ ಹೇಳು. ನಾವೂ ನಮ್ಮ ಸೈನಿಕರೂ ಷಂಢರಲ್ಲವೆಂಬುದನ್ನು ಎಲ್ಲರೂ ತಿಳಿದಿರಲಿ."

ಸಾಹೇಬನ ತರ್ಜನೆ ಗರ್ಜನೆಗಳನ್ನು ಕಂಡು ಕೇಳಿದ ಸುಭೇದಾರನು ಸಂತಾಪಗೊಂಡು ನಾವು ಮಾತ್ರ ಷಂಡರಲ್ಲವೇ? ಎಂದು ಮನಸ್ಸಿನಲ್ಲಿಯೇ ಅಂದುಕೊಂಡು ಸಾಹೇಬನಿಗೆ ಸಲಾಮು ಮಾಡಿ ತನ್ನ ಮನೆಗೆ ನಡೆದನು.

ಬರಾಕಪುರದಲ್ಲಿ ಪದಾತಿದಳದ ಆರು ವಿಭಾಗಗಳಿದ್ದು ಅವರಲ್ಲಿ ಪ್ರಬಲವಾದ ಅಸಂತೋಷದ ಗಾಳಿ ಬೀಸತೊಡಗಿದೆಯೆಂದು ಹಿಂದೆಯೇ ಹೇಳಿದೆ. ರಾಜಧಾನಿ ಕಲಕತ್ತೆಗೆ ತೀರ ಸಮೀಪದಲ್ಲಿ ಇಷ್ಟೊಂದು ಜನ ಅಸಂತುಷ್ಟರಾದ ಸಶಸ್ತ್ರ ಸೈನಿಕರು ವಾಸವಾಗಿರುವುದು ಸರಿಯಲ್ಲವೆಂಬ ವಿಚಾರದಿಂದಲೋ ಇನ್ನಾವ ಕಾರಣದಿಂದಲೋ ಅಲ್ಲಿಯ ಸೈನ್ಯದ ಒಂದೊಂದೆ ವಿಭಾಗವನ್ನು ಕ್ರಮವಾಗಿ ಬೇರೆ ಬೇರೆ ಸೇನಾನಿವಾಸಗಳಿಗೆ ಕಳುಹುವ ಕ್ರಮವು ಪ್ರಾರಂಭವಾಯಿತು. ಸೇನಾಧಿಕಾರಿಗಳು ಯಾವುದು ತಮಗೆ ಹಿತಕರವೆಂದು ಭಾವಿಸಿದ್ದರೋ ಅದು ಅವರಿಗೆ ತೀರ ಅಹಿತಕರವಾಗಿ ಪರಿಣಮಿಸಿತು. ಬರಾಕಪುರದಿಂದ ಹೊರಟ ಸೈನಿಕರು, ಹೋದ ಹೋದಲ್ಲಿ ನೆಣಗೂಡಿದ ತೋಟೆಯ ಸುದ್ದಿಯನ್ನು ಒಂದಕ್ಕೆ ಹತ್ತಾಗಿ ಹಲವಾಗಿ ಹರಡಿದರು. ರಾಜಧಾನಿಗೆ ತೀರ ಸಮೀಪದಿಂದ ಬಂದ ಸೈನಿಕರ ಮಾತು ತುಂಬ ವಿಶ್ವಾಸಯೋಗ್ಯವೆಂದು ಮಿಕ್ಕವರು ಭಾವಿಸಿದರು. ಕಾಲವು ಪ್ರತಿಕೂಲವಾಗಿರುವಾಗ ಮಾಡಿದ್ದೆಲ್ಲ ಮೈಮೇಲೆ ಬರುವುದೆಂಬ ಮಾತು ಸುಳ್ಳಲ್ಲ.

ಬರಾಕಪುರದಿಂದ ಹೊರಟ ೩೪ನೆಯ ದಳದ ಒಂದು ಸೇನಾವಿಭಾಗವು ಫೆಬ್ರುವರಿ ತಿಂಗಳ ೨೫ನೆಯ ತಾರೀಖಿಗೆ ಬಹರಾಮಪುರಕ್ಕೆ ಬಂದುಮುಟ್ಟಿತು. ಬಹರಾಮಪುರದಲ್ಲಿದ್ದ ೧೯ನೆಯ ದಳದ ಸೈನಿಕರಿಗೂ ಬರಾಕಪುರದಿಂದ ಬಂದವರಿಗೂ ಪೂರ್ವ ಪರಿಚಯವಿದ್ದಿತು. ಸಾಯಂಕಾಲವಾದೊಡನೆ ೧೯ನೆಯ ದಳದವರು ತಂಡತಂಡವಾಗಿ ತಮ್ಮ ನೂತನ ಬಂಧುಗಳ ನಿವಾಸದಲ್ಲಿ ನುಗ್ಗಿದರು. ತೋಟೆಯ ಕತೆಗೆ ಪ್ರಾರಂಭವಾಯಿತು. ಬರಾಕಪುರದಿಂದ ಬಂದವರು ತಮಗೆ ಗೊತ್ತಿದ್ದ ಮಾತನ್ನು ಉಪ್ಪು ಕಾರ ಬೆರೆಸಿ ವಿವರಿಸಿದರು. ಮೂರು ಲಕ್ಷ ವೈದಿಕ ಬ್ರಾಹ್ಮಣರನ್ನೂ ಮೂರು ಲಕ್ಷ ಮೌಲವಿಗಳನ್ನೂ ಕುಲಗೆಡಿಸಲು ಇಲ್ಲವೆ ಕೊಲೆಮಾಡಲು ಪಣತೊಟ್ಟ ಕಂಪನಿಯ ಸರಕಾರವು ಹೆಚ್ಚಿನ ಯುರೋಪಿಯನ್ ಸೈನಿಕರನ್ನು ಒದಗಿಸುತ್ತಿದೆಯೆಂದೂ ಹೇಳಿದರು. ಸೈನಿಕರೆಲ್ಲರೂ ಭಯಭ್ರಾಂತರಾಗಿ ಕಂಗೆಟ್ಟರು.

ಮಾರನೆಯ ದಿನ ಸಾಯಂಕಾಲದಲ್ಲಿ ಸೈನಿಕರೆಲ್ಲರೂ ಡ್ರಿಲ್ಲಿನ ಬಯಲಿನಲ್ಲಿ ಕೂಡಿದ್ದರು. ಸೇನಾಧಿಕಾರಿಗಳು ತುಬಾಕಿಯ ತೋಟೆಗಳನ್ನು ಹಂಚತೊಡಗಿದರು. ಸೈನಿಕರು ಅದರಲ್ಲಿ ನೆಣವು ಮಿಶ್ರವಾಗಿರುವುದರಿಂದ ಅವನ್ನು ಉಪಯೋಗಿಸಿದರೆ ತಮ್ಮ ಧರ್ಮನಾಶವಾಗುವುದೆಂದೂ ಇಂದಿನಿಂದ ತಾವು ಅದನ್ನು ಉಪಯೋಗಿಸಲಾರೆವೆಂದೂ ಸ್ಪಷ್ಟವಾಗಿ ನುಡಿದು ಯಾರೂ ತೋಟೆಗಳನ್ನು ಸ್ವೀಕರಿಸಲಿಲ್ಲ. ಈ ಮಾತು ಸೇನಾಪತಿ ಮಿಚೆಲ್ ಸಾಹೇಬನಿಗೆ ತಿಳಿದು ಆತನು ಅಲ್ಲಿಗೆ ಬಂದನು. ಸೇನಾಧಿಕಾರಿಗಳು ಸುತ್ತಲೂ ನೆರೆದರು. ಆಗ ಆತನು ಸೇನಾಧಿಕಾರಿಗಳನ್ನು ಕುರಿತು "ತೋಟೆಗಳು ನಿರ್ದುಷ್ಟವಾಗಿವೆ. ನಾಳೆ ಮುಂಜಾನೆ ಎಲ್ಲರೂ ಡ್ರಿಲ್ಲಿನ ಬಯಲಿಗೆ ಬರಲೇಬೇಕು; ಮತ್ತು ತೋಟೆಗಳನ್ನು ಉಪಯೋಗಿಸಲೇಬೇಕು. ಇದಕ್ಕೆ ಒಪ್ಪದವರನ್ನು ಅಧಿಕಾರಿಗಳ ಆಜ್ಞೆಮೀರಿದ ತಪ್ಪುಗಾರರೆಂದು ತಿಳಿದು ಶಿಕ್ಷೆವಿಧಿಸಿ ಬ್ರಹ್ಮದೇಶಕ್ಕೋ ಚೀನಾದೇಶಕ್ಕೋ ಕಳುಹುವೆವು. ಅವರು ಅಲ್ಲಿಯೇ ಸಾಯಬೇಕಾಗುವುದು" ಎಂದು ಘನಗಂಭೀರವಾಗಿ ನುಡಿದು ತಿರುಗಿ ನಡೆದನು.

ಸೈನಿಕರೆಲ್ಲರು ತಮ್ಮ ತಮ್ಮ ನಿವಾಸಗಳಿಗೆ ನಡೆದರು; ಅಲ್ಲಿ ಹಳೆಯ ಮತ್ತು ಹೊಸತರದ ತೋಟೆಗಳನ್ನು ಪರೀಕ್ಷಿಸಿ ಅವುಗಳಲ್ಲಿ ತುಸು ಭೇದವಿದೆಯೆಂದು ನಿರ್ಣಯಿಸಿದರು. ಮನಸ್ಸಿನಲ್ಲಿ ಒಮ್ಮೆ ಭೇದಭಾವನೆ ಹುಟ್ಟಿದ ಬಳಿಕ ದೃಷ್ಟಿಗೆ ಭೇದ ತೋರುವುದಕ್ಕೆ ಹೆಚ್ಚು ಕಾರಣಗಳು ಬೇಕಾಗದಿರುವುದು ಸಹಜವೇ ಸರಿ. ಹಿಂದು ಮುಹಮ್ಮದೀಯರೆಲ್ಲರೂ "ಧರ್ಮಭ್ರಷ್ಟರಾಗುವೆವಲ್ಲ? ಸಮಾಜ ಬಾಹಿರರಾಗಿ ಪತಿತರಾಗಿ ಜೀವಿಸುವುದು ಹೇಗೆ? ಆರೇಳು ರೂಪಾಯಿಗಳ ನೌಕರಿಗಾಗಿ ಜನ್ಮವನ್ನೇ ವ್ಯರ್ಥಮಾಡಿಕೊಂಡು ಪರಲೋಕಸುಖಕ್ಕೂ ಎರವಾಗುವುದು ಎಂತಹ ಹೇಡಿತನ? ಎಂತಹ ನಾಚಿಕೆಗೇಡಿತನ? ತೋಟೆಗಳು ನೆಣಮಿಶ್ರಿತವಾಗಿರುವುದು ನಿಶ್ಚಯವೇ ಸರಿ. ಕಂಪನಿಯ ಸರಕಾರದ ಅಧಿಕಾರಿಗಳು ನಮ್ಮ ಧರ್ಮನಾಶಕ್ಕೆ ಹವಣಿಸುವುದರಲ್ಲಿಯೂ ಸಂಶಯವಿಲ್ಲ. ಇಲ್ಲವಾದರೆ ಅವರು ನಮ್ಮನ್ನು ಹೀಗೆ ಬಲಾತ್ಕಾರಪಡಿಸಲು ಕಾರಣವೇನಿದೆ?" ಎಂದು ಆಲೋಚಿಸಿದರು.

ಇತ್ತ ಸೇನಾಪತಿ ಮಿಚೆಲ್ ಸಾಹೇಬನು ತನ್ನ ಮನೆಗೆ ಹೊರಟನು. ಸೇನಾಧಿಕಾರಿಗಳ ಇದಿರಿಗೆ ಎಷ್ಟು ಧೈರ್ಯದಿಂದ ಎಷ್ಟು ಗಂಭೀರವಾಗಿ

ಮಾತಾಡಿದನೋ ಅಷ್ಟು ಧೈರ್ಯ-ಗಾಂಭೀರ್ಯಗಳು ನಿಜವಾಗಿ ಆತನ ಅಂತರಂಗದಲ್ಲಿರಲಿಲ್ಲ. ಕೈಕೆಳಗಿನ ಜನರು ಇದಿರಿಗೆ ನಿಂತಿರುವಾಗ ಅಧಿಕಾರಿಗಳಿಗೆ ಇಂತಹ ದರ್ಪವುಂಟಾಗುವುದು ಸಹಜವು. ಅವರು ತಮ್ಮ ದರ್ಪವನ್ನು ಸ್ಥಾಪಿಸುವುದಕ್ಕಾಗಿ ಒಳಗೆ ಇಲ್ಲದಿದ್ದರೂ ಹೊರಗೆ ಅಂತಹ ಧೈರ್ಯಗಾಂಭೀರ್ಯಗಳನ್ನು ತೋರಿಸಲೇಬೇಕಾಗುವುದು. ತಾನು ಸಿಟ್ಟಿನ ಭರದಲ್ಲಿ ಆಡಿದ ಮಾತುಗಳಿಂದ ಸೇನಾಧಿಕಾರಿಗಳ ಮನಸ್ಸಿನಲ್ಲಿ ಎಂತಹ ಕಲ್ಪನೆಯುಂಟಾಗಿರಬಹುದು? ಮೊದಲೇ ಉತ್ತೇಜಿತರಾಗಿದ್ದ ಸೈನಿಕರು ಎಂತೆಂತಹ ಅನರ್ಥಗಳಿಗೆ ಕಾರಣರಾಗುವರೋ? ಮುಂದೆ ಯಾವ ಮಾರ್ಗವನ್ನು ಅನುಸರಿಸಬೇಕು? ಇವೇ ಮುಂತಾದ ವಿಚಾರತರಂಗಗಳೊಡನೆ ಆಂದೋಲನ ಹೊಂದುತ್ತ ಸಾಹೇಬನು ಮನೆಯ ಹಾದಿಯನ್ನು ಹಿಡಿದನು.

ಸೂರ್ಯಾಸ್ತವಾಯಿತು; ರಾತ್ರಿಯ ಅಂಧಕಾರವು ದಶದಿಕ್ಕುಗಳಲ್ಲಿಯೂ ಭೂದೇವಿಯನ್ನು ಆಕ್ರಮಿಸಿ ಎಲ್ಲೆಲ್ಲಿಯೂ ತಾನೆತಾನಾಗಿ ವ್ಯಾಪಿಸಿತು. ಹೊರಗಿನ ಅಂಧಕಾರದಿಂದ ಮಿಚೆಲ್ ಸಾಹೇಬನ ಅಂತರಂಗದ ಭೀತಿ ಇಮ್ಮಡಿಸಿತು. ಎಂತು ಮಾಡಲಿ? ಏನು ಮಾಡಲಿ? ಎಂದು ಆಲೋಚಿಸುತ್ತಿರುವಾಗ ಆತನಿಗೊಂದು ಯುಕ್ತಿ ಹೊಳೆಯಿತು; ನಾಳೆ ಮುಂಜಾನೆ ಪದಾತಿ ಸೈನ್ಯವು ಡ್ರಿಲ್ಲಿಗೆ ಬರುವಾಗ ಅವರ ಸಂಗಡಲೇ ಅಶ್ವಬಲವೂ ತೋಫುಗಳೂ ಅಲ್ಲಿಗೆ ಬರಬೇಕೆಂದು ಅಪ್ಪಣೆ ಕಳುಹಿದನು. ಈ ವಾರ್ತೆ ಪದಾತಿದಳದವರಿಗೆ ತಿಳಿಯಲು ಹೆಚ್ಚು ಅವಕಾಶಬೇಕಾಗಲಿಲ್ಲ. ಸೇನಾಪತಿಯ ಕಾರ್ಯಕಲಾಪಗಳನ್ನೆಲ್ಲ ಬಹು ಸೂಕ್ಷ್ಮವಾಗಿ ನಿರೀಕ್ಷಿಸುತ್ತಿದ್ದ ಅವರು ಪರಕ್ಷಣದಲ್ಲಿಯೇ ಸಾಹೇಬನ ಈ ಅಪ್ಪಣೆಯನ್ನು ಕೇಳಿ ತಿಳಿದುಕೊಂಡರು. ಅಗ್ನಿಯಲ್ಲಿ ತುಪ್ಪವನ್ನೆರೆದಂತಾಯಿತು.

ಮಿಚೆಲ್ ಸಾಹೇಬನ ಮನಸ್ಸು ಇನ್ನೂ ಶಾಂತವಾಗಿರಲಿಲ್ಲ. ಮಲಗಿದರೆ ನಿದ್ರೆಬಾರದು. ರಾತ್ರಿಯ ಹನ್ನೆರಡು ಹೊಡೆಯಿತು. ಯಾರು ಯಾವಾಗ ಎಂತಹ ದುರ್ವಾರ್ತೆಯನ್ನು ತರುವರೋ ಎಂಬ ಸಂಶಯದಿಂದ ಆತನ ಕಣ್ಣುಗಳು ಮನೆಯ ಮುಂದಣ ಮಾರ್ಗದ ಕಡೆಗೇ ನೋಡುತ್ತಿದ್ದುವು. ಕಿವಿಗಳು ಸೇನಾನಿವಾಸದ ಕಡೆಯಿಂದ ಯಾವ ಧ್ವನಿ ಹೊರಡುವುದೋ ಎಂದು ಆಲಿಸಿ ಕೇಳುತ್ತಿದ್ದುವು. ಅಕಸ್ಮಾತ್ ಆ ಕಡೆಯಿಂದ ಬಹುಜನರು

ಜಯಘೋಷಮಾಡುತ್ತಿರುವ ಕೋಲಾಹಲವು ಕೇಳಿಬಂದಿತು. ಸಾಹೇಬನು ಗಾಬರಿಗೊಂಡು ಎದ್ದು ಕಿಡಕಿಯ ಬಳಿಗೆ ಬಂದು ಮತ್ತೊಮ್ಮೆ ಆಲಿಸಿದನು. ಸೈನಿಕರ ಜಯಘೋಷದ ಧ್ವನಿ ಸ್ಪಷ್ಟವಾಗಿ ಕೇಳಿಸಿತು. ಆತನು ಕೂಡಲೆ ರಣವೇಷದಿಂದ ಸಜ್ಜಿತನಾಗಿ ಸೇನಾನಿವಾಸಕ್ಕೆ ಹೊರಟನು. ಮೊದಲು ಅಶ್ವಬಲದ ಅಧಿಕಾರಿಯನ್ನು ಕಂಡು ಅಶ್ವಬಲವೂ ಗೋಲಂದಾಜ ಸೈನ್ಯವೂ ಪದಾತಿದಳದ ನಿವಾಸಕ್ಕೆ ಬರಬೇಕೆಂದು ಆಜ್ಞಾಪಿಸಿ ತಾನು ಮುಂದೆ ಹೊರಟನು. ದಾರಿಯಲ್ಲಿ ಸುಭೇದಾರನೊಬ್ಬನು ಇದಿರಿಗೆ ಬಂದು ಪದಾತಿದಳದವರು ಶಸ್ತ್ರಾಗಾರದ ಬಾಗಿಲು ಮುರಿದು ಒಳಸೇರಿ ಮದ್ದುಗುಂಡುಗಳನ್ನೂ ಶಸ್ತ್ರಾಸ್ತ್ರಗಳನ್ನೂ ಬಲತ್ಕಾರದಿಂದ ತೆಗೆದುಕೊಂಡು ಹೋಗಿರುವರೆಂದೂ ಈಗ ಅವರು ಜಯಘೋಷಮಾಡುತ್ತ ಹೊರಟಿದ್ದಾರೆಂದೂ ಸಾಹೇಬನಿಗೆ ಹೇಳಿದನು. ಸಾಹೇಬನು ಪದಾತಿದಳದ ನಿವಾಸಕ್ಕೆ ಬಂದಾಗ ಅಸಂಖ್ಯ ಸೈನಿಕರು ಸಾದಾ ಉಡುಗೆತೊಡುಗೆಗಳಲ್ಲಿದ್ದು ಕೈಯಲ್ಲಿ ತುಬಾಕಿಗಳನ್ನು ಹಿಡಿದು ಸಜ್ಜಾಗಿ ನಿಂತಿದ್ದರು. ಸಾಹೇಬನು ಬಂದುದನ್ನು ಕಂಡು ಹಲವರು ಜಯಘೋಷ ಮಾಡಿದರು. ಕೆಲವರು “ಹುಷಾರ! ಮುಂದೆ ಬಂದರೆ ಗುಂಡು ಹಾರುವುದು.” ಎಂದು ಕೂಗಿದರು. ಸಾಹೇಬನು ಬೆದರದೆ ಸೇನಾಧಿಕಾರಿಗಳನ್ನು ಕರೆಯುವ ಕಹಳೆಯನ್ನು (Officers' Call) ಮೊಳಗಿಸಿದನು. ಹಲವರು ಅಧಿಕಾರಿಗಳೂ ಸೈನಿಕರೂ ಬಂದು ಆತನ ಸುತ್ತಲೂ ನಿಂತರು. ಸಾಹೇಬನು ಇದೇನು ಗದ್ದಲವೆಂದು ಗರ್ಜಿಸಿದನು. ಅಷ್ಟರಲ್ಲಿ ಅಶ್ವಬಲವೂ ಗೋಲಂದಾಜರೂ ಸಜ್ಜಾಗಿ ಅಲ್ಲಿಗೆ ಬಂದರು. ಕುದುರೆಗಳ ಖುರಪುಟದ “ಟಪ್ ಟಪ್” ಸಪ್ಪಳವನ್ನೂ, ತೋಫಿನ ಗಾಡಿಗಳ ಚಕ್ರಗಳ “ಗಡಗಡ” ಧ್ವನಿಯನ್ನೂ ಆಲಿಸಿ ಸೈನಿಕರು ಶಾಂತರಾದರು, ಮಶಾಲಿನ ಬೆಳಕಿನಲ್ಲಿ ಅವರು ಅಶ್ವಬಲವನ್ನೂ ತೋಫುಗಳನ್ನೂ ನೋಡಿದರು.

ವಿಂಚೆಲ್ ಸಾಹೇಬನು ಸೇನಾಧಿಕಾರಿಗಳನ್ನು ಕುರಿತು :— “ಎಲ್ಲ ಸೈನಿಕರು ಈಗಿಂದೀಗ ತುಬಾಕಿಗಳನ್ನೂ ಶಸ್ತ್ರಾಸ್ತ್ರಗಳನ್ನೂ ಶಸ್ತ್ರಾಗಾರದಲ್ಲಿ ಒಯ್ದು ಇಡಬೇಕು. ಇಲ್ಲವಾದರೆ ಎಲ್ಲರನ್ನೂ ತೋಫಿನಬಾಯಿಗೆ ಕೊಟ್ಟು ಹಾರಿಸಿ ಬಿಡುವೆವು.” ಎಂದು ಗರ್ಜಿಸಿದನು.

ಸೇನಾಧಿಕಾರಿಗಳು “ತಾವು ಹಾಗೆ ದುಡುಕಬಾರದು. ಮೊದಲೇ

ಉನ್ಮತ್ತರಾದ ಸೈನಿಕರು ಅಶ್ವಬಲವನ್ನೂ ತೋಫುಗಳನ್ನೂ ನೋಡಿ ಭಯ ಭ್ರಾಂತರಾಗಿರುವರು. ಅವರು ಈಗ ಇಂತಹ ಆಜ್ಞೆಯನ್ನು ಪಾಲಿಸಲಿಕ್ಕಿಲ್ಲ. ಅಕಾರಣವಾಗಿ ಇಲ್ಲದ ಅತ್ಯಾಚಾರವು ಪ್ರಾರಂಭವಾಗಬಹುದು. ಅಶ್ವಬಲವೂ ತೋಫುಗಳೂ ತಿರುಗಿ ತಮ್ಮ ತಮ್ಮ ಸ್ಥಳಗಳಿಗೆ ಹೋಗಲಿ. ಈಗಿನ ಕ್ಷಣಿಕ ಸ್ಫೂರ್ತಿ ನಾಳೆಗೆ ಉಳಿಯಲಾರದು. ದಯವಿಟ್ಟು ತಾವು ತಟ್ಟನೆ ಇಂತಹ ಉಗ್ರ ಮಾರ್ಗವನ್ನು ಅನುಸರಿಸಕೂಡದು." ಎಂದು ಬಿನ್ನವಿಸಿಕೊಂಡರು.

ಮಿಚೆಲ್ ಸಾಹೇಬನು ಕ್ಷಣಕಾಲ ತಟಸ್ಥನಾಗಿ ನಿಂತು ವಿಚಾರ ಮಾಡಿದ ಬಳಿಕ ಆತನ ಅಪ್ಪಣೆಯಂತೆ ಅಶ್ವಬಲವೂ ತೋಫುಗಳೂ ತಿರುಗಿ ಹೋದುವು; ಸಾಹೇಬನೂ ಮರಳಿ ಮನೆಗೆ ಬಂದನು.

ಮಾರನೆಯ ದಿನದಿಂದ ಬಹರ್ಾಮಪುರದ ಸೇನಾನಿವಾಸದಲ್ಲಿ ಎಲ್ಲ ಕಾರ್ಯಕಲಾಪಗಳು ಮೊದಲಿನಂತೆ ವ್ಯವಸ್ಥಿತವಾಗಿ ನಡೆದುವು. ಸೈನಿಕರು ಯಾವ ಪ್ರೇರಣೆಯಿಂದ ಮೊದಲು ಇಷ್ಟು ಉತ್ತೇಜಿತರಾದರು? ಯಾವ ಪ್ರೇರಣೆಯಿಂದ ಪುನಃ ಶಾಂತರಾದರು? ಇದರ ಗೊತ್ತು ಗುರಿ ಯಾರಿಗೂ ಕೊನೆಗೂ ಹತ್ತಲಿಲ್ಲ. ಅನೇಕ ಸೈನಿಕರನ್ನೂ ಅಧಿಕಾರಿಗಳನ್ನೂ ಬಹು ಪರಿಯಿಂದ ಪರೀಕ್ಷಿಸಿದರೂ ಇದರ ನೆಲೆ ಹತ್ತಲಿಲ್ಲ. ಭವಿಷ್ಯದ ಮಹಾ ಕಲ್ಲೋಲದ ಪೂರ್ವಸಿದ್ಧತೆಯ ಪರೀಕ್ಷೆಗಾಗಿ ಇಂದು ಈ ಕಾರ್ಯ ನಡೆ ಯಿತೆಂದು ಕೆಲವರು ತರ್ಕಿಸಿದರು. ಕೆಲವು ದಿನಗಳಲ್ಲಿಯೇ ಸರಕಾರದವರು ಈ ಎಲ್ಲ ಸೈನಿಕರನ್ನು ಶಸ್ತ್ರಾಸ್ತ್ರಗಳನ್ನು ಸೆಳೆದುಕೊಂಡು ದಂಡಿನಿಂದ ಹೊರ ದೂಡುವರೆಂಬ ವಾರ್ತೆ ಸೇನಾನಿವಾಸದಲ್ಲೆಲ್ಲ ಹಬ್ಬಿತು. ಇಂತಿರುವಾಗ ಒಂದು ದಿನ ಅಕಸ್ಮಾತ್ ಈ ಸೈನಿಕರೆಲ್ಲರೂ ಬರಾಕಪುರಕ್ಕೆ ಹೊರಡ ಬೇಕೆಂದು ಸೇನಾಪತಿಯ ಅಪ್ಪಣೆಯಾಯಿತು. ಬರಾಕಪುರಕ್ಕೆ ಒಯ್ದು ತಮ್ಮೆಲ್ಲರನ್ನು ಬ್ರಹ್ಮದೇಶಕ್ಕೋ ಚಿನಾದೇಶಕ್ಕೋ ಕಳುಹುವರೆಂದು ಕೆಲ ವರೂ ಬರಾಕಪುರದಲ್ಲಿಯೇ ಎಲ್ಲರನ್ನೂ ತೋಫಿನಬಾಯಿಗೆ ಕೊಟ್ಟು ಬಿಡುವರೆಂದು ಮತ್ತೆ ಕೆಲವರೂ ಮಾತಾಡುತ್ತಿದ್ದರು. ಧರ್ಮಭಯದಿಂದ ಕಂಗೆಟ್ಟ ಸೈನಿಕರು ಮರಣಭಯದಿಂದ ದಿಙ್ಮೂಢರಾದರು.

---

# ನಾಲ್ಕನೆಯ ಪರಿಚ್ಛೇದ

## ಪಾಂಡೆಯ ಪರಾಜಯ

"Then they saw Mungul Pandy fall to the ground. At the last moment he had turned the muzzle to his breast and discharged it by the pressure of his foot."

—*Forrest.*



ಒಂದರ ಹಿಂದೊಂದರಂತೆ ಏಳೆಂಟು ದಿನಗಳು ಕಳೆದುಹೋದುವು. ದಿನಗಳು ಕಳೆದಂತೆ ಬರಾಕಪುರದ ಸೇನಾನಿವಾಸದಲ್ಲಿ ಅಸಮಾಧಾನವೂ ಹೆಚ್ಚುತ್ತ ನಡೆಯಿತು. ಒಂದು ದಿನ ಕಂಪನಿಯ ಸರಕಾರವು ಐದು ಸಾವಿರ ಯುರೋಪಿಯನ್ ಸೈನಿಕರನ್ನು ಕರೆತರುವುದಕ್ಕೆ ಹಡಗುಗಳನ್ನು ಕಳುಹಿರುವುದೆಂಬ ವಾರ್ತೆಬಂದಿತು. ಬರಾಕಪುರದ ಸೇನಾನಿವಾಸದಲ್ಲಿ ಅಂದಿನ ರಾತ್ರಿ ಒಬ್ಬನೂ ಹಾಸಿಗೆ ಹಾಸಿ ಮಲಗಲಿಲ್ಲ. "ಯುರೋಪಿಯನ್ ಸೈನಿಕರು ಬಂದು ತಮ್ಮನ್ನು ಬಲಾತ್ಕಾರದಿಂದ ಕ್ರೈಸ್ತಧರ್ಮಕ್ಕೆ ಸೇರಿಸುವರು; ಇಲ್ಲವೆ ಎಲ್ಲರನ್ನೂ ತೋಫಿನಬಾಯಿಗೆ ಕೊಟ್ಟುಬಿಡುವರು;" ಎಂದು ಮಾತಾಡಿಕೊಳ್ಳುತ್ತ ಅವರೆಲ್ಲರೂ ಅತ್ಯಂತ ಚಿಂತಾಕುಲರಾಗಿದ್ದರು.

ಬರಾಕಪುರದ ಸೇನಾನಿವಾಸದಲ್ಲುಂಟಾದ ಅಸಂತೋಷದ ವಾರ್ತೆ ಕಲಕತ್ತೆಗೆ ಮುಟ್ಟಿದೊಡನೆ ಈ ಅಸಮಾಧಾನವು ಯಾವ ಮೆಟ್ಟಿಗೆ ಮುಟ್ಟಬಹುದೆಂಬುದು ತಿಳಿಯದೆಂದೂ ಕೆಲವು ಯುರೋಪಿಯನ್ ಸೈನಿಕರು ಸಿದ್ಧರಾಗಿರುವುದು ಅತ್ಯವಶ್ಯವೆಂದೂ ಆಲೋಚಿಸಿ ಗವರ್ನರ್ ಜನರಲ್ ಕ್ಯಾನಿಂಗ್ ಸಾಹೇಬನು ರಂಗೂನಿನಿಂದ ಕೆಲವು ಯುರೋಪಿಯನ್ ಸೈನಿಕರನ್ನು ಕರೆದುತರುವುದಕ್ಕೆಂದು ಒಂದು ಹಡಗನ್ನು ಕಳುಹಿದ್ದನು. ಆ

ಸಮಯದಲ್ಲಿ ಕಲಕತ್ತೆಯಿಂದ ಮುನ್ನೂರು ಮೈಲು ದೂರದಲ್ಲಿ ಪಾಟಣಾದ ಸಮೀಪದಲ್ಲಿದ್ದ ದಿನಾಪುರದಲ್ಲಿ ಮಾತ್ರ ಒಂದು ಯುರೋಪಿಯನ್ ಸೇನಾ ದಳವಿದ್ದಿತು. ಕ್ಯಾನಿಂಗ್ ಸಾಹೇಬನ ಈ ಯೋಜನೆಯು ಬಂಗಾಲದ ಪ್ರಾಂತಿಕ ಸೇನಾಪತಿ ಹಿಯರ್ ಸೇ ಸಾಹೇಬನಿಗೂ ತಿಳಿದಿರಲಿಲ್ಲ ; ಆದರೆ ಬರಾಕಪುರಬರ್ಹಾಮಪುರಗಳ ಸೇನಾನಿವಾಸಗಳಲ್ಲಿಯ ಪ್ರತಿ ಸೈನಿಕನಿಗೂ ಒಂದಕ್ಕೆ ಹತ್ತಾಗಿ ಗೊತ್ತಾಗಿದ್ದಿತು.

ರಂಗೂನಿನಿಂದ ಹೊರಟ ಯುರೋಪಿಯನ್ ಸೈನ್ಯವು ಮಾರ್ಚ ೧೭ನೆಯ ತಾರೀಖಿಗೆ ಕಲಕತ್ತೆಗೆ ಮುಟ್ಟಿತು. ಅವರನ್ನು ಬರಾಕಪುರದಿಂದ ಎಂಟುಮೈಲು ದೂರದಲ್ಲಿದ್ದ ಚಿನ್ಸುರಾಕ್ಕೆ ಕಳುಹಿದರು. ಕಲಕತ್ತೆ ಬರಾಕ ಪುರಗಳ ನೆರೆಯ ಪ್ರದೇಶಗಳಲ್ಲಿ ಎಲ್ಲಿ ನೋಡಿದರಲ್ಲಿ "ಗೋರಾ ಲೋಕ ಆಯಾ; ಗೋರಾ ಲೋಕ ಆಯಾ." ಎಂಬುದೊಂದೇ ಮಾತು ಕೇಳಿ ಬರತೊಡಗಿತು. ಸೇನಾನಿವಾಸಗಳ ಸೈನಿಕರೂ ಸಾಮಾನ್ಯ ಜನತೆಯೂ ಯುರೋಪಿಯನ್ ಸೈನಿಕರ ಆಗಮನದ ಕಾರಣಗಳನ್ನು ಮನಸ್ಸಿಗೆ ತೋರಿದಂತೆ ವಿವೇಚಿಸತೊಡಗಿದುವು. ಸೈನಿಕರ ಮನಸ್ಸಿನಲ್ಲಿ ಅಸ್ಫುಟ ವಾಗಿದ್ದ ಧರ್ಮನಾಶ, ಪ್ರಾಣನಾಶಗಳ ಚಿಂತಾಗ್ನಿಯು ಈಗ ಪ್ರಜ್ವಲಿ ಸಿತು. ಮಾರ್ಚ ತಿಂಗಳ ೨೯ನೆಯ ತಾರೀಖಿನ ದಿನ ಮಧ್ಯಾಹ್ನ ಬರಾಕ ಪುರದ ಸೇನಾನಿವಾಸದಲ್ಲಿ ಭಯಂಕರ ಕೋಲಾಹಲವುಂಟಾಯಿತು.

ಮಂಗಲಸಿಂಹ ಪಾಂಡೆ ಎಂಬ ಒಬ್ಬ ತರುಣ ಸೈನಿಕನು ಬರಾಕಪುರದ ಸೇನಾನಿವಾಸದಲ್ಲಿದ್ದನು. ಆತನು ಶರೀರದಿಂದ ಸುದೃಢನು; ಮನಸ್ಸಿನಿಂದ ಬಹು ತೀಕ್ಷ್ಣನು; ಸದಾಚಾರಿ; ಧರ್ಮಿಷ್ಠ. ಆತನು ಸೈನ್ಯದಲ್ಲಿ ಸೇರಿ ಏಳು ವರುಷಗಳಾಗಿದ್ದುವು. ಸೇನಾಧಿಕಾರಿಗಳು ಇಂದಿನವರೆಗೆ ಆತನ ಕಾರ್ಯ ಕಲಾಪಗಳಲ್ಲಿ ದೋಷವನ್ನಾಗಲಿ ಅವಿಶ್ವಾಸವನ್ನಾಗಲಿ ಎಂದೂ ಕಂಡಿರಲಿಲ್ಲ. ದೂರ ದೇಶದ ಬೈರಾಗಿಯೊಬ್ಬನು ಆತನ ಮನೆಗೆ ಬಂದು ಎರಡು ದಿನ ವಾಗಿತ್ತು. ಇಂದು ಭಂಗಿಯ ಅಮಲಿನಲ್ಲಿರುವಾಗ ಯಾರೋ ಆತನಿಗೆ ಯುರೋಪಿಯನ್ ಸೈನಿಕರು ಬಂದಿರುವ ವಾರ್ತೆಯನ್ನು ತಿಳುಹಿದರು. ಕೂಡಲೆ ಆತನು ಉನ್ಮತ್ತನಾಗಿ ಭೋಲಾನಾಥನ ಹೆಸರಿನಿಂದ ಎರಡು ಲೋಟಾ ಭಂಗಿಯ ಪಾನಕವನ್ನು ಕುಡಿದು ರಣವೇಷದಿಂದ ಸಜ್ಜಿತನಾಗಿ

ಮನೆಯಿಂದ ಹೊರಗೆ ಬಂದು "ಬಂಧುಗಳೇ! ಧರ್ಮರಕ್ಷಣೆಗಾಗಿ ಸಿದ್ಧರಾಗಿರಿ. ದೇಶದ ಮಾನ ರಕ್ಷಣೆಗಾಗಿ ಮುಂದೆ ಬನ್ನಿರಿ" ಎಂದು ಒದರುತ್ತ ಸೇನಾನಿವಾಸದಲ್ಲಿ ಸಂಚರಿಸತೊಡಗಿದನು. ಒಬ್ಬ ಯುರೋಪಿಯನ್ ಅಧಿಕಾರಿಯು ಇದಿರಿಗೆ ಬರುವುದನ್ನು ಕಂಡು ತುಬಾಕಿಯನ್ನು ಹಾರಿಸಿದನು. ದೈವಯೋಗದಿಂದ ಗುರಿ ತಪ್ಪಿತು. ಮಂಗಲಸಿಂಹನು ಈ ರೀತಿ ಉನ್ಮತ್ತನಾಗಿ ಸಂಚರಿಸುತ್ತಿದ್ದ ಸ್ಥಳದಲ್ಲಿ ಜಳಸೆಯ ಪದಾತಿದಳದ ಒಹುಜನ ಸೈನಿಕರು ನಿಂತಿದ್ದರು. ಆದರೆ ಅವರಲ್ಲಿ ಯಾರೂ ಮುಂದೆ ಬಂದು ಆತನನ್ನು ಪ್ರತಿಬಂಧಿಸಲಿಲ್ಲ. ಒಬ್ಬ ಹವಾಲದಾರನು ಮಾತ್ರ ಓಡುತ್ತ ಲೆಫ್ಟಿನೆಂಟ್ ಬಗ್ ಸಾಹೇಬನ ಬಂಗಲೆಗೆ ಹೋಗಿ ಈ ಸಮಾಚಾರವನ್ನು ತಿಳುಹಿದನು. ಕೂಡಲೆ ಬಗ್ ಸಾಹೇಬನು ಸಾರ್ಜಂಟ್ ಮೇಜರ್ ಹಡಸನ್ನನನ್ನು ಕರೆದುಕೊಂಡು ರಣವೇಷದಲ್ಲಿ ಸಜ್ಜಾಗಿ ಕೈಯಲ್ಲಿ ಕತ್ತಿ, ತುಂಬಿದ ತುಬಾಕಿಗಳನ್ನು ಹಿಡಿದುಕೊಂಡು ಅಶ್ವಾರೂಢನಾಗಿ ಹೊರಟನು; ಪದಾತಿದಳದ ನಿವಾಸದ ಬಳಿಗೆ ಬಂದೊಡನೆ "ಎಲ್ಲಿ? ಆ ತಲೆತಿರುಕನು ಎಲ್ಲಿರುವನು?" ಎಂದು ಗರ್ಜಿಸುತ್ತ ಒಳಗೆ ಬಂದನು. ಈ ಪ್ರಶ್ನೆಗೆ ಬೇರೆ ಜನರು ಉತ್ತರ ಕೊಡಬೇಕಾಗಲಿಲ್ಲ. ತುಬಾಕಿಯ ಸಪ್ಪಳದೊಡನೆ ಬಗ್ ಸಾಹೇಬನು ಕುದುರೆಯಿಂದ ಉರುಳಿದನು; ಕುದುರೆಯು ಸತ್ತುಬಿದ್ದಿತು. ಕೂಡಲೆ ಬಗ್ ಸಾಹೇಬನು ಗುಂಡುಹಾರಿಸಿದನು; ಗುರಿತಪ್ಪಿತು. ಪರಕ್ಷಣದಲ್ಲಿಯೇ ಆತನೂ ಹಡಸನ್ ಸಾಹೇಬನೂ ಖಡ್ಗಗಳನ್ನು ಹಿರಿದು ಅಲ್ಲಿಯೇ ತೋಫಿನ ಗಾಡಿಯಮರೆಗೆ ನಿಂತಿದ್ದ ಮಂಗಲಸಿಂಹನ ಮೇಲೆ ಏರಿಹೋದರು. ಕೈಗೆ ಕೈಹತ್ತಿ ಯುದ್ಧಾರಂಭವಾಯಿತು. ಖಡ್ಗಯುದ್ಧದಲ್ಲಿ ಅತಿ ನಿಪುಣನಾದ ವೀರ ಮಂಗಲಸಿಂಹನು ತನ್ನ ಇಬ್ಬರೂ ವಿರೋಧಿಗಳನ್ನು ಬಲವಾದ ಏಟು ಕೊಟ್ಟು ನೆಲಕ್ಕೆ ಉರುಳಿಸಿದನು. ಇನ್ನೊಂದು ಅರೆ ನಿಮಿಷದಲ್ಲಿ ಇಬ್ಬರೂ ಹೋಳು ಹೋಳಾಗಿ ಬೀಳತಕ್ಕವರು. ಅಷ್ಟರಲ್ಲಿ ಶೇಖ ಪಲ್ಟು ಎಂಬ ಮಹಮ್ಮದೀಯ ಸೈನಿಕನೊಬ್ಬನು ಹಿಂದಿನಿಂದ ಬಂದು ಮಂಗಲಸಿಂಹನನ್ನು ಹಿಡಿದನು. ಆತನ ಕತ್ತಿತಾಗಿ ಪಲ್ಟುವಿಗೆ ಬಲವಾದ ಗಾಯವಾಯಿತು.

ಲೆಫ್ಟಿನೆಂಟ್ ಬಗ್ ಮತ್ತು ಸಾರ್ಜಂಟ್ ಮೇಜರ್ ಹಡಸನ್ ಇವರ ಮೈಯ ಬಟ್ಟೆಯೆಲ್ಲಾ ತೊಯ್ದು ರಕ್ತವು "ತಟ ತಟ" ಸೋರುತ್ತಿದ್ದಿತು.

ನಾಲ್ಕೈದುನೂರು ಜನರು ಸುತ್ತಲೂ ನಿಂತಿದ್ದರೂ ಯಾರೂ ತಟ್ಟನೆ ತಮ್ಮ ಸಹಾಯಕ್ಕೆ ಬಾರದಿರುವುದನ್ನು ಕಂಡು ಬಗ್ ಸಾಹೇಬನು ರೋಷದಿಂದ ಕಿಡಿಕಿಡಿಯಾದನು. ಆದರೆ ಮಾಡುವುದೇನು?

ಸಾಹೇಬರು ಅಲ್ಲಿಂದ ಹೊರಟು ಹೋದ ಬಳಿಕ ಉಳಿದ ಸೈನಿಕರು ಮಂಗಲಸಿಂಹನನ್ನು ಬಿಟ್ಟುಬಿಡೆಂದು ಪಲ್ಟುವನ್ನು ಆಗ್ರಹಪಡಿಸಿದರು. ಬಹುಜನರ ಆಗ್ರಹಕ್ಕೆ ಒಳಗಾಗಿ ಆತನು ಮಂಗಲಸಿಂಹನನ್ನು ಬಿಟ್ಟನು. "ಇಬ್ಬರು ಅಮಲದಾರರು ಕೂಡಿ ಒಬ್ಬ ಸಾಮಾನ್ಯ ಸೈನಿಕನನ್ನು ಎದುರಿಸಲಾರದೆ ಹೋದಬಳಿಕ ಇವರ ಯುದ್ಧನೈಪುಣ್ಯವೆಷ್ಟೆಂಬುದು ತಾನೇ ಕಂಡು ಬಂದಿತಲ್ಲವೇ? ಇಡೀ ಆಯುಷ್ಯವನ್ನೇ ಸೈನ್ಯದಲ್ಲಿ ಕಳೆದು ಕೂದಲು ಬೆಳ್ಳಗಾಗಿರುವ ದೇಶೀಯ ಸೈನಿಕ ಸುಭೇದಾರರ ಮೇಲೆ ಮೊನ್ನೆ ಹುಟ್ಟಿ ನಿನ್ನೆ ಕಣ್ಣುಬಿಟ್ಟ ಬಿಳಿಯ ಹಸುಗೂಸುಗಳನ್ನು ತಂದು ಲೆಫ್ಟಿನೆಂಟ್ ಕರ್ನಲ್ ಮುಂತಾದ ದೊಡ್ಡ ದೊಡ್ಡ ಅಧಿಕಾರಗಳಿಗೆ ನಿಯಮಿಸುವವರಿಗೂ ಬುದ್ಧಿಯಿಲ್ಲ; ಇವರಿಗೂ ಬುದ್ಧಿಯಿಲ್ಲ. ಏನು ಕೇಳಿದರೂ "ಡ್ಯಾಮ್; ನಿಗ್ರೋ! ಸುವರ; ಗದ್ದಾ!" ಇನ್ನೊಂದು ಅರೆಗಳಿಗೆ ತಡೆದಿದ್ದರೆ ಡ್ಯಾಮ್‌ಡ್ಯಾಮ್ ತಿಳಿಯುತ್ತಿದ್ದಿತು. ಮೂರ್ಖ ಕುಲಗೇಡಿ ಪಲ್ಟು ಎಲ್ಲವನ್ನೂ ಕೆಡಿಸಿದನು." ಎಂದೊಬ್ಬ ವೃದ್ಧ ಸೈನಿಕನು ತನ್ನೊಳಗೆ ತಾನೇ ಮಾತಾಡಿಕೊಂಡನು.

ಸೇನಾಪತಿ ಹಿಯರ್‌ಸೇ ಸಾಹೇಬನಿಗೆ ಮಂಗಲಸಿಂಹನ ಅತ್ಯಾಚಾರದ ವಾರ್ತೆ ತಿಳಿದ ಕೂಡಲೆ ಆತನು ರಣವೇಷವನ್ನು ಧರಿಸಿ ಅಶ್ವಾರೂಢನಾಗಿ ಹೊರಟನು. ಆತನ ಇಬ್ಬರು ಮಕ್ಕಳು ತಂದೆಯನ್ನು ಅನುಸರಿಸಿ ಬಂದರು. ಸಾಹೇಬನು ಸೈನ್ಯದ ಅಧಿಕಾರಿಗಳನ್ನು ಸಂಗಡಕರೆದುಕೊಂಡು ಮಂಗಲಸಿಂಹನ ಬಳಿಗೆ ಸಾಗಿದನು. "ಆತನ ಕೈಯಲ್ಲಿ ತುಂಬಿದ ತುಬಾಕಿ ಇದೆ." ಎಂದೊಬ್ಬನು ಕೂಗಿದನು. ಮಂಗಲಸಿಂಹನೂ ತುಬಾಕಿಯನ್ನು ಎತ್ತಿದನು. ಕೂಡಲೆ ಸೇನಾಪತಿಯು ತನ್ನ ಮಕ್ಕಳನ್ನು ಕುರಿತು:—"ನಾನು ಈತನ ಗುಂಡಿನಿಂದ ಸತ್ತುಬಿದ್ದರೆ ನೀವಾದರೂ ಈತನಸೇಡು ತೀರಿಸಿಕೊಳ್ಳಬೇಕು." ಎಂದನು. ಪರಕ್ಷಣದಲ್ಲಿಯೇ ತುಬಾಕಿಯು ಹಾರಿತು. ಮಂಗಲಸಿಂಹನು ನೆಲಕ್ಕೆ ಉರುಳಿದನು. ಸೈನಿಕರೊಬ್ಬರೂ ತನ್ನ ನೆರವಿಗೆ ಬಾರದಿರುವದನ್ನು ಕಂಡು ಆತನು ತನ್ನ ತುಬಾಕಿಯನ್ನು ಎದೆಗೆ ಆನಿಸಿಕೊಂಡು ಕಾಲಬೆರಳು

ಗಳಿಂದ ಅದರ ಕಿವಿಯನ್ನು ಒತ್ತಿ ಹಾರಿಸಿದ್ದನು. ಆದರೆ ಆ ಗುಂಡಿನಿಂದ ಮಂಗಲಸಿಂಹನು ಮೃತನಾಗಿರಲಿಲ್ಲ. ಸೇನಾಪತಿಯು ಹೊತ್ತಿ ಉರಿಯು ತ್ತಿರುವ ಆತನ ಬಟ್ಟೆಯ ಬೆಂಕಿಯನ್ನು ಆರಿಸಿ ಆತನನ್ನು ವೈದ್ಯದ ಡಾಕ್ಟರನ ವಶಕ್ಕೆ ಒಪ್ಪಿಸಿದನು.

ಬಹರ್ಾಮಪುರದಿಂದ ತನ್ನ ಸೈನಿಕರೊಡನೆ ಹೊರಟ ಸೇನಾಪತಿ ಮಿಚೆಲ್‌ಸಾಹೇಬನು ಬರಾಕಪುರಕ್ಕೆ ಸಮೀಪಿಸಿದಾಗ ಪ್ರಾಂತಿಕ ಸೇನಾ ಪತಿ ಹಿಯರ್‌ಸೇ ಸಾಹೇಬನು ಬರಾಕಪುರದ ಸೈನಿಕರನ್ನೆಲ್ಲ ಸಂಗಡ ಕರೆದು ಕೊಂಡು ಒಂದು ಮೈಲು ಮುಂದೆ ಬಂದು ಮಿಚೆಲ್ ಸಾಹೇಬನ ಸೈನ್ಯವನ್ನು ಇದಿರುಗೊಂಡನು. ಹಿಯರ್‌ಸೇ ಸಾಹೇಬನು ಬಹರ್ಾಮಪುರದ ಸೈನಿಕರ ಆಯುಧಗಳನ್ನು ಸೆಳೆದುಕೊಂಡು ಅವರನ್ನು ಸೈನ್ಯದಿಂದ ಹೊರದೂಡ ಬೇಕೆಂಬ ಗವರ್ನರ್‌ಜನರಲನ ಅಪ್ಪಣೆಯನ್ನು ಓದಿ ಹೇಳಿದನು. ಬಳಿಕ ಸೇನಾ ಪತಿಯ ಆಜ್ಞೆಯಂತೆ ಪ್ರತಿಸೈನಿಕನೂ ಇದಿರಿಗೆ ಬಂದು ತನ್ನ ಆಯುಧಗಳ ನ್ನಿಟ್ಟುಹಿಂದೆ ಹೋಗಿ ಸಾಲಿನಲ್ಲಿ ನಿಂತನು. ಈ ರೀತಿ ಶಸ್ತ್ರಸಂನ್ಯಾಸಕಾರ್ಯವು ಮುಗಿದಬಳಿಕ ಅವರೆಲ್ಲರೂ ಸಾಲಾಗಿ ಹೊರಡಬೇಕೆಂದು ಅಪ್ಪಣೆಯಾಯಿತು. ಸ್ವಲ್ಪದೂರ ಹೋದಬಳಿಕ ಸಂಬಳ ಹಂಚುವ ಹವಾಲದಾರನು ಬಂದು ಅವರ ವರಿಗೆ ಸಲ್ಲ ಬೇಕಾದ ಹಣವನ್ನು ಹಂಚಿದನು. ಆ ಮೇಲೆ ಹಿಯರ್ ಸೇ ಸಾಹೇಬನು ಮುಂದೆ ಬಂದು “ ಇನ್ನಾದರೂ ನಿಮ್ಮ ಧರ್ಮನಾಶದ ಭೀತಿ ದೂರಾಯಿತಷ್ಟೇ ? ನೀವು ದಾರಿಯಲ್ಲಿ ಯಾವತರದ ತೊಂದರೆಯನ್ನೂ ಕೊಡದೆ ಸೇನಾಪತಿಯ ಆಜ್ಞೆಯನ್ನುಪಾಲಿಸಿದುದಕ್ಕಾಗಿ ನಿಮಗೆ ಈ ಹಣವು ಕೊಡಲ್ಪಟ್ಟಿದೆ. ಇನ್ನುಮೇಲೆ ನೀವು ನಿಮ್ಮ ಮನಸ್ಸು ಬಂದತ್ತ ಹೋಗ ಬಹುದು. ಜಗನ್ನಾಥಪುರಿ ಕಾಶಿ ರಾಮೇಶ್ವರಗಳ ಯಾತ್ರೆಮಾಡಿ ನಿಮ್ಮ ಪಾಪವನ್ನು ತೊಳೆದುಕೊಂಡು ಪುನೀತರಾಗಬಹುದು. ” ಎಂದು ಹೆಚ್ಚಿನ ದೊಂದು ಮೈ ಉರಿಯುವ ಮಾತಾಡಿ ಎಲ್ಲರಿಗೂ ಅಪ್ಪಣೆ ಕೊಟ್ಟನು. ಅವರಲ್ಲಿ ೪೦೦ ಜನ ಬ್ರಾಹ್ಮಣರೂ ೧೫೦ ಜನ ರಜಪೂತರೂ ಇದ್ದರು.

ಔಷಧೋಪಚಾರಗಳಿಂದ ಮಂಗಲಸಿಂಹನ ಗಾಯವು ಮಾಣ್ದಬಳಿಕ ಲಷ್ಕರೀ ಕಾಯದೆಯಂತೆ ವಿಚಾರಣೆ ನಡೆಯಿಸಿ ಆತನಿಗೆ ಶಿಕ್ಷೆಯನ್ನು ವಿಧಿಸಿ ದರು. ಎಪ್ರಿಲ್ ತಿಂಗಳ ೭ನೆಯ ತಾರೀಖಿನ ದಿನ ಎಲ್ಲ ಸೈನಿಕರ ಇದಿರಿಗೆ

ಆತನನ್ನು ಕೊಲೆಗಲ್ಲಿಗೆ ಏರಿಸಿದರು. ೧೮೫೭ನೆಯ ಇಸವಿಯ ಸಿಪಾಯಿ ದಂಗೆಯ ಯಜ್ಞಾಗ್ನಿಯ ಮೊದಲನೆಯ ಆಹುತಿಯಿದು. ಮಂಗಲಸಿಂಹನ ವಿಚಾರಣೆ ನಡೆದಾಗ ಅಂದು ಆತನ ಬಿಡಾರಕ್ಕೆ ಬಂದಿದ್ದ ಬೈರಾಗಿಯ ವಿಚಾರವೂ ಹೊರಟಿತು. ಅಧಿಕಾರಿಗಳು ಹಲವು ವಿಧದಿಂದ ಶೋಧನ ನಡೆಯಿಸಿದರೂ ಆತನ ನೆಲೆ ಹತ್ತಲಿಲ್ಲ. ಸರಕಾರದ ದೃಷ್ಟಿಯಿಂದ ಮಂಗಲ ಸಿಂಹನು ಮಹಾಪರಾಧಿಯಾಗಿದ್ದರೂ ಮಿಕ್ಕ ಸೈನಿಕರ ದೃಷ್ಟಿಯಿಂದ ಆತನು ಹುತಾತ್ಮನೆನಿಸಿಕೊಂಡನು.

ಮಂಗಲಸಿಂಹನ ಮರಣದಂಡನೆಯಿಂದಲೂ ಬರ್ಹಾಮಪುರದ ೧೯ನೆಯ ದಳದವರನ್ನು ದಂಡಿಸಿಂದ ಹೊರದೂಡುವುದರಿಂದಲೂ ಸರಕಾರದವರು ಯಾವುದನ್ನು ಕೋರಿದ್ದರೋ ಅದು ಸಾಧಿಸಲೇ ಇಲ್ಲ. ಸೈನಿಕರ ಮನಸ್ಸಿನಲ್ಲಿ ಭೀತಿಯನ್ನು ಹುಟ್ಟಿಸಿ ತಮ್ಮ ಅಧಿಕಾರದರ್ಪಗಳ ಬಲದಿಂದ ಅವರನ್ನು ಬಗ್ಗಿಸಬೇಕೆಂಬ ಅಧಿಕಾರಿಗಳ ಕೋರಿಕೆಗೆ ತೀರವಿರುದ್ಧ ಪರಿಣಾಮವಾಯಿತು. ಮಂಗಲಸಿಂಹನನ್ನು ಕೊಲೆಗಲ್ಲಿಗೇರಿಸಿದ ಕೆರೆಯ ದಂಡೆಯ ಪ್ರದೇಶವನ್ನು ಸೈನಿಕರು ಪವಿತ್ರಸ್ಥಾನವೆಂದು ತಿಳಿದರು. ಆತನು ನೀರು ಕುಡಿಯುತ್ತಿದ್ದ ಲೋಟೆಯನ್ನು ಅಲ್ಲಿಟ್ಟು ಪೂಜಿಸತೊಡಗಿದರು. ಸೈನಿಕರ ಉಡುಪಿನಲ್ಲಿ ಬರಾಕಪುರದಿಂದ ಹೊರಟ ಜನರು ಹಲವು ಸೇನಾನಿವಾಸಗಳಿಗೆ ಹೋಗಿ ನೆಣಮಿಶ್ರಿತ ತೋಟೆಗಳ ಸುದ್ದಿಗೆ ಉಪ್ಪುಕಾರ ಬೆರೆಸಿ ಹೇಳಿದರು. ಧರ್ಮರಕ್ಷಣೆಗಾಗಿ ಜೀವದ ಹಂಗನ್ನು ತೊರೆದು ಯುದ್ಧಕ್ಕೆ ಸಿದ್ಧರಾಗಿರೆಂದು ಹೋದಹೋದಲ್ಲಿ ಸಾರಿದರು. ಇವರು ಸ್ವಾರ್ಥತ್ಯಾಗಿಗಳೂ ಧರ್ಮವೀರರೂ ದೇಶಭಕ್ತರೂ ಎಂದು ಪ್ರಸಿದ್ಧರಾದರು. ಮುಂದೆ ಕೆಲವು ದಿನಗಳಲ್ಲಿಯೇ ಬರಾಕಪುರದ ೩೪ನೆಯ ದಳದವರೂ ಲಕನೌವಿನಲ್ಲಿಯ ೭ನೆಯ ದಳದವರೂ ನೌಕರಿಬಿಟ್ಟು ಇದೇ ದಾರಿಯನ್ನು ಹಿಡಿಯಬೇಕಾಯಿತು. ಕೆಲವರು ತಂತ್ರಗಾರರು ಮಂದಗತಿಯಿಂದ ಅಪ್ರತ್ಯಕ್ಷವಾಗಿ ಜನತೆಯಲ್ಲಿಯೂ ಸೇನಾನಿವಾಸಗಳಲ್ಲಿಯೂ ಹರಡುತ್ತಿದ್ದ ಧರ್ಮನಾಶದ ಸುದ್ದಿಯನ್ನು ವಿದ್ಯುದ್ವೇಗದಿಂದ ಪ್ರತ್ಯಕ್ಷವಾಗಿ ಹಬ್ಬಿಸಲು ಈ ಸೈನಿಕರು ನೆರವಾದರು. ದೇಶದ ತುಂಬ ದಾವಾನಲವು ಪಸರಿಸಿತು.

---

# ಐದನೆಯ ಪರಿಚ್ಛೇದ

## ಮೀರತ ವಿಜಯ

" The consigning the eighty-five prisoners after such a ceremony to the jail..was..a folly that is inconceivable. No act of folly could have led to results more fatal. "

—*Forrest.*



ಪುರಾತನ ಪ್ರಸಿದ್ಧವಾಗಿ ಯುಗ ಯುಗಾಂತರಗಳಿಂದಲೂ ಭರತ ಖಂಡದ ರಾಜಧಾನಿಯೆನಿಸಿಕೊಂಡಿದ್ದ ದಿಲ್ಲೀ ನಗರದ ಪೂರ್ವಕ್ಕೆ ಸುಮಾರು ಮೂವತ್ತಾರು ಮೈಲು ದೂರದಲ್ಲಿ ಮೀರತನಗರವಿರುವುದು. ಈ ಸಮಯದಲ್ಲಿ ಮೀರತದಲ್ಲಿ ಸುಮಾರು ೧೮೫೦ ಜನ ಯುರೋಪಿಯನ್ ಸೈನಿಕರೂ ಮೂರುಸಾವಿರ ದೇಶೀಯ ಸೈನಿಕರೂ ಇರುತ್ತಿದ್ದರು. ಮೊಗಲ್ ಬಾದಷಹರ ರಾಜಧಾನಿಯ ಮೇಲೆ ದೃಷ್ಟಿಯನ್ನಿಟ್ಟೇ ಈ ಸೇನಾಶಿಬಿರವು ಸ್ಥಾಪಿತವಾಗಿದ್ದಿತು.

೧೮೫೭ನೆಯ ಇಸವಿಯ ಏಪ್ರಿಲ್ ತಿಂಗಳ ಕೊನೆಯ ವಾರದಲ್ಲಿ ಒಂದು ದಿನ ಮಧ್ಯಾಹ್ನ ಸಮಯದಲ್ಲಿ ಆನೆಕುದುರೆಗಳಿಂದಲೂ ಮಹಾಜನ ಸಮ್ಮರ್ದದಿಂದಲೂ ಘೋರ್ಗರೆವ ವಾದ್ಯಧ್ವನಿಯಿಂದಲೂ ಕೂಡಿದ ಮೆರೆವಣಿಗೆಯೊಂದು ಮೀರತ ನಗರಕ್ಕೆ ಬಂದಿತು. ವಿಚಾರಾಂತ್ಯದಲ್ಲಿ ಭಗವದಾಜ್ಞಾನುಸಾರವಾಗಿ ಹಿಮಾಲಯದಿಂದ ಹೊರಟ ಮಹಾಪುರುಷನೊಬ್ಬನು ತೀರ್ಥಯಾತ್ರೆಗೆ ನಡೆದಿರುವನೆಂದೂ ಬಹುಜನಭಕ್ತರು ಆತನನ್ನು ಹಿಂಬಾಲಿಸಿರುವರೆಂದೂ ತಿಳಿದುಬಂದಿತು. ಮಹಾಪುರುಷನು ಆನೆಯ ಮೇಲೆ ಅಂಬಾರಿಯಲ್ಲಿ ಕುಳಿತಿದ್ದನು; ಬಹುಜನ ಸವಾರರೂ ಸೇವಕರೂ ಅಸಂಖ್ಯಜನರೂ ಆತನನ್ನು ಅನುಸರಿಸಿದ್ದರು. ಮೆರೆವಣಿಗೆಯು ಸೇನಾನಿವಾಸಕ್ಕೂ ನಗರಕ್ಕೂ ನಡುವೆ ದಂಡಿನವರಿಗೆ ಸರಕನ್ನು ಒದಗಿಸುವ ಸಾಲಂಗಡಿಗಳ ಕೊನೆಯಲ್ಲಿದ್ದ ವಿಶಾಲವಾದ ಒಂದು ಆಲದಮರದ ಕೆಳಗೆ ಬಂದು ನಿಂತಿತು. ಅಲ್ಲಿಯೆ ನಿರ್ಮಿತವಾದ ವಿಶಾಲವಾದ ಪಟಗೃಹಗಳಲ್ಲಿ ಎಲ್ಲರೂ ಇಳಿದುಕೊಂಡರು. ಬಹುಜನಭಕ್ತರು

ಸೇನಾನಿವಾಸದಿಂದಲೂ ನಗರದಿಂದಲೂ ಪ್ರತಿದಿನ ಬಂದು ಮಹಾಪುರುಷನ ದರ್ಶನದಿಂದ ಪುನೀತರಾಗುತ್ತಿದ್ದರು. ಆತನ ಅನುಯಾಯಿಗಳು ಭಿಕ್ಷೆಗೂ ಬೇರೆ ಕೆಲಸಕ್ಕಾಗಿಯೂ ಸೇನಾನಿವಾಸಕ್ಕೂ ನಗರಕ್ಕೂ ಆಗಾಗ ಹೋಗಿ ಬರುತ್ತಿದ್ದರು. ಅವರನ್ನು ಯಾರೂ ಹೇಗೂ ಆತಂಕಪಡಿಸಲಿಲ್ಲ.

ಇಂತಿರುವಾಗ ಮೀರತದ ಸೇನಾನಿವಾಸಕ್ಕೆ ಸರಕು ಪೂರೈಸುವ ಸಾಲಂಗಡಿಗಳಲ್ಲಿಯ ಗೋದಿಯ ಹಿಟ್ಟಿನಲ್ಲಿ ಎಲುಬಿನಪುಡಿಯನ್ನು ಕೂಡಿಸಿರುವರೆಂದೂ ಸಾರ್ವಜನಿಕ ಬಾವಿಗಳಲ್ಲಿ ಮಾಂಸದ ಕರಣೆಗಳನ್ನು ಒಗೆದಿರುವರೆಂದೂ ಜನರು ಮಾತಾಡತೊಡಗಿದರು. ನಗರದ ಜನರೂ ಸೈನಿಕರೂ ಅತ್ಯಂತ ಉದ್ವಿಗ್ನರಾದರು. ಕೊನೆಗೆ ಈ ಎಲ್ಲ ದೋಷವು ಕಂಪನಿಯ ಸರಕಾರದ ಮೇಲೆ ಬಂದಿತು. ಅವರೇ ಈ ತರದ ಕುಯುಕ್ತಿಯಿಂದ ಜನರ ಧರ್ಮನಾಶಕ್ಕೆ ತೊಡಗಿರುವರೆಂದು ಎಲ್ಲರೂ ತರ್ಕಿಸಿದರು. ಧರ್ಮಾಂಧರಾದ ಹಿಂದು ಮುಸಲ್ಮಾನರೆಲ್ಲರೂ ಒಂದಾಗಿ ಇದಕ್ಕೆ ಪ್ರತೀಕಾರವೇನು ? ಎಂದು ಚಿಂತಿಸ ತೊಡಗಿದರು. ಸೈನಿಕರಲ್ಲಿಯೂ ಜನರಲ್ಲಿಯೂ ಅಸಂತೋಷವು ಮಿತಿಮೀರಿದುದನ್ನು ಕಂಡ ಮೀರತದ ಅಧಿಕಾರಿಗಳಿಗೆ ಹಿಂದೆ ಹೇಳಿದ ತೀರ್ಥಯಾತ್ರೆಗಾಗಿ ಹೊರಟ ಮಹಾಪುರುಷನ ಮತ್ತು ಆತನ ಅನುಯಾಯಿಗಳ ವಿಷಯದಲ್ಲಿ ಸಂಶಯವುಂಟಾಯಿತು. ಆತನ ಪ್ರವಾಸವು ಮುಂದೆ ಸಾಗಬೇಕೆಂದು ಸರಕಾರದ ಅಪ್ಪಣೆಯಾಯಿತು. ಅಕಸ್ಮಾತ್ ಒಂದು ದಿನ ರಾತ್ರಿ ಬೆಳಗಾಗುವಷ್ಟರಲ್ಲಿ ಅವರೆಲ್ಲರೂ ಅದೃಶ್ಯರಾಗಿಬಿಟ್ಟರು. ಆನೆ ಕುದುರೆಗಳೂ ಕೆಲವು ಸಾಮಾನುಗಳೂ ಮಾತ್ರ ಅಲ್ಲಿ ಉಳಿದುವು. ಜನರು ಭಯಭ್ರಾಂತರಾದರು. ಅವಿವೇಕಿಗಳಿಗೆ ಇದೂ ಒಂದು ಅನುಕೂಲವೇ ಆಯಿತು. ಅವರು ಆ ಮಹಾಪುರುಷನನ್ನೂ ಆತನ ಅನುಯಾಯಿಗಳನ್ನೂ ಯುರೋಪಿಯನ್ ಸೈನಿಕರು ಸೇನಾನಿವಾಸಕ್ಕೆ ಒಯ್ದು ಹೂಳಿಬಿಟ್ಟರೆಂದು ಸುದ್ದಿಯನ್ನು ಹುಟ್ಟಿಸಿದರು. ಒಟ್ಟಿಗೆ ಸೈನಿಕರ ಮತ್ತು ಸಾಮಾನ್ಯ ಜನರ ಮನಸ್ಸನ್ನು ಕೆಡಿಸಿ ಕಂಪನಿಯ ಸರಕಾರದ ವಿರುದ್ಧ ಅತ್ಯಾಚಾರ ನಡೆಯಿಸುವುದಕ್ಕೆ ಅವರನ್ನು ಪ್ರೇರಿಸುವುದಕ್ಕೆ ಏನೇನುಬೇಕೋ ಅವೆಲ್ಲವೂ ನಡೆದಂತಾಯಿತು. ಈ ವಿಷಯದಲ್ಲಿ ಬ್ರಹ್ಮಾವರ್ತದ ಪೇಶವೆ ನಾನಾಸಾಹೇಬನ ಮತ್ತು ಆತನ ಅನುಯಾಯಿಗಳ ಸಂಬಂಧವಿದೆಯೆಂದೂ ಹಲವರು ತರ್ಕಿಸಿದರು.

೧೮೫೭ನೆಯ ಇಸವಿಯ ಪ್ರಾರಂಭದಲ್ಲಿ ನಾನಾಸಾಹೇಬನು ಬ್ರಹ್ಮಾವರ್ತದಿಂದ ಹೊರಟು ಉತ್ತರ ಹಿಂದುಸ್ತಾನದ ಬೇರೆ ಬೇರೆ ಕಡೆಗಳಲ್ಲಿ ಸಂಚರಿಸಿ ಬಂದನು. ಮೊದಲು ಕಾಲ್ಪಿಗೂ ತರುವಾಯ ದಿಲ್ಲಿಗೂ ಹೋಗಿ ಎಪ್ರಿಲ್ ತಿಂಗಳ ೧೮ನೆಯ ತಾರೀಖಿಗೆ ಲಕನೌವಿಗೆ ಬಂದು ಮುಂದೆ ಕಾನಪುರಕ್ಕೆ ಹೋಗಿದ್ದನು. * ದಾರಿಯಲ್ಲಿ ವೀರತಕ್ಕೂ ದರ್ಶನಕೊಟ್ಟಿದ್ದನು. ಆದರೆ ಆತನು ಕಂಪನಿಯ ಸರಕಾರದ ವಿರುದ್ಧ ಯಾವ ಕಾರ್ಯಗಳನ್ನು ಮಾಡಿದನೆಂಬ ಒಗ್ಗೆ ಆಧಾರವಿಲ್ಲ. ಆ ಕಾಲದಲ್ಲಿ ಸರ್ ಹೆನರಿ ಲಾರೆನ್ಸನು ಅಯೋಧ್ಯೆಯ ಕಮೀಷನರನಾಗಿದ್ದನು. ಆತನು ಲಕನೌವಿನಲ್ಲಿ ಪೇಶವೆಗೆ ಚೆನ್ನಾಗಿ ಆದರಸತ್ಕಾರ ಮಾಡಿದ್ದಲ್ಲದೆ ಆತನಿಗೆ ಆವಶ್ಯಕ ಸಹಾಯ ಮಾಡಬೇಕೆಂದು ಎಲ್ಲ ಸರಕಾರಿ ಅಧಿಕಾರಿಗಳಿಗೆ ತಿಳುಹಿದ್ದನು. ಆ ಅಪ್ಪಣೆಯಂತೆ ಅಧಿಕಾರಿಗಳು ನಾನಾಸಾಹೇಬನು ಹೋದ ಹೋದಲ್ಲಿ ಆದರಪೂರ್ವಕವಾಗಿ ಉಪಚರಿಸಿ ಕಳುಹಿದರು. ನಾನಾಸಾಹೇಬನ ಈ ಸಂಚಾರಕ್ಕೂ ಕಂಪನಿಯ ಸರಕಾರದ ವಿರುದ್ಧ ಹುಟ್ಟಿದ ಪ್ರವಾದಗಳಿಗೂ ಸಂಬಂಧವುಂಟಾದುದು ಹಿಂದಿನಿಂದ. ಸರಕಾರದ ವಿರುದ್ಧ ಉತ್ತೇಜಿತರಾದ ಜನರಲ್ಲಿ ಪರಸ್ಪರ ಸಂಘಟನೆ ಮಾಡಿ ಕೆಲವರು ಸೈನಿಕರ ಕೋಲಾಹಲಕ್ಕೆ ರಾಜ್ಯಕ್ರಾಂತಿಯ ಸ್ವರೂಪವನ್ನು ಕೊಡುವುದಕ್ಕಾಗಿಯೂ ಸಾಮಾನ್ಯಜನತೆಯ ಮತ್ತು ಸೇನಾನಿವಾಸಗಳಲ್ಲಿಯ ಸ್ಥಿತಿಗತಿಗಳನ್ನೂ ಯುದ್ಧೋಪಕರಣಗಳ ಸಂಗ್ರಹವು ಎಲ್ಲೆಲ್ಲಿ ಹೆಚ್ಚಾಗಿ ಇರುವುದೆಂಬುದನ್ನೂ ಸಂಗ್ರಾಮದ ಸಂದರ್ಭದಲ್ಲಿ ಆವಶ್ಯಕ ಆಶ್ರಯಸ್ಥಾನಗಳಾದ ಭದ್ರವಾದದುರ್ಗಗಳು ಎಲ್ಲೆಲ್ಲಿ ಇರುವುವೆಂಬುದನ್ನೂ ತಿಳಿದುಕೊಳ್ಳುವುದಕ್ಕಾಗಿಯೂ ಆತನು ಸಂಚರಿಸುತ್ತಿದ್ದನೆಂದು ಕಾನಪುರದಲ್ಲಿ ಕ್ರಾಂತಿಯಾದ ಬಳಿಕ ಕಂಪನಿಯ ಸರಕಾರದ ಅಧಿಕಾರಿಗಳು ನಿರ್ಣಯಿಸಿದರು.

ಎಪ್ರಿಲ್ ತಿಂಗಳ ೨೩ನೆಯ ತಾರೀಖಿನ ದಿನ ಹೀರಾಸಿಂಗನೆಂಬ ವೃದ್ಧ ಹವಾಲದಾರನೊಬ್ಬನು ವೀರತದ ಸೇನಾಪತಿಯ ಬಳಿಗೆ ಬಂದು "ಎಲ್ಲ ಸೈನಿಕರು ಅಸಂತುಷ್ಟರಾಗಿರುವರೆಂದೂ ಹೊಸತರದ ತೋಟೆಗಳನ್ನು ಉಪಯೋಗಿಸಲು ಅವರು ಸಮ್ಮತಿಸುವುದಿಲ್ಲವೆಂದೂ ನಾಳೆಗೆ ಗೊತ್ತಾಗಿರುವ ಡ್ರಿಲ್ಲಿನ ಯೋಜನೆಯನ್ನು ಸದ್ಯಕ್ಕೆ ನಿಲ್ಲಿಸಬೇಕೆಂದೂ ಅರಿಕೆಮಾಡಿಕೊಂಡನು.

*Kayee's Sepoy War vol : I P. 578.

ಒಪ್ಪೆ ಕೊಟ್ಟ ಅಪ್ಪಣೆಯನ್ನು ಬದಲಾಯಿಸುವುದರಿಂದ ತಮ್ಮ ಅಧಿಕಾರದ ದರ್ಪಕ್ಕೆ ಕೊರತೆ ಬಂದು ಸೈನ್ಯದ ಶಿಸ್ತಿಗೆ ಬಾಧೆಯುಂಟಾಗುವುದೆಂಬ ವಿಚಾರದಿಂದ ಅಶ್ವಬಲದ ೬ ವಿಭಾಗಗಳಿಂದ ೯೦ ಜನರಾದರೂ ಡ್ರಿಲ್ಲಿನಬಯಲಿಗೆ ಬರಲೇಬೇಕೆಂದು ಗೊತ್ತಾಯಿತು. ಸೇನಾಧಿಕಾರಿಯ ಅಪ್ಪಣೆಯಂತೆ ಮಾರನೆಯ ದಿನ ಮುಂಜಾನೆ ಅವರೆಲ್ಲರೂ ಡ್ರಿಲ್ಲಿನ ಬಯಲಿಗೆ ಬಂದರು. ಆ ತೊಂಬತ್ತು ಜನರಲ್ಲಿ ಹೀರಾಸಿಂಗನೇ ಮೊದಲಾದ ಐವರ ಹೊರತಾದ ಎಂಬತ್ತೈದು ಜನರು ತೋಟೆಗಳನ್ನು ಸ್ವೀಕರಿಸಲಿಲ್ಲ. ಅಧಿಕಾರಿಗಳ ಅಪ್ಪಣೆಮೀರಿದ ಅಪರಾಧಕ್ಕಾಗಿ ಅವರ ಮೇಲೆ ಮೊಕದ್ದಮೆ ನಡೆಯಿತು.

ಕೋರ್ಟ್‌ಮಾರ್ಷಲ್ಲಿನಂತೆ ಈ ಅಪರಾಧಿಗಳ ವಿಚಾರಣೆಯಾಗಿ ಒಬ್ಬೊಬ್ಬನಿಗೂ ಹತ್ತು ಹತ್ತು ವರ್ಷ ಸಶ್ರಮ ಶಿಕ್ಷೆಯು ವಿಧಿಸಲ್ಪಟ್ಟಿತು. ಇವರಲ್ಲಿ ೪೯ ಜನ ಮಹಮ್ಮದೀಯರೂ ೩೬ ಜನ ಹಿಂದುಗಳೂ ಇದ್ದರು.

ಮೇ ತಿಂಗಳ ೯ನೆಯ ತಾರೀಖಿನ ದಿನ ಮೀರತದಲ್ಲಿಯ ಸೈನಿಕರೆಲ್ಲರೂ ಡ್ರಿಲ್ಲಿಗೆ ಬಂದರು. ಮುಖ್ಯ ಸೇನಾಪತಿಯು ಎಲ್ಲರ ಸಮಕ್ಷದಲ್ಲಿ ಈ ೮೫ ಜನ ಅಪರಾಧಿಗಳಿಗೆ ವಿಧಿಸಿದ ಶಿಕ್ಷೆಯನ್ನು ಓದಿ ಹೇಳಿದನು; ಅವರ ಸೈನ್ಯದ ಉಡುಪನ್ನು ಸೆಳೆದುಕೊಂಡರು ; ಸೈನ್ಯದ ಕಮ್ಮಾರ (Artillary Smith) ನು ಅಪರಾಧಿಗಳ ಕೈಕಾಲುಗಳಿಗೆ ಸಂಕೋಲೆಗಳನ್ನು ಬಡಿಯ ತೊಡಗಿದನು. ಒಬ್ಬೊಬ್ಬ ಅಪರಾಧಿಯೂ ಸೈನಿಕರ ಸಾಲುಗಳ ನಡುವೆ ಹಾಯ್ದು ಜೈಲಿನ ದಾರಿಗೆ ಹೋಗುವಾಗ "ಬಂಧುಗಳೇ! ನಿಮ್ಮ ಮನಸ್ಸಿನಲ್ಲಿ ಅಭಿಮಾನವೂ ಶರೀರದಲ್ಲಿ ಶಕ್ತಿಶೌರ್ಯಗಳೂ ಇದ್ದರೆ ಧರ್ಮಕ್ಕಾಗಿ ಇಂತಹ ಯಮಯಾತನೆ ಹೊಂದಿದ ನಿಮ್ಮ ಬಂಧುಗಳನ್ನು ಬಿಡಿಸಿಕೊಳ್ಳಿರಿ." ಎಂದು ಕೂಗುತ್ತ ನಡೆದನು.

ಗವರ್ನರ್ ಜನರಲ್ ಕ್ಯಾನಿಂಗ್ ಸಾಹೇಬನಿಗೆ ಈ ಸಂಗತಿ ಗೊತ್ತಾದ ಕೂಡಲೆ ಆತನು ಬಹು ಕನಿಕರಪಟ್ಟು ಸೇನಾಧಿಕಾರಿಗಳ ಈ ಕೃತಿಯನ್ನು ನಿಷೇಧಿಸಿದನು. "ಸೈನಿಕರ ಇದಿರಿಗೆ ಅನೇಕ ತಾಸುಗಳವರೆಗೆ ಅಪರಾಧಿಗಳನ್ನು ನಿಲ್ಲಿಸಿ ಸಂಕೋಲೆಗಳನ್ನು ತೊಡಿಸಿದುದು ಸರಿಯಾದ ಮಾತಾಗಲಿಲ್ಲ. ಹೊಸ ತುಬಾಕಿಯ ತೋಟೆಗಳ ಉಪಯೋಗದಿಂದ ತಮ್ಮ ಧರ್ಮನಾಶವಾಗುವುದೆಂದು ದೃಢಭಾವನೆಯುಳ್ಳವರಾಗಿ ಅಸಂತುಷ್ಟರಾದ ಸೈನಿಕರಲ್ಲಿ

ಈ ಕೃತಿಯಿಂದ ಇನ್ನಷ್ಟು ಅಸಮಾಧಾನವಾಗಿರಲಿಕ್ಕೇಬೇಕು. ಇಂತಹ ಅಸಂತೋಷಜನಕವಾದ ದೃಶ್ಯದೊಡನೆ ೮೫ ಜನರನ್ನು ಜೈಲಿಗೆ ಕಳುಹಿದುದನ್ನೂ ಅವರು ಮಾಡಿದ್ದ ಅಪರಾಧವನ್ನೂ ಸೈನ್ಯದ ಆಗಿನ ಮನಃಸ್ಥಿತಿಯನ್ನೂ ಪರ್ಯಾಲೋಚಿಸಿ ನೋಡಿದರೆ ಇಂತಹ ಅವಿವೇಕವು ಬೇರೊಂದಿಲ್ಲವೆನಿಸುವುದು." ಎಂದು ಆತನು ಅಭಿಪ್ರಾಯಪಟ್ಟನು.

ಅಧಿಕಾರಿಗಳು ಕಾಯದೆ-ಸುವ್ಯವಸ್ಥೆ (Law and Order)ಗಳ ಹೆಸರಿನಿಂದ ತಮ್ಮನ್ನು ಮೆಟ್ಟಿಮುರಿಯಲು ನಿರ್ಣಯಿಸಿರುವುದನ್ನು ಕಂಡು ಸೈನಿಕರ ಹುಚ್ಚು ತಲೆಗೇರಿತು. ಅವರೆಲ್ಲರೂ ಕೂಡಿ ರಾತ್ರಿಯೆಲ್ಲಾ ಆಲೋಚನೆ ಮಾಡಿ ಮುಂದಿನ ಕಾರ್ಯಕ್ರಮವನ್ನು ಗೊತ್ತುಪಡಿಸಿದರು: ಮಾರನೆಯ ದಿನ ರವಿವಾರವಿದ್ದು ಮೀರತದಲ್ಲಿದ್ದ ಎಲ್ಲ ಯುರೋಪಿಯನ್ ಸೈನಿಕರೂ ಸೇನಾಧಿಕಾರಿಗಳೂ ಮಧ್ಯಾಹ್ನ ನಾಲ್ಕುಗಂಟೆಯ ಸಮಯಕ್ಕೆ ಪ್ರಾರ್ಥನಾಲಯಕ್ಕೆ ಹೋಗುವುದರಿಂದ ಅದೇ ತಮಗೆ ಅನುಕೂಲ ಸಮಯವೆಂದೂ ಪ್ರಾರ್ಥನೆಯ ಗಂಟೆಯೇ ತಮಗೆ ಸೂಚನಾಗಂಟೆಯೆಂದೂ ನಿರ್ಣಯಿಸಿದರು.

ಮಾರನೆಯ ದಿನ ಎಂದಿನಂತೆ ಪ್ರಾರ್ಥನೆಯ ಗಂಟೆಯು "ಢಣ್ ಢಣ್" ಬಾರಿಸತೊಡಗಿತು. ಆ ಗಂಟೆಯೇ ಭರತಖಂಡದ ಇತಿಹಾಸದಲ್ಲಿ ರಕ್ತಾಕ್ಷರಗಳಿಂದ ಬರೆದ, ದೇಶದಲ್ಲೆಲ್ಲ ರಕ್ತದ ಕಾಲುವೆ ಹರಿಯಿಸಿದ ಸಿಪಾಯಿದಂಗೆಯ ಸೂಚನಾಗಂಟೆಯಾಗಿ ಪರಿಣಮಿಸಿತು. ಅತ್ತ ಯುರೋಪಿಯನ್ ಸೈನಿಕ ಸೇನಾಧಿಕಾರಿಗಳು ಧಾರ್ಮಿಕ ಭಾವನೆಯಿಂದ ಶಸ್ತ್ರಾಸ್ತ್ರಗಳನ್ನೂ ರಣವೇಷವನ್ನೂ ತೊರೆದು ಪ್ರಾರ್ಥನಾಲಯಕ್ಕೆ ಹೊರಟರು. ಇತ್ತ ದೇಶೀಯ ಸೈನಿಕರು ತಮ್ಮ ಧರ್ಮನಾಶದ ಭೀತಿಯಿಂದ ದಿಙ್ಮೂಢರಾಗಿ ರಣವೇಷದಿಂದಲೂ ಶಸ್ತ್ರಾಸ್ತ್ರಗಳಿಂದಲೂ ಸಜ್ಜಿತರಾಗಿ ಅತ್ತಕಡೆಗೇ ಹೊರಟರು. ಜೈಲಿನಲ್ಲಿಯಂತೂ ಈ ಮೊದಲೇ ಎಲ್ಲವೂ ಸಿದ್ಧವಾಗಿದ್ದಿತು: ಹಿಂದೆ ಹೇಳಿದ ೮೫ ಜನ ಧರ್ಮವೀರ ಸೈನಿಕರ ಕೈಕಾಲುಗಳ ಸಂಕೋಲೆಗಳು ಕಡಿದು ಹೋಗಿದ್ದುವು. ಪ್ರಾರ್ಥನೆಯ ಗಂಟೆಯ ದನಿ ಕೇಳಿದೊಡನೆ ಜೈಲಿನ ಎಲ್ಲ ಬಾಗಿಲುಗಳು ತೆರೆದುವು. ಸೈನಿಕರೂ ನಾಲ್ಕುಸಾವಿರ ಅಪರಾಧಿಗಳೂ ಕಟ್ಟೊಡೆದ ಮಹಾಪ್ರವಾಹದಂತೆ ಭೋರ್ಗರೆವ ಜಯಘೋಷದೊಡನೆ ಹೊರಗೆ ಬಂದು ಪ್ರಾರ್ಥನಾಲಯಕ್ಕೆ ಧಾವಿಸಿದರು.

ದೈವಯೋಗವು ವಿಚಿತ್ರವಾದುದು. ದಂಗೆಗಾರರಿಗೆ ಕಾಲವು ಅನುಕೂಲವಾಗಿಲ್ಲವೆಂಬುದು ಪ್ರಾರಂಭದಲ್ಲಿಯೇ ಕಂಡುಬಂದಿತು. ಬೇಸಗೆಯ ಉಗ್ರತಾಪಕ್ಕಾಗಿಯೂ ದೀರ್ಘವಾದ ದಿನಮಾನದ ನಿಮಿತ್ತದಿಂದಲೂ ಅಂದು ಅರ್ಧತಾಸು ತಡವಾಗಿ ಪ್ರಾರ್ಥನೆ ನಡೆಯಬೇಕೆಂದು ಯುರೋಪಿಯನರು ಮೊದಲೇ ಗೊತ್ತುಪಡಿಸಿದ್ದರು. ಈ ಮಾತು ದಂಗೆಗಾರರಿಗೆ ಗೊತ್ತಾಗಲಿಲ್ಲ. ಅವರು ತಾವು ಗೊತ್ತುಮಾಡಿಕೊಂಡ ವೇಳೆಗೆ ಸರಿಯಾಗಿ ಹೊರಗೆಬಂದು ದಂಗೆಯನ್ನು ಪ್ರಾರಂಭಿಸಿದರು. ಅನೇಕ ಯುರೋಪಿಯನರು ಪ್ರಾರ್ಥನಾಲಯಕ್ಕೆ ಬಂದಿದ್ದರೂ ತೋಫು ತುಬಾಕಿಗಳುಳ್ಳ ಸೈನಿಕರು ಇನ್ನೂ ಬಂದಿರಲಿಲ್ಲ. ಅವರೂ ಮಿಕ್ಕವರಂತೆಯೇ ನಿಶ್ಶಸ್ತ್ರರಾಗಿ ಪ್ರಾರ್ಥನಾಲಯಕ್ಕೆ ಮುಟ್ಟಿದ ಬಳಿಕ ದಂಗೆಗಾರರು ಅದನ್ನು ಮುತ್ತಿದ್ದರೆ ಪರಿಣಾಮವೆಂತಾಗುತ್ತಿದ್ದಿತೋ ಹೇಳಲಾಗುವುದಿಲ್ಲ. ನಿಶ್ಶಸ್ತ್ರರಾದವರು ಒಳಗೆ ಸಿಕ್ಕಿರುವಾಗ ಶಸ್ತ್ರಾಸ್ತ್ರ ಸಜ್ಜಿತರಾಗಿ ರಣೋನ್ಮತ್ತರಾದ ಮೂರುಸಾವಿರ ಸುಶಿಕ್ಷಿತ ಸೈನಿಕರೂ ನಾಲ್ಕುಸಾವಿರ ದಂಗೆಗಾರರೂ ಹೊರಗಿನಿಂದ ಮುತ್ತಿಗೆ ಹಾಕಿದ್ದರೆ ಪರಿಣಾಮವೇನಾಗುತ್ತಿದ್ದಿತೆಂಬುದನ್ನು ಬೇರೆಯಾಗಿ ಹೇಳಬೇಕೇ? ದೈವಯೋಗದಿಂದ ೬೦ನೆಯ ದಳದ ತೋಫು ತುಬಾಕಿಗಳ ಸೈನಿಕರು ಇನ್ನೂ ಪ್ರಾರ್ಥನಾಲಯಕ್ಕೆ ಬಾರದಿದ್ದುದರಿಂದ ದಂಗೆಗೆ ಪ್ರಾರಂಭವಾದೊಡನೆ ಅವರು ಶಸ್ತ್ರಾಸ್ತ್ರಸಜ್ಜಿತರಾಗಿ ಅಲ್ಲಿಗೆ ಬಂದರು. ದಂಗೆಗಾರರು ತಮ್ಮ ಗುರಿ ತಪ್ಪಿದುದಕ್ಕಾಗಿ ಅಂಜಿ ಹಿಂಜರಿದರು. ಯುರೋಪಿಯನ್ ಸೇನಾದಳದ ಮೇಲೆ ಬಂದ ಕುತ್ತವು ಅನಾಯಾಸವಾಗಿ ದೂರವಾಯಿತು.

ಮೇ ತಿಂಗಳ ೩೦ನೆಯ ತಾರೀಖಿನ ಮಧ್ಯರಾತ್ರಿಗೆ ಸರಿಯಾಗಿ ಅಖಿಲ ಭರತಖಂಡದಲ್ಲಿಯೂ ಏಕಕಾಲಕ್ಕೆ ದಂಗೆಯನ್ನು ಪ್ರಾರಂಭಿಸಬೇಕೆಂದು ಗೊತ್ತಾಗಿದ್ದುದು ತಪ್ಪಿತು; ಮೀರತದಲ್ಲಿಯೂ ಪ್ರಾರಂಭದ ಕಾಲವು ಅವರಿಗೆ ಪ್ರತಿಕೂಲವಾಯಿತು. ಒಟ್ಟಿಗೆ ದಂಗೆಗಾರರಿಗೆ ಕಾಲವೇ ಅನುಕೂಲವಾಗಿರಲಿಲ್ಲ. ಆದರೂ ಮೀರತದ ಸೈನಿಕರು ಯಾವ ಪ್ರತಿಬಂಧವೂ ಇಲ್ಲದೆ ತಾವೆಲ್ಲರೂ ಹೊರಗೆ ಬಂದುದೇ ತಮ್ಮ ವಿಜಯದ ಸೂಚನೆಯೆಂದು ತಿಳಿದುಕೊಂಡು ದಿಲ್ಲಿಯ ಮಾರ್ಗವನ್ನು ಹಿಡಿದು ನಡೆದರು.

---

# ಎರಡನೆಯ ಖಂಡ



## ರಾಜ್ಯಕ್ರಾಂತಿ



**The Mutiny of a few sepoy regiments had developed into a great political convulsion.**

# ಮೊದಲನೆಯ ಪರಿಚ್ಛೇದ

## ದಿಲ್ಲಿಯಲ್ಲಿ ರಾಜ್ಯಕ್ರಾಂತಿ

"A descendant of the Immortal Timur once more reigned in the Imperial city." —*Forrest*



ಹಲವು ಘಟನಾಕ್ರಮಗಳಿಂದ ವಿಚಾರಮಾಡಿ ನೋಡಿದರೆ ಮೊಗಲ್ ಬಾದಶಹರ ದುರವಸ್ಥೆಯನ್ನು ಕಂಡು ಉತ್ತೇಜಿತರಾದವರೇ ಸಿಪಾಯಿ ದಂಗೆಯಲ್ಲಿ ಮುಂದಾಳಾಗಿದ್ದರೆಂದು ಅನೇಕರು ಹೇಳಿರುವರು. ಆದುದರಿಂದ ದಿಲ್ಲಿಯಲ್ಲಾದ ದಂಗೆಯ ಪೂರ್ವಾಪರ ಸಂಬಂಧವು ತಿಳಿಯಲು ಅನುಕೂಲವಾಗಬೇಕೆಂದು ಇಲ್ಲಿ ಕೆಲವು ಸಂಗತಿಗಳನ್ನು ವಿವರಿಸಿ ಹೇಳುವುದು ಆವಶ್ಯಕವಾಯಿತು.

೧೯ನೆಯ ಶತಮಾನದ ಪ್ರಾರಂಭದಲ್ಲಿ ಲಾರ್ಡ್ ವೆಲಸ್ಲಿ, ಲಾರ್ಡ್ ಲೇಕ್ ಇವರು ಮೊದಲು ಮಹಾರಾಷ್ಟ್ರರ ಆಧೀನದಲ್ಲಿದ್ದ ಮೊಗಲ್ ಬಾದಷಹನನ್ನು ತಮ್ಮ ಆಶ್ರಯಕ್ಕೆ ಕರೆದುಕೊಂಡರು. ಕಣ್ಣುಗಳನ್ನು ಕಳೆದುಕೊಂಡು ವೃದ್ಧನಾಗಿ ಜೀವನ್ಮೃತನಂತಿದ್ದ ಷಹಾಅಲಮ್ಮನು ಹುಲಿಗೆ ಅಂಜಿ ಹುತ್ತು ಹೊಕ್ಕಂತಾಯಿತು; ಮಹಾರಾಷ್ಟ್ರರ ಆಧೀನದಲ್ಲಿದ್ದಾಗ ಇದ್ದಷ್ಟಕ್ಕಿಂತ ಹೆಚ್ಚಿನ ಸ್ವಾತಂತ್ರ್ಯವೇನೂ ದೊರೆಯಲಿಲ್ಲ, ಇಷ್ಟೇ ಅಲ್ಲ; ಅವನು ಕಂಪನಿಯ ಸರಕಾರದಿಂದ ವರ್ಷಕ್ಕೆ ೧೨ಲಕ್ಷ ರೂಪಾಯಿಗಳ ಜೀವನಾಂಶವನ್ನು ಪಡೆದು ಕಾಲಯಾಪನೆ ಮಾಡಬೇಕಾಯಿತು. ಇಂತಹ ದುರವಸ್ಥೆಯಲ್ಲಿ ಕೂಡ ವೃದ್ಧ ಷಹಾಅಲಮ್ಮನು ಧೈರ್ಯವನ್ನು ಬಿಡಲಿಲ್ಲ; ಮನಸ್ಸಿನ ಶಾಂತಿಯನ್ನು ಕಳೆದುಕೊಳ್ಳಲಿಲ್ಲ. ಆತನು ರಸಿಕನಾದ ಕವಿಯೂ ಆಗಿದ್ದನು.

೧೮೦೬ನೆಯ ಇಸವಿಯಲ್ಲಿ ಷಹಾಅಲಮ್ಮನು ಪರಲೋಕವಾಸಿಯಾದ ಬಳಿಕ ಅಕಬರಷಹನು ದಿಲ್ಲಿಯ ಜಹಗೀರಿಗೂ ೧೨ಲಕ್ಷ ರೂ. ವರ್ಷಾಶನಕ್ಕೂ

ಅಧಿಕಾರಿಯಾದನು. ಮೊಗಲ್ ಬಾದಷಹರು ತಮ್ಮ ಸಾಮ್ರಾಜ್ಯವನ್ನು ಕಳೆದುಕೊಂಡರೂ ರಾಜಚಿಹ್ನೆಗಳನ್ನು ಕಳೆದುಕೊಂಡಿರಲಿಲ್ಲ: ಕಂಪನಿಯ ಸರಕಾರದ ಸರ್ವಾಧಿಕಾರಿ ಗವರ್ನರ್ ಜನರಲನು ಕಲಕತ್ತೆಗೆ ಬಂದೊಡನೆ ದಿಲ್ಲಿಗೆ ಬಂದು ಮೊಗಲ್ ಬಾದಷಹನನ್ನು ಕಂಡು ಕಾಣಿಕೆಯನ್ನು ಒಪ್ಪಿಸ ಬೇಕಾಗುತ್ತಿದ್ದಿತು. ಗವರ್ನರ್ ಜನರಲನ ರಾಜಮುದ್ರೆಯಲ್ಲಿ 'ದಿಲ್ಲಿಯ ಬಾದ ಷಹನ ಅಂಕಿತ'ವೆಂಬ ಬರೆಹವು ಇರುತ್ತಿದ್ದಿತು. ರಾಣಿಗೂ ರಾಜಕುಮಾರರಿಗೂ ಕಂಪನಿಯ ಅಧಿಕಾರಿಗಳು ಕಾಣಿಕೆಯನ್ನು ಕೊಡಬೇಕಾಗಿದ್ದಿತು. ಟಂಕ ಸಾಲೆಯಲ್ಲಿ ದಿಲ್ಲಿಯ ಬಾದಷಹನ ಹೆಸರಿನಿಂದಲೇ ನಾಣ್ಯಗಳು ಮುದ್ರಿತವಾ ಗುತ್ತಿದ್ದುವು. ಪರರಾಜರ ಕೂಡ ಯುದ್ಧ ಒಪ್ಪಂದಗಳನ್ನು ಮಾಡುವಾಗ ಕಂಪನಿಯ ಸರಕಾರಕ್ಕೆ ಆತನ ಅನುಮತಿ ಬೇಕಾಗುತ್ತಿದ್ದಿತು. ಪರಾಧೀನ ನಾದ ಬಾದಷಹನು ಅಧಿಕಾರಿಗಳು ಕೊಟ್ಟ ಕಾಗದಕ್ಕೆ ಅವರು ಹೇಳಿದಲ್ಲಿ ಸಹಿ ಮಾಡಲೇಬೇಕಾಗುತ್ತಿದ್ದಿತು; ಆ ಮಾತು ಬೇರೆ. ಯಾವುದಾದರೊಂದು ಪ್ರದೇಶವನ್ನು ಕಂಪನಿಯು ಸರಕಾರಕ್ಕೆ ಸೇರಿಸಿಕೊಂಡಿತೆಂಬ ಜಾಹೀರನಾ ಮೆಯು ಈಗಲೂ ದಿಲ್ಲಿಯ ಬಾದಷಹನ ಹೆಸರಿನಿಂದಲೇ ಪ್ರಕಟವಾಗುತ್ತಿ ದ್ದಿತು. ಕಂಪನಿಯ ಸರಕಾರದ ಅಧಿಕಾರಿಗಳು ದಿಲ್ಲಿಯ ಅರಮನೆಗೆ ಬರುವಾಗ ಬರಿಗಾಲಿನಿಂದ ನಡೆಯುತ್ತ ಬಹು ವಿನೀತರಾಗಿ ಬರಬೇಕಾಗುತ್ತಿದ್ದಿತು.*

ಕಾಲಕ್ರಮದಲ್ಲಿ ಇವೆಲ್ಲ ಬದಲಾದುವು; ಬಾದಷಹನೂ ಆತನ ಮಕ್ಕಳೂ ದಿಲ್ಲಿಯಿಂದ ಹೊರಗೆ ಹೋಗುವದೂ ಕಟ್ಟಾಗಿ†ಅರಮನೆಯಲ್ಲಿ ಸೆರೆಯಾಳು ಗಳಂತಾದರು. ೧೯೩೫ನೆಯ ಇಸವಿಯಿಂದ ಟಂಕಸಾಲೆಗಳಲ್ಲಿ ದಿಲ್ಲಿಯ ಬಾದ ಷಹನ ಹೆಸರಿನಲ್ಲಿ ನಾಣ್ಯಗಳನ್ನು ಮುದ್ರಿಸುವುದರ ಬದಲು ಕಂಪನಿಯ ಸರಕಾರದ ಹೆಸರಿನ ನಾಣ್ಯಗಳನ್ನು ಮುದ್ರಿಸತೊಡಗಿದರು. ಸರಕಾರ ದವರು ಗೊತ್ತುಪಡಿಸಿದ ೧೨ ಲಕ್ಷ ರೂಪಾಯಿಗಳ ವರ್ಷಾಶನದಿಂದ ಬಾದ ಷಹನಿಗೂ ಆತನ ಪರಿವಾರದವರಿಗೂ ಹೊಟ್ಟೆತುಂಬ ಅನ್ನ ಮೈತುಂಬ ಬಟ್ಟೆ ದೊರೆಯುವುದು ಕಷ್ಟವಾಗಿದ್ದಿತು. ದಿಲ್ಲಿಯಲ್ಲಿಯೇ ಮೊಗಲ್ ರಾಜ ವಂಶಕ್ಕೆ ಸೇರಿದ ೧೨ ಸಾವಿರ ಜನರಿದ್ದರು. ಈ ದುರವಸ್ಥೆಯನ್ನು ಕಂಡು

* Martin Indian Empire Vol. II P. 457.

† Martin Indian Empire Vol II P 459.

ಅಕಬರಷಹನು ತಮಗೆ ಹೊಟ್ಟೆಬಟ್ಟೆಗಳಿಗೆ ಸಾಕಾಗುವಷ್ಟು ಹಣವನ್ನು ಕೊಡಬೇಕೆಂದು ಕಂಪನಿಯ ಸರಕಾರವನ್ನು ಕೇಳಿಕೊಂಡನು. ಆ ಸೇತು ಹಿಮಾಚಲ-ಪರ್ಯಂತ-ವ್ಯಾಪಿಸಿದ ಮಹಾಭಾರತ ಸಾಮ್ರಾಜ್ಯದ ಅಧಿಪತಿ ಮೊಗಲ್ ಚಕ್ರವರ್ತಿಗಳ ಉತ್ತರಾಧಿಕಾರಿಗಳ ಇಂತಹ ದುರವಸ್ಥೆಯನ್ನು ಕಂಡು ಯಾರ ಮನಸ್ಸು ತಾನೆ ಮರುಗದು? ಆತನ ಪೂರ್ವಜರ ಮುಂದೆ ನಿಂತು ತಮ್ಮ ವಕಾರಗಳನ್ನು ಕಟ್ಟಿಕೊಳ್ಳುವುದಕ್ಕೆ ಮೂರಡಿ ಭೂದಾನ ವನ್ನು "ದೇಹಿ" ಎಂದು ಬೇಡಿದ ಈಸ್ಟ್ ಇಂಡಿಯಾ ಕಂಪನಿಯ ಅಧಿಕಾರಿ ಗಳಿಗೆ ಅಕಬರಷಹನ ದೀನವಾಣಿಯನ್ನು ಕೇಳಿ ಕನಿಕರವುಂಟಾಗಲಿಲ್ಲ. ಅವರು ಅಕಬರಷಹನು ತನ್ನ ರಾಜಚಿಹ್ನೆಗಳನ್ನೆಲ್ಲ ಸರಕಾರಕ್ಕೆ ಒಪ್ಪಿಸಿದರೆ ವರ್ಷಾಶನವನ್ನು ಮೂರು ಲಕ್ಷ ರೂಪಾಯಿ ಹೆಚ್ಚಿಸುವೆವೆಂದರು. ದಿಗ್ವಿ ಜಯಿಯಾದ ಶಕ್ತಿಯಿಂದ ಜಗತ್ತಿನಲ್ಲೆಲ್ಲ ದೇದೀಪ್ಯಮಾನವಾದ ಮೊಗಲ್ ರಾಜವಂಶವು ಈಗ ದಿಲ್ಲಿಯ ಅರಮನೆಯ ಒಂದು ಮೂಲೆಯಲ್ಲಿ ಚಿಕ್ಕ ಪಣತಿಯಲ್ಲಿಯ ಎಣ್ಣೆ ತೀರಿದ ಬತ್ತಿಯಂತೆ ಮಿಣಮಿಣನೆ ಮಿನುಗುತ್ತಿರು ವುದು ಕೂಡ ಕಂಪನಿಯ ಅಧಿಕಾರಿಗಳಿಗೆ ಸಹನವಾಗಲಿಲ್ಲ. ಅದನ್ನು ಯಾವಾಗ ಆರಿಸಿ ಬಿಡುವೆವೋ ಎಂದವರು ಹಾತೊರೆಯುತ್ತಿದ್ದರು.

ಅಕಬರಷಹನು ಹಿಂದುಸ್ಥಾನ ಸರಕಾರದವರಿಂದ ತನ್ನ ಬೇಡಿಕೆಗಳು ದೊರೆಯುವ ಲಕ್ಷಣ ತೋರದಾಗಲು ಬಂಗಾಲದ ಸುಪ್ರಸಿದ್ಧ ವ್ಯಕ್ತಿ ರಾಜಾ ರಾಮ ಮೋಹನರಾಯನನ್ನು ಇಂಗ್ಲೆಂಡಿಗೆ ಕಳುಹಿ ಪ್ರಯತ್ನ ಮಾಡಿದನು. ಕಣ್ಣಿಗೇ ಕರುಣೆ ಹುಟ್ಟದಿರಲು ಕಿವಿಗೆ ಕಷ್ಟದ ಕಲ್ಪನೆ ಹೇಗಾಗಬೇಕು? ರಾಜಾ ರಾಮ ಮೋಹನರಾಯನಂತಹ ಕರ್ತೃತ್ವ ಶಾಲಿಯು ಕೂಡ ಹೋದ ಹಾದಿಯಲ್ಲಿ ತಿರುಗಿ ಬರಬೇಕಾಯಿತು.

೧೮೩೭ನೆಯ ಇಸವಿಯಲ್ಲಿ ಅಕಬರಷಹನು ಕಾಲಾಧೀನನಾಗಲು ಆತನ ಮಗ ಬಹದ್ದೂರಷಹನು ದಿಲ್ಲಿಯ ಅಧಿಕಾರಿಯಾದನು. ಲಾರ್ಡ್ ಅಕ್ಲಂಡ್ ಸಾಹೇಬನ ಆಳಿಕೆಯಲ್ಲಿ ಬಹದ್ದೂರಷಹನು ತಮ್ಮ ದೈನ್ಯಾವಸ್ಥೆಯನ್ನೆಲ್ಲ ವಿವರಿಸಿ ತಮಗೆ ಅನ್ನವಸ್ತ್ರಗಳಿಗೆ ಸಾಕಾಗುವಷ್ಟಾದರೂ ವರ್ಷಾಶನವನ್ನು ಕೊಡಿಸಬೇಕೆಂದು ಕೇಳಿಕೊಂಡನು. ಮತ್ತೆ ಮೊದಲಿನದೇ ಉತ್ತರ ದೊರೆ ಯಿತು. ಬಹದ್ದೂರಷಹನು ಜಾರ್ಜ ಥಾಮುಸನ್ನನೆಂಬ ಇಂಗ್ಲಿಷ ಗೃಹಸ್ಥ

ನನ್ನು ಇಂಗ್ಲೆಂಡಿಗೆ ಕಳುಹಿ ಅಲ್ಲಿಯೂ ಪ್ರಯತ್ನ ಮಾಡಿದ್ದಾಯಿತು. ಬೋರ್ಡ್ ಆಫ್ ಡೈರೆಕ್ಟರ್ಸನವರು ದಿಲ್ಲಿಯ ಬಾದಷಹನು ರಾಜಚಿಹ್ನೆಗಳನ್ನೆಲ್ಲ ಒಪ್ಪಿಸದೆ ಇದ್ದರೆ ವರ್ಷಾಶನವನ್ನು ಹೆಚ್ಚಿಸಲಾರೆವೆಂದು ಸ್ಪಷ್ಟವಾಗಿ ಉತ್ತರಕೊಟ್ಟರು. †

೧೮೪೮ ನೆಯ ಇಸವಿಯಲ್ಲಿ ಲಾರ್ಡ್ ಡಾಲ ಹೌಸಿಯು ಸರ್ವಾಧಿಕಾರಿಯಾದನು. ಆತನಿಗೆ ದಿಲ್ಲಿಯ ಬಾದಷಹನು ಕಡಲೆಯೊಳಗಿನ ಕಲ್ಲಾಗಿದ್ದನು; ಕಣ್ಣೊಳಗಿನ ಮಣ್ಣಿನ ಕಣವಾಗಿದ್ದನು. ದಿಲ್ಲಿಯ ದುರ್ಗವು ಭದ್ರವಾಗಿದ್ದು ಆಗ್ರಾ ಅಯೋಧ್ಯಾ ಪ್ರಾಂತಗಳ ಆಯಕಟ್ಟಿನ ಸ್ಥಾನದಲ್ಲಿರುವುದರಿಂದ ಅದನ್ನು ಸಂಪೂರ್ಣ ತಮ್ಮ ಆಧೀನದಲ್ಲಿಟ್ಟುಕೊಳ್ಳುವುದು ಆತನ ಎರಡನೆಯ ಆಸೆ. ಆತನು ಅಲ್ಲಿ ಒಂದು ಅಸ್ತ್ರಾಗಾರವನ್ನು ಸ್ಥಾಪಿಸಬೇಕಾಗಿದ್ದಿತು. ಬಹದ್ದೂರಷಹನನ್ನು ಬಲಾತ್ಕಾರದಿಂದ ಸಹಪರಿವಾರವಾಗಿ ಕುತುಬ್‌ಮಿನಾರದಬಳಿಯಲ್ಲಿದ್ದ ಒಂದು ಕಟ್ಟಡದಲ್ಲಿ ಒಯ್ದು ಇಡಬೇಕೆಂದು ನಿರ್ಣಯಿಸಿ ಆತನು ಕೋರ್ಟ್ ಆಫ್ ಡೈರೆಕ್ಟರ್ಸನವರಿಗೆ ವರದಿಯನ್ನು ಕಳುಹಿದನು. ಆದರೆ ಇದರಿಂದ ಹಿಂದುಸ್ತಾನದ ಜನತೆಯಲ್ಲಿ ಭಯಂಕರ ಕ್ಷೋಭೆಯುಂಟಾಗಬಹುದೆಂಬ ರಾಜಕೀಯ ಧೋರಣವನ್ನು ಲಕ್ಷ್ಯಕ್ಕೆ ತಂದೋ ಇನ್ನಾವ ಕಾರಣದಿಂದಲೋ ಆ ಮಾತು ಅಲ್ಲಿಗೇ ನಿಂತಿತು. ದುರ್ದೈವದಿಂದ ಇದೇ ಸಂಧಿಗೆ ದಿಲ್ಲಿಯ ಉತ್ತರಾಧಿಕಾರದ ವಿಷಯವಾಗಿ ಮೊಗಲ್ ರಾಜಕುಟುಂಬದಲ್ಲಿ ವಿವಾದವುಂಟಾಯಿತು.

ಬಹದ್ದೂರಷಹನಿಗೆ ಝೀನ್ನತಮಹಾಲಳೆಂಬ ಪರಮಸುಂದರಿಯಾದ ಪತ್ನಿಯಿದ್ದಳು; ಅಪರ ವಯಸ್ಸಿನಲ್ಲಿ ಆತನು ಆಕೆಯ ಕೈಯೊಳಗಿನ ಬೊಂಬೆಯಂತಾಗಿದ್ದನು. ಆಕೆಯು ಬಹದ್ದೂರಷಹನ ತರುವಾಯ ತನ್ನ ಮಗ ಜವಾನ ಬಖತನಿಗೆ ದಿಲ್ಲಿಯ ಅಧಿಕಾರವನ್ನು ಒಪ್ಪಿಸಬೇಕೆಂದು ಆಗ್ರಹಪಡುತ್ತಿದ್ದಳು. ಬಾದಷಹನ ಹಿರಿಯಮಗ ಫಕೀರುದ್ದೀನನು ತನ್ನ ಅಧಿಕಾರವನ್ನು ಬಿಟ್ಟುಕೊಡಲು ಸಮ್ಮತಿಸಲಿಲ್ಲ. ಕೊನೆಗೆ ಈ ವಿವಾದವು ಗವರ್ನರ್ ಜನರಲನ ಮುಂದೆ ಬಂದಿತು. ಹಾರುವ ಹಕ್ಕಿ ಬಲೆಯಲ್ಲಿ ಬಿದ್ದಂತಾಗಲು ಡಾಲಹೌಸಿ ಸಾಹೇಬನು ದಿಲ್ಲಿಯ ರೆಸಿಡೆಂಟನ ಮುಖಾಂತರ ಮಾತುಕತೆ

† Sepoy war Vol. II p. 12.

ನಡೆಯಿಸಿ ದಿಲ್ಲಿಯ ನಗರವನ್ನೂ ರಾಜಚಿಹ್ನೆಗಳನ್ನೂ ಬಿಟ್ಟುಕೊಡಲು ಸಮ್ಮತಿಯನ್ನು ಬರೆಯಿಸಿಕೊಂಡು ಫಕೀರುದ್ದೀನನು ಬಹದ್ದೂರಷಹನ ಉತ್ತರಾಧಿಕಾರಿಯೆಂದು ನಿರ್ಣಯಿಸಿಕೊಟ್ಟನು.

ದೈವಯೋಗವು ವಿಚಿತ್ರವಾದುದು. ೧೮೫೬ನೆಯ ಇಸವಿಯ ಜುಲೈ ತಿಂಗಳಲ್ಲಿ ಫಕೀರುದ್ದೀನನು ಆಕಸ್ಮಾತ್ ಮರಣಹೊಂದಲು ಮೊಗಲ್ ಬಾದಷಾಹಿಯ ಉತ್ತರಾಧಿಕಾರದ ಪ್ರಶ್ನೆ ಮತ್ತೆ ಉಪಸ್ಥಿತವಾಗಿ ಲಾರ್ಡ ಕ್ಯಾನಿಂಗ್ ಸಾಹೇಬನ ಮುಂದೆ ಬಂದಿತು. ಕಂಪನಿಯ ಸರಕಾರದ ಪೂರ್ವದ ಧೋರಣೆಯನ್ನು ಕ್ಯಾನಿಂಗ್ ಸಾಹೇಬನು ಒದಲಿಸಲಿಲ್ಲ: "ಬಹದ್ದೂರ ಷಹನ ಮಕ್ಕಳಲ್ಲಿ ವಯೋಜ್ಯೇಷ್ಠನಾದ ಮಿರ್ಝಾಮಹಮ್ಮದ ಕೇರೋಸನು ಉತ್ತರಾಧಿಕಾರಿಯಾಗಬಹುದು; ಆದರೆ ಆತನು ದಿಲ್ಲೀ ನಗರವನ್ನೂ ಸಕಲ ರಾಜಚಿಹ್ನೆಗಳನ್ನೂ ಬಿಟ್ಟುಕೊಡಬೇಕಾಗುವುದು. ಆತನಿಗೆ ರಾಜನೆಂಬ ಬಿರುದಿನ ಬದಲು ಷಹಾಜಾದನೆಂಬ ಪದವಿ ದೊರೆಯುವುದು." ಎಂದು ಆತನು ಅಪ್ಪಣೆ ಕೊಡಿಸಿದನು.

ಸೈ! ಮೂರುನೂರು ವರ್ಷಗಳಿಗಿಂತ ಹೆಚ್ಚು ಕಾಲ ಭಾರತ ಸಮ್ರಾಜರೆನಿಸಿಕೊಂಡ ಮೊಗಲ್ ಬಾದಷಹರ ಅಧಿಕಾರ ವೈಭವಗಳು ಈ ರೀತಿ ಕೊನೆಗಂಡುವು.

* * * *

ಮೇ ತಿಂಗಳ ೧೧ನೆಯ ತಾರೀಖಿನ ದಿನ ಮೀರತದಲ್ಲಾದ ಮಹಾ ಕಲ್ಲೋಲದ ತರುವಾಯ ಅಲ್ಲಿಯ ಅಶ್ವಬಲವು "ದೀನ್ ದೀನ್" "ಹರಹರ ಮಹಾದೇವ" ಎಂದು ಜಯಘೋಷಮಾಡುತ್ತ ವಾಯುವೇಗದಿಂದ ದಿಲ್ಲಿಯ ದಾರಿಯನ್ನು ಹಿಡಿಯಿತು. ಪದಾತಿದಳದವರೂ ಅವರನ್ನು ಅನುಸರಿಸಿದರು.

ಆಕಾಶವು ನಿರ್ಮಲವಾಗಿದ್ದಿತು. ಪೂರ್ಣಚಂದ್ರನು ಅಖಿಲ ತಾರಾಗಣದೊಡನೆ ವಿರಾಜಿಸುತ್ತಿದ್ದನು. ಚೀನಾಂಬರದ ಮುಸುಕಿಟ್ಟುಕೊಂಡ ನವಯುವತಿಯ ಹಾಗೆ ಭೂದೇವಿಯು ಸುಮನೋಹರೆಯಾಗಿ ತೋರುತ್ತಿದ್ದಳು. ದಾರಿಯಲ್ಲಿಯ ಹಳ್ಳಿಯ ನಿವಾಸಿಗಳು ಸೈನಿಕರ ಜಯಧ್ವನಿ ಕೇಳಿ ಎಚ್ಚತ್ತು ಭಯಭ್ರಾಂತರಾಗಿ ಇದೇನು ವಿಚಿತ್ರವೋ ಎಂದು ಗಾಬರಿಯಾಗಿದ್ದರು. ಅಶ್ವಬಲದವರು ೩೬ ಮೈಲು ಪ್ರವಾಸಮಾಡಿ ಪ್ರಾತಃಕಾಲದ

ಸಮಯಕ್ಕೆ ದಿಲ್ಲಿಯನ್ನು ಸಮೀಪಿಸಿದರು. ಹೊಂಬಣ್ಣದ ರವಿಕಿರಣಗಳಿಂದ ಥಳಿಥಳಿಸುತ್ತಿರುವ ಯಮುನೆಯ ನೀಲ ಜಲ ಪ್ರವಾಹವು ಅವರ ಅಂತಃಕರಣಕ್ಕೆ ಅಮಿತ ಆನಂದವನ್ನುಂಟುಮಾಡುತ್ತಿದ್ದಿತು. ದೂರದಿಂದ ಕಾಣಿಸುತ್ತಿರುವ ದಿಲ್ಲಿಯ ಪ್ರಾಸಾದ ಶಿಖರಗಳು ಅವರನ್ನು ತೀವ್ರವಾಗಿ ಬನ್ನಿರೆಂದು ಕೈಸನ್ನೆ ಮಾಡಿ ಕರೆಯುವಂತೆ ತೋರಿದುವು.

ದಂಗೆಗಾರರು ಮೀರತದಿಂದ ದಿಲ್ಲಿಗೆ ಹೋಗುವ ತಾರಿನ ಕಂಬಗಳನ್ನು ಕಿತ್ತು ತಂತಿಯನ್ನು ಹರಿದೊಗೆದುಬಿಟ್ಟಿದ್ದರು. ಇನ್ನಾವುದಾದರೂ ಸಾಧನದಿಂದ ಮೀರತದ ದಂಗೆಯ ವಾರ್ತೆಯು ಮುಂದಾಗಿ ದಿಲ್ಲಿಗೆ ಮುಟ್ಟಿದರೆ ಅಲ್ಲಿಯ ಅಧಿಕಾರಿಗಳು ತಮ್ಮನ್ನು ಪ್ರತಿಬಂಧಿಸುವರೆಂದೂ ಮೀರತದ ಯುರೋಪಿಯನ್ ಸೈನಿಕರು ತಮ್ಮನ್ನು ಬೆನ್ನಟ್ಟಿ ಬಂದರೆ ಅತ್ತ ದಿಲ್ಲಿಯ ಸೈನ್ಯ ಇತ್ತ ಮೀರತದ ಸೈನ್ಯ ಹೀಗಾಗಿ ತಾವು ಕತ್ತರಿಯಲ್ಲಿ ಸಿಕ್ಕಿದ ಅಡಕೆಯಂತೆ ನುಚ್ಚುನೂರಾಗುವೆವೆಂದೂ ಅವರು ತರ್ಕಿಸಿದ್ದರು. ಅವರು ದಿಲ್ಲಿಗೆ ಸಮೀಪಿಸಿದಾಗ ತೀರ್ಥಯಾತ್ರೆಗೆ ಹೊರಟಿರುವ ಹತ್ತಿಪ್ಪತ್ತು ಜನರ ಗುಂಪೊಂದು ಇದಿರಿಗೆ ಬಂದಿತು. ಅವರಲ್ಲಿ ಕೆಲವರು ಮುಹಮ್ಮದೀಯರೂ ಮಿಕ್ಕವರು ಹಿಂದುಗಳೂ ಒಬ್ಬಿಬ್ಬರು ಬೈರಾಗಿಗಳೂ ಇದ್ದರು. ಅಶ್ವಬಲದವರು ಅವರನ್ನು ಸನ್ನೆಯಿಂದ ನಿಲ್ಲಿಸಿದರು. ಒಬ್ಬ ಜಮಾದಾರನೂ ಇಬ್ಬರು ಹವಾಲದಾರರೂ ಮುಂದೆ ಬಂದು ಆ ಬೈರಾಗಿಗಳೊಡನೆ ಏನೇನೋ ಮಾತಾಡಿದರು. ಎಲ್ಲರೂ ಅಂತರಂಗದ ಆನಂದದಿಂದ ಕುಲುಕುಲು ನಗುತ್ತಿದ್ದರು. ಅವರ ಮಾತಿನ ಅಭಿಪ್ರಾಯವು ಈರೀತಿಯಾಗಿದ್ದಿತು:—

“ ಅಧಿಕಾರಿಗಳ ಅತ್ಯಾಚಾರದಿಂದ ವಿವೇಕವನ್ನು ಕಳೆದುಕೊಂಡ ಸೈನಿಕರನ್ನು ಹೇಗೂ ತಡೆಯುವುದಾಗಲಿಲ್ಲ. ನಿರ್ದಿಷ್ಟವಾದ ದಿಸವು ಇನ್ನೂ ದೂರದಲ್ಲಿದೆ; ಇಂದು ೧೦ನೆಯ ತಾರೀಖು. ಮಿಕ್ಕಕಡೆಗಳಲ್ಲಿ ಇನ್ನೂ ಸಿದ್ಧತೆಯಾಗಿರಲಿಕ್ಕಿಲ್ಲ. ಮತ್ತೂ ಒಂದು ತಪ್ಪಾಯಿತು. ಅರ್ಧ ತಾಸು ಮೊದಲೇ ನಾವು ಶಸ್ತ್ರವನ್ನೆತ್ತಿದೆವು. ಫಿರಂಗಿಗಳು ಪ್ರಾರ್ಥನೆಯ ವೇಳೆಯನ್ನು ಬದಲಾಯಿಸಿದ್ದುದು ನಮಗೆ ತಿಳಿದಿರಲಿಲ್ಲ. ಆದುದರಿಂದ ಅವರೆಲ್ಲರೂ ಬದುಕಿಕೊಂಡರು. ”

“ ಆಗಲಿ; ಫಿರಂಗಿಗಳು ಕೈತಪ್ಪಿ ಹೋಗಿಲ್ಲ. ಅಲ್ಲಿ ಆಗದೆ ಇದ್ದುದು

ಇಲ್ಲಿ ಆಗುವುದು. ಇಲ್ಲಿ ಎಲ್ಲವೂ ಸರಿಯಾಗಿವೆ. ಯಾರಿಗೂ ಸಂಶಯದ ಗಾಳಿ ಕೂಡ ಸೋಂಕಿಲ್ಲ. ನಗರವಾಸಿಗಳೂ ಸೈನಿಕರೂ ನಮಗೆ ತುಂಬ ಅನುಕೂಲರಾಗಿದ್ದಾರೆ. ನಮ್ಮಲ್ಲಿ ಕೆಲವರು ಲಕನೌವಿಗೂ ಕೆಲವರು ಝೂಂಸಿ ಪೇಶಾವರಗಳಿಗೂ ಹೋಗುವೆವು"

"ಪೇಶಾವರದ ವರೆಗಿನ ಎಲ್ಲ ಸೇನಾನಿವಾಸಗಳಿಗೂ ನಿನ್ನೆಯೇ ಪತ್ರಗಳು ಹೋಗಿವೆ. ನೀವೂ ಆ ಎಲ್ಲ ಸ್ಥಳಗಳಿಗೆ ದರ್ಶನಕೊಡಬೇಕು."

"ನೀವು ಮೊದಲು ಶಸ್ತ್ರಾಗಾರವನ್ನು ವಶಮಾಡಿಕೊಳ್ಳಬೇಕು. ಬಾದ ಷಹನನ್ನು ಒಡಂಬಡಿಸಿ ಆತನನ್ನು ಸಿಂಹಾಸನದ ಮೇಲೆ ಕುಳ್ಳಿರಿಸಿ ಆತನ ಹೆಸರಿನಿಂದ ಎಲ್ಲ ಸಂಸ್ಥಾನಿಕರಿಗೂ ಆಜ್ಞಾಪತ್ರಗಳನ್ನು ಕಳುಹಬೇಕು. ಹೆಚ್ಚು ತಡಮಾಡಕೂಡದು. ಎಲ್ಲಕ್ಕೂ ಮೊದಲು ಯಮುನೆಯ ಸೇತು ವೆಯ ಕಾವಲಿನವರನ್ನು ಒಲಿಸಿಕೊಂಡು ದಾರಿಯನ್ನು ವಶಮಾಡಿಕೊಳ್ಳಿರಿ. ಭಗವಂತನಿದ್ದಾನೆ. ನಾವು ಧರ್ಮಕ್ಕಾಗಿ ಶಸ್ತ್ರವನ್ನೆತ್ತಿದ್ದೇವೆ. ಧರ್ಮವಿದ್ದಲ್ಲಿ ಜಯವಿರುವುದು. ಫಿರಂಗಿಗಳ ಹಾಗೆ ನಾವು ಅಧರ್ಮದಿಂದ ರಾಜ್ಯವನ್ನು ಗಳಿಸಿ ಅನ್ಯರ ಧರ್ಮನಾಶದ ಕಾರ್ಯದಲ್ಲಿ ತೊಡಗಿದವರಲ್ಲ. ಈಗ ಹೆಚ್ಚಾಗಿ ಮಾತಾಡಲು ಅವಕಾಶವಿಲ್ಲ. ಇನ್ನೊಮ್ಮೆ ಕೂಡಿದಾಗ ಮಾತಾಡುವ"

ಮುಂಜಾನೆ ಎಂಟುಗಂಟೆಯ ಸಮಯಕ್ಕೆ ಅಶ್ವಬಲದವರು ಯಮು ನೆಯ ಸೇತುವೆಯನ್ನು ದಾಟಿ ಬಂದರು. ಅವರು ನೆಟ್ಟಗೆ ಅರಮನೆಗೆ ಹೋಗಿ ತಾವು ಮೀರತದಲ್ಲಿಯ ಫಿರಂಗಿಗಳನ್ನು ಸದೆಬಡಿದು ಇಲ್ಲಿಗೆ ಬಂದಿರುವೆ ವೆಂದೂ ಮೊಗಲ್ ಸಾಮ್ರಾಜ್ಯದ ಪುನರುದ್ಧಾರವೂ ಹಿಂದು ಮಹಮ್ಮ ದೀಯರ ಧರ್ಮಸಂರಕ್ಷಣೆಯೂ ತಮ್ಮ ಮುಖ್ಯ ಧ್ಯೇಯಗಳೆಂದೂ ಬಾದಷಹನು ತಮಗೆ ಆಶ್ರಯಕೊಡಬೇಕೆಂದೂ ಕೂಗಾಡತೊಡಗಿದರು.

ರಣೋನ್ಮತ್ತರಾದ ಸೈನಿಕರ ಕೋಲಾಹಲ ಧ್ವನಿಯನ್ನು ಕೇಳಿ ಭಯ ಚಕಿತನಾದ ಬಹದ್ದೂರಷಹನು ಅರಮನೆಯ ಸಂರಕ್ಷಕ ಸೇನೆಯ ಅಧಿಪತಿ ಡಗ್ಲಾಸ ಸಾಹೇಬನನ್ನು ಕರೆಯಿಸಿದನು. ಬಹದ್ದೂರಷಹನಿಗೆ ಓಡಾಡು ವಷ್ಟು ಶಕ್ತಿಯಿರಲಿಲ್ಲ. ಆತನು ಊರುಗೋಲಿನ ಆಧಾರದಿಂದ ಎದ್ದುನಿಂತು ರಾಜವೈದ್ಯ ಅಸಾನುಲ್ಲಾಖಾನನ ಕೈ ಹಿಡಿದುಕೊಂಡು ದಿವಾಣೀ-ಈ- ಆಮಕ್ಕೆ ಬಂದಿದ್ದನು. ಡಗ್ಲಾಸ ಸಾಹೇಬನು, ಅರಮನೆಯ ಮಾಳಿಗೆಯ

ಮೇಲೆ ನಿಂತಿರುವುದನ್ನು ನೋಡಿದೊಡನೆ ದಂಗೆಗಾರರು "ದೀನ್ ದೀನ್" ಎಂದು ಕೂಗುತ್ತ ಶಸ್ತ್ರಗಳನ್ನೆತ್ತಿ ಕೆಳಗೆಬಾರೆಂದು ಕರೆದರು. ಡಗ್ಲಾಸ್ ಸಾಹೇಬನು ಕೊನೆಗೆ ನಿರುಪಾಯನಾಗಿ ಬೇರೆ ದಾರಿಯಿಂದ ಹೊರಗೆಬಂದು ದಿಲ್ಲಿಯ ಕಮಿಷನರ ಫ್ರೇಜರ್ ಸಾಹೇಬನನ್ನು ಸಂಗಡ ಕರೆದುಕೊಂಡು ಪ್ರಾಸಾದ ರಕ್ಷಣೆಗೆ ನಿಯುಕ್ತರಾಗಿದ್ದ ಸೈನಿಕರನ್ನು ಕುರಿತು ಈ ದಂಗೆ ಗಾರರನ್ನು ಹೊಡೆದೋಡಿಸಿರೆಂದು ಅಪ್ಪಣೆ ಮಾಡಿದನು. ದಂಗೆಗಾರರು ನಾವು ಧರ್ಮರಕ್ಷಣೆಗಾಗಿ ಜೀವದ ಹಂಗುದೊರೆದು ಈ ಫಿರಂಗಿಗಳೊಡನೆ ಧರ್ಮಯುದ್ಧವನ್ನು ಸಾರಿರುವಾಗ ನೀವು ನಮ್ಮ ಮೇಲೆ ಶಸ್ತ್ರವೆತ್ತುವಿರಾ? "ದೀನ್ ದೀನ್" ಎಂದು ಕೂಗಿದರು. ದಿಲ್ಲಿಯ ಸೈನಿಕರು ಸೇನಾಪತಿಯ ಮಾತನ್ನು ಲಕ್ಷಿಸದೆ ಸುಮ್ಮನೆ ನಿಂತುಬಿಟ್ಟರು. ಈ ಸ್ಥಿತಿಯನ್ನು ಕಂಡು ಸಾಹೇಬರು ವಿಸ್ಮಿತರಾದರು. ಅವರ ಅಂಗರಕ್ಷಕರೂ ದಂಗೆಗಾರರನ್ನು ಕೂಡಿಕೊಂಡರು. ಕೊನೆಗೆ ಸಾಹೇಬರು ನಿರುಪಾಯರಾಗಿ ಕಾಶ್ಮೀರ ಮಹಾದ್ವಾರದ ದಿಕ್ಕಿಗೆ ಧಾವಿಸಿ ನಡೆದರು. ಅಷ್ಟರಲ್ಲಿ ದಿಲ್ಲಿಯ ಕಲೆಕ್ಟರ ಹಚಿನ್‌ಸನ್ ಸಾಹೇಬನೂ ಅಲ್ಲಿಗೆ ಬಂದಿದ್ದನು. ಕೊನೆಗೆ ಅಸಂಖ್ಯ ಸೈನಿಕರ ಆಕ್ರಮಣದಿಂದ ಮೂವರೂ ಯುರೋಪಿಯನ್ ಅಧಿಕಾರಿಗಳು ಆಹತ ರಾಗಿ ನೆಲಕ್ಕೆ ಉರುಳಿದರು.

ದಂಗೆಗೆ ಆರಂಭವಾದೊಡನೆ ದಿಲ್ಲೀನಗರದ ಬೇರೆ ಬೇರೆ ಭಾಗಗಳಿಂದ ಅನೇಕರು ಯುರೋಪಿಯನ್ ಸ್ತ್ರೀಯರು ಅರಮನೆಗೆ ಬಂದು ಆಶ್ರಯ ಹೊಂದಿದರು. ಪಟ್ಟದರಸಿ ಝೀನ್ನತಮಹಾಲಳು ಅವರೆಲ್ಲರನ್ನೂ ಆದರದಿಂದ ಉಪಚರಿಸಿ ತನ್ನ ರಾಣೀವಾಸದಲ್ಲಿ ಅಡಗಿಸಿ ಇಟ್ಟುಕೊಂಡಳು. ಬ್ರಿಟಿಷರ ರಾಜಕಾರಣಕ್ಕಾಗಿ ರಾಣಿಯು ಅಸಂತುಷ್ಟಳಾಗಿದ್ದರೂ ತನ್ನ ಸ್ತ್ರೀಧರ್ಮ ವನ್ನು ಮರೆತಿರಲಿಲ್ಲ; ನಾರೀ ಹೃದಯವನ್ನು ಕಳೆದುಕೊಂಡಿರಲಿಲ್ಲ. ಆಕೆಯ ಮನಸ್ಸು ನಿರಾಶ್ರಿತರಾಗಿ ತನ್ನ ಮರೆಹೊಕ್ಕ ಸ್ತ್ರೀಯರನ್ನು ಕೊಲೆಪಾತಕಿ ಗಳ ಕೈಗೆ ಒಪ್ಪಿಸುವಷ್ಟು ಕ್ರೂರವಾಗಿರಲಿಲ್ಲ. ದಂಗೆಗಾರರು ಅಂತಃಪುರ ವನ್ನು ಶೋಧಿಸುವವರೆಗೂ ಅವರೆಲ್ಲರನ್ನು ತನ್ನ ಆಶ್ರಯದಲ್ಲಿಟ್ಟುಕೊಂಡು ಕೊನೆಗೆ ನಿರುಪಾಯಳಾಗಿ ಬೇರೆ ಕಡೆಗೆ ಕಳುಹಿದಳು.† ಇತ್ತ ಬಹಾದ್ದೂರ

† Indian Church during the Great Rebellion p. 51.

ಷಹನು ಕೂಡ ದಂಗೆಗಾರರ ಕ್ರೂರಾಚರಣೆಯನ್ನು ಕಂಡು ಮನಮರುಗಿ. ಆ ಎಲ್ಲ ಸಂಗತಿಗಳನ್ನು ಆಗ್ರಾದಲ್ಲಿದ್ದ ಕಾಲ್ವಿನ್ ಸಾಹೇಬನಿಗೆ ತಿಳಿಸಹಲು ಒಂದು ಪತ್ರವನ್ನು ಕೊಟ್ಟು ತನ್ನ ಸಂಬುಗೆಯ ಆಳನ್ನು ಕಳುಹಿದನು. ಆ ಪತ್ರದಲ್ಲಿ ದಂಗೆಗಾರರು ನಡೆಯಿಸಿರುವ ಅತ್ಯಾಚಾರಗಳನ್ನೆಲ್ಲ ಉಲ್ಲೇಖಿಸಿ ತಾನು ದಂಗೆಗಾರರ ಕೈಯಲ್ಲಿ ಸಿಕ್ಕಿಬಿದ್ದಿರುವೆನೆಂದೂ ಅವರು ತನ್ನ ಹೆಸರಿನಿಂದ ಮನಸ್ಸು ಬಂದಂತೆ ಕಾರ್ಯಭಾರವನ್ನು ನಡೆಯಿಸಿರುವರೆಂದೂ ಸ್ಪಷ್ಟವಾಗಿ ಬರೆಯಿಸಿದ್ದನು. ಈ ಪತ್ರವು ಮೇ ತಿಂಗಳ ೧೫ನೆಯ ತಾರೀಖಿಗೆ ಆಗ್ರಾದಲ್ಲಿ ಕಾಲ್ವಿನ್‌ಸಾಹೇಬನಿಗೆ ಮುಟ್ಟಿತು. ಆತನು ಕೂಡಲೆ ಈ ಎಲ್ಲ ಸಂಗತಿಗಳನ್ನು ತಾರಿನಿಂದ ಕಲಕತ್ತೆಗೆ ತಿಳುಹಿದನು. ಈ ರೀತಿ ಬಹದ್ದೂರಷಹನ ನೆರವಿನಿಂದಲೇ ದಿಲ್ಲಿಯಲ್ಲಿಯ ದಂಗೆಯ ವಾರ್ತೆಯು ಮೊತ್ತಮೊದಲು ಹಿಂದುಸ್ಥಾನ ಸರಕಾರಕ್ಕೆ ಗೊತ್ತಾಯಿತು. *

ಇತ್ತ ಬಹದ್ದೂರಷಹನೂ ಆತನ ರಾಣಿ ಝೀನತಮಹಾಲಳೂ ಈ ರೀತಿ ಬ್ರಿಟಿಷರಿಗೆ ಅನುಕೂಲರಾಗಿ ಕಾರ್ಯಮಾಡುತ್ತಿರುವಾಗಲೇ ಅತ್ತ ಬ್ರಿಟಿಷ ಅಧಿಕಾರಿಗಳು ದಂಗೆಗಾರರ ಕೃತಿಯಿಂದ ಬಾದಷಹನೇ ಈ ದಂಗೆಗೆ ಮೂಲಕಾರಣನೆಂದು ಸಿದ್ಧಾಂತಮಾಡಿಕೊಳ್ಳುತ್ತಿದ್ದರು. ಇದಕ್ಕೇ ದೈವಗತಿಯೆನ್ನುವುದು. ಒರೆಹ ಮೂಲಕವಾದ ಆಧಾರಗಳು ಇರುತ್ತಿದ್ದರೂ ಆಗಿನ ಅಲ್ಲೋಲಕಲ್ಲೋಲವಾದ ವಾತಾವರಣದಲ್ಲಿ ಬ್ರಿಟಿಷ ಸೈನಿಕರಿಗೂ ಅಧಿಕಾರಿಗಳಿಗೂ ಸತ್ಯಶೋಧನೆಗೆ ಅವಕಾಶವೂ ಇರಲಿಲ್ಲ; ಅದಕ್ಕೆ ಬೇಕಾದ ಮನಸ್ಸಿನ ಶಾಂತಿಯೂ ಇರಲಿಲ್ಲ. ಒಂದು ಕಡೆಗೆ ಅತ್ಯಂತ ಕ್ರೂರವಾದ ಕೊಲೆ ಸುಲಿಗೆಗಳು ನಡೆದಿರುವಾಗಲೇ ಇನ್ನೊಂದು ಕಡೆಗೆ ಕುಸುಮಕೋಮಲವಾದ ಅಂತಃಕರಣದ ದಯೆ, ಪರದುಃಖಕಾತರತೆ, ವೈರಿಗಳನ್ನೂ ಕರುಣಾದೃಷ್ಟಿಯಿಂದ ನೋಡುವ ಉಜ್ವಲವಾದ ನೀತಿ, ಇವು ದೃಷ್ಟಿಗೋಚರವಾಗುತ್ತಿದ್ದುವು. ಇದೀಗ ಭರತಖಂಡದ ವಿಶಿಷ್ಟ ಧರ್ಮ.

ದಿಲ್ಲಿಯ ಸುಪ್ರಸಿದ್ಧವಾದ ಅಸ್ತ್ರಾಗಾರವು ಬಾದಷಹನ ಅರಮನೆಗೆ ತುಸ ದೂರದಲ್ಲಿ ನಗರದ ಒಳಭಾಗದಲ್ಲಿಯೇ ಇದ್ದಿತು. ಅಪರಿಮಿತ ಮದ್ದುಗುಂಡುಗಳೂ ಅಸಂಖ್ಯ ಕತ್ತಿ ಢಾಲು ಭಲ್ಲೆ ತುಬಾಕಿ ತೋಫುಗಳೂ ಅಲ್ಲಿ

* Martin Indian Empire Vol. II P. 159.

ಸಂಗ್ರಹೀತವಾಗಿದ್ದುವು. ಉತ್ತರಹಿಂದುಸ್ಥಾನದ ಅನೇಕ ಸೇನಾನಿವಾಸಗಳಿಗೆ ದಿಲ್ಲಿಯಿಂದಲೇ ಯುದ್ಧೋಪಕರಣಗಳನ್ನು ಒದಗಿಸಿಕೊಡುತ್ತಿದ್ದರು. ಲೆಫ್ಟಿನೆಂಟ್ ಜಾರ್ಜ್ ವುಯಿಲೋಬಿ ಮುಂತಾದ ಒಂಬತ್ತು ಜನ ಯುರೋಪಿಯನರೂ ಅನೇಕಜನ ದೇಶೀಯ ಸೈನಿಕರೂ ಆ ಅಸ್ತ್ರಾಗಾರದ ರಕ್ಷಕರಾಗಿದ್ದರು. ವುಯಿಲೋಬಿಯು ಅರಮನೆಯ ಮುಂದೆ ಕೋಲಾಹಲವು ಪ್ರಾರಂಭವಾದೊಡನೆ ಅಸ್ತ್ರಾಗಾರಕ್ಕೆ ಬಂದು ಅದನ್ನು ಸಂರಕ್ಷಿಸುವ ಕಾರ್ಯವನ್ನು ಕೈಕೊಂಡನು. ಅಸ್ತ್ರಾಗಾರದ ಬಾಗಿಲು ಮುಚ್ಚಿತ್ತು. ಹೊರಗೆ ಎರಡು ತೋಫುಗಳಲ್ಲಿ ಮದ್ದುಗುಂಡುಗಳನ್ನು ತುಂಬಿಕೊಂಡು ಇಬ್ಬರು ಯುರೋಪಿಯನ್ ಸೈನಿಕರು ನಿಂತಿದ್ದರು. ಮಧ್ಯ ಅಸ್ತ್ರಾಗಾರದಿಂದ ತುಸ ದೂರದಲ್ಲಿದ್ದ ಒಂದು ಗಿಡದವರೆಗೆ ನೆಲದೊಳಗೆ ಮದ್ದು ಹಾಕಿ ಮೇಲೆ ಮಣ್ಣು ಮುಚ್ಚಿ ಸುರಂಗವನ್ನು ರಚಿಸಿಕೊಂಡು ಗಿಡದ ಕೆಳಗೆ "ಸ್ಕಲಿ" ಎಂಬ ಯುರೋಪಿಯನನೊಬ್ಬನು ವುಯಿಲೋಬಿಯ ಕೊನೆಯ ಅಪ್ಪಣೆಯನ್ನು ನಿರೀಕ್ಷಿಸುತ್ತ ನಿಂತಿದ್ದನು. ಸಾಧ್ಯವಾದಮಟ್ಟಿಗೆ ಅಸ್ತ್ರಾಗಾರವನ್ನು ಸಂರಕ್ಷಿಸಿಕೊಳ್ಳಬೇಕೆಂದೂ ಕೈಮೀರಿದಾಗ ಅದನ್ನು ಹಗೆಗಳಿಗೊಪ್ಪಿಸದೆ ಕೊಳ್ಳಿಕೊಟ್ಟು ಹಾರಿಸಿಬಿಡಬೇಕೆಂದೂ ಅವರು ನಿಶ್ಚಯಿಸಿಕೊಂಡಿದ್ದರು.

ಅಷ್ಟರಲ್ಲಿ ದಂಗೆಗಾರರು ಅಲ್ಲಿಗೆ ಬಂದು ಅಸ್ತ್ರಾಗಾರವನ್ನು ತಮಗೆ ಒಪ್ಪಿಸಬೇಕೆಂದು ಕೇಳಿದರು. ವುಯಿಲೋಬಿಯೂ ಆತನ ಅನುಯಾಯಿಗಳೂ ಮರುಮಾತಾಡಲಿಲ್ಲ. ಅಸ್ತ್ರಾಗಾರದ ಒಳಗಿನಿಂದ ದೇಶೀಯರು "ದೀನ್ ದೀನ್" ಎಂದು ಒದರುತ್ತ ಸೂಲೇಣಿಗಳಿಂದ ಗೋಡೆಯನ್ನು ಏರಿ ಹೊರಗೆ ಇಳಿದು ಬಂದರು. ಯುದ್ಧಾರಂಭವಾಯಿತು. ಬಹುಜನ ದಂಗೆಗಾರರ ಆಕ್ರಮಣವನ್ನು ಒಂಬತ್ತೇಜನ ಯುರೋಪಿಯನರು ಎಷ್ಟು ಹೊತ್ತಿನವರೆಗೆ ತಾಳಿಕೊಂಡಾರು? ಈಗಾಗಲೇ ಅವರಲ್ಲಿ ನಾಲ್ವರು ಸತ್ತು ಬಿದ್ದರು. ವುಯಿಲೋಬಿಯೂ ಆತನ ಮೂವರು ಅನುಯಾಯಿಗಳೂ ದೂರ ಸರಿದು ಹೋದರು. ವುಯಿಲೋಬಿಯು ಟೊಪ್ಪಿಗೆ ತೂಗಿ ಸಂಜ್ಞೆಮಾಡಿದನು. ಗಿಡದ ಅಡಿಗೆ ನಿಂತ ಸ್ಕಲಿಯು ತನ್ನ ಕಾಲಕೆಳಗಣ ಮಣ್ಣು ಕೆದರಿ ಮದ್ದಿಗೆ ಕೊಳ್ಳಿಕೊಟ್ಟನು. ಭಯಂಕರವಾದ ಸ್ಫೋಟದೊಡನೆ ತನ್ನ ಶರೀರವು ಪುಡಿಪುಡಿಯಾಗಿ ಗಾಳಿಯಲ್ಲಿ ಸೇರಿಹೋಗುವದೆಂಬದನ್ನು ಆತನು ಚೆನ್ನಾಗಿ

ಅರಿತಿದ್ದನು. ಆದರೂ ಆತನು ಸ್ವದೇಶಕ್ಕೂ ಸ್ವಜನರಿಗೂ ಇದರಿಂದಾಗುವ ಉಪಕಾರದ ಮಾನದಿಂದ ತನ್ನ ಶರೀರವು ಕ್ಷುದ್ರಪದಾರ್ಥವೆಂದು ಬಗೆದು ಸ್ವದೇಶಾಭಿಮಾನದ ಮೂರ್ತಿಯಂತೆ ಸ್ಥಿರಗಂಭೀರವಾಗಿ ನಿಂತಿದ್ದನು.

ಪರಕ್ಷಣದಲ್ಲಿಯೇ ಘನಗಂಭೀರವಾದ ಸ್ಫೋಟದಿಂದ ಜನರ ಕಿವಿಗಳು ಕಿವುಡಾದುವು. ಅಗ್ನಿನಾರಾಯಣನ ಕರಾಳವಾದ ಜ್ವಾಲೆ ಆಕಾಶವನ್ನು ವ್ಯಾಪಿಸಿತು. ಪ್ರಳಯಕಾಲದ ಕಾರ್ಮೋಡಗಳಂತೆ ಧೂಮ್ರರಾಶಿಯು ನಭೋಮಂಡಲವನ್ನು ಮುಸುಕಿ ನಗರದಲ್ಲೆಲ್ಲ ಕತ್ತಲೆಕವಿಯಿತು. ಸ್ಕಲಿ ಸಾಹೇಬನ ಶರೀರವು ಭಯಂಕರವಾದ ಆಘಾತದಿಂದ ನುಚ್ಚುನೂರಾಗಿ ಸಿಡಿದುಬಿದ್ದಿತು. ಒಂದುಸಾವಿರಕ್ಕೆ ಕಡಮೆಯಿಲ್ಲದಷ್ಟು ಜನ ವಿದ್ರೋಹಿಗಳು ಪ್ರಳಯಾಗ್ನಿಯಲ್ಲಿಯ ಪತಂಗಗಳಂತೆ ಬೆಂದುಬಿದ್ದರು. ಅಸ್ತ್ರಾಗಾರವು ವಿಧ್ವಂಸವಾಗಿ ಹೋಯಿತು. ಅಲ್ಲಿಂದ ಹೊರಟ ವ್ರಯಿಲೋಬಿ ಮೊದಲಾದವರು ಶತ್ರುಗಳ ಕೈಗೆ ಸಿಕ್ಕು ಮರಣಹೊಂದಿದರು.

ಈ ಸಮಯದಲ್ಲಿ ದಿಲ್ಲಿಯಲ್ಲಿಯ ಸೇನಾನಿವಾಸದಲ್ಲಿ ೩೫೦೦ ಜನ ದೇಶೀಯ ಸೈನಿಕರೂ ಒಂದುನೂರರುವತ್ತು ಗೋಲಂದಾಜರ ಒಂದು ಚಿಕ್ಕ ಸೈನ್ಯವೂ ಇದ್ದುವು. ಸೇನಾಪತಿ ರಿಪ್ಲೇಸಾಹೇಬನು ನಗರದಲ್ಲುಂಟಾದ ಕೋಲಾಹಲವನ್ನು ನಿಲ್ಲಿಸುವುದಕ್ಕೆಂದು ತನ್ನ ಪದಾತಿದಳದವರೊಡನೆ ಹೊರಟನು. ದಾರಿಯಲ್ಲಿ ದಂಗೆಗಾರರು "ನಾವು ನಿಮ್ಮ ಧರ್ಮಬಾಂಧವರು. ನಿಮ್ಮೊಡನೆ ಸಮಗೆ ವೈರವಿಲ್ಲ. ನಮ್ಮೆಲ್ಲರ ಧರ್ಮನಾಶಕ್ಕೆ ಯತ್ನಿಸುವ ಫಿರಂಗಿಗಳೊಡನೆ ನಾವು ಯುದ್ಧವನ್ನು ಸಾರಿದ್ದೇವೆ. ನೀವು ನಮ್ಮ ಮೇಲೆ ಶಸ್ತ್ರವೆತ್ತುವಿರಾ? ದೀನ್! ದೀನ್!" ಎಂದು ಕೂಗಿದರು. ಸೈನಿಕರ ಮನಸ್ಸು ತಿರುಗಿತು. ಸೇನಾಪತಿಯ ಅಪ್ಪಣೆಯಂತೆ ತುಬಾಕಿಗಳು 'ಧಡ ಧಡ' ಹಾರಿದುವು. ಆದರೆ ವಿರೋಧಿಗಳಿಗೆ ಒಂದೂ ಗುಂಡು ತಾಗದಿರುವುದನ್ನು ಕಂಡು ಸೇನಾಪತಿಯು ತಿರುಗಿನೋಡಿದಾಗ ಎಲ್ಲರ ತುಬಾಕಿಗಳು ಮೇಲ್ಮುಖವಾಗಿದ್ದುವು. ಹಗೆಗಳ ಆಕ್ರಮಣದಿಂದ ರಿಪ್ಲೇ ಸಾಹೇಬನು ಮರಣಹೊಂದಿದನು. ಸೈನಿಕರು ದಂಗೆಗಾರರನ್ನು ಕೂಡಿಕೊಂಡರು. ಇದೇ ರೀತಿ ದಿಲ್ಲಿಯಲ್ಲಿಯ ಎಲ್ಲ ಸೇನಾದಳಗಳು ದಂಗೆಗಾರರನ್ನು ಕೂಡಿಕೊಂಡುವು. ಸೇನಾಧಿಕಾರಿಗಳಲ್ಲಿ ಬಹುಜನರು ಮೃತ್ಯುವಿಗೀಡಾದರು.

ಇತ್ತ ಭಯಂಕರವಾದ ನರಹತ್ಯೆಯು ಕಾರ್ಯವು ನಡೆದಿರುವಾಗಲೇ ಹಲವರು ದೇಶೀಯ ಸೇನಾಧಿಕಾರಿಗಳ ತಂತ್ರದಿಂದ ಅರಮನೆಯಲ್ಲಿ ಬಹದ್ದೂರಷಹನ ರಾಜ್ಯಾರೋಹಣ ಸಮಾರಂಭವು ನಡೆಯಿತು; ಯಾವುದನ್ನೂ ಅರಿಯದ ವೃದ್ಧ ಬಹದ್ದೂರಷಹನ ಹೆಸರಿನಿಂದ ಹಲವು ಆಜ್ಞಾಪತ್ರಗಳು ಸಹಿಗೆ ಸಿದ್ಧವಾದುವು; ಬಾದಷಹನು ಗಡಗಡನೆ ನಡುಗುವ ಕೈಗಳಿಂದ ಅವರು ತೋರಿಸಿದಲ್ಲಿ ಸಹಿ ಮಾಡಿದನು.

ದಿಲ್ಲಿಯಿಂದ ಹೊರಟ ಅನೇಕ ಯುರೋಪಿಯನ್ ಕುಟುಂಬಗಳು ಬಹುಕಷ್ಟದಿಂದ ಬಹುದಿನ ಪ್ರವಾಸಮಾಡಿ ಮೀರತ ಅಂಬಾಲಾ ಆಗ್ರಾ ಮುಂತಾದ ಸೇನಾನಿವಾಸಗಳನ್ನು ಸೇರಿದರು. ದಾರಿಯಲ್ಲಿ ಅವರ ಕರುಣಾಜನಕವಾದ ಅವಸ್ಥೆಯನ್ನು ಕಂಡು ಹಳ್ಳಿಯ ನಿವಾಸಿಗಳು ಅವರಿಗೆ ಪರಿಪರಿಯಿಂದ ನೆರವಾಗುತ್ತಿದ್ದರು; ಹಾಲು ಹಣ್ಣುಗಳನ್ನೂ ಹಿಟ್ಟು ರೊಟ್ಟಿಗಳನ್ನೂ ಒದಗಿಸಿಕೊಡುತ್ತಿದ್ದರು. ವಿರೋಧಿಗಳ ಸುಳಿವು ಹತ್ತಿದರೆ ಅವರನ್ನು ತಮ್ಮ ಮನೆಗಳಲ್ಲಿ ಅಡಗಿಸಿಕೊಳ್ಳುತ್ತಿದ್ದರು. ಭರತಭೂಮಿಯು ನಿಜವಾಗಿ ಧರ್ಮಭೂಮಿಯೆಂಬುದು ಅವರ ಅನುಭವಕ್ಕೆ ಬಂದಿತು. ಸೈನಿಕರು ಕೂಡ ಧರ್ಮಕ್ಕಾಗಿಯೇ ಯುದ್ಧವನ್ನು ಹೂಡಿದ್ದರು. ಬಾಹ್ಯ ವಿರೋಧವು ಅಂತರಂಗದ ಧಾರ್ಮಿಕಭಾವನೆಯ ಕೊಲೆ ಮಾಡಲಾರದು. ವಿಪದ್ಗ್ರಸ್ತರಾದ ವಿದೇಶೀಯರನ್ನು ನೋಡಿ ಅವರು ತಮ್ಮ ಹಗೆಗಳೆಂಬ ಕಾರಣದಿಂದ ಭಾರತೀಯರ ಅಂತಃಕರಣವು ಕರಗದಿರಲಿಲ್ಲ ಇಂತಿರುವಾಗ ಆ ಕಾಲದ ವರ್ತಮಾನಪತ್ರಗಳ ಚಾಲಕರು ಮಾತ್ರ ಅಮಾನುಷವಾದ ಕೊಲೆ ಸುಲಿಗೆಗಳ ಮತ್ತು ಯುರೋಪಿಯನ್ ಸ್ತ್ರೀಯರ ಮಾನಭಂಗದ ಪುರುಷರ ಮೇಲೆ ನಡೆಯಿಸಿದ ಅತ್ಯಾಚಾರದ ವಾರ್ತೆಗಳನ್ನು ಮೈಮೇಲೆ ಮುಳ್ಳುಗಳೇಳುವಷ್ಟು ಉಗ್ರವಾಗಿ ಬಣ್ಣಿಸಿ ಬರೆಯುತ್ತಿದ್ದರು. ಇಂತಹ ಸಮಯಗಳಲ್ಲಿ ಅಕಲ್ಪಿತ ಅಮಾನುಷಕೃತ್ಯಗಳನ್ನು ಬಣ್ಣಿಸಿ ಬರೆದು ವಾಚಕರ ಲಕ್ಷ್ಯವನ್ನು ಎಳೆದುಕೊಳ್ಳುವುದು ವೃತ್ತಪತ್ರಗಳ ಒಂದು ಲಕ್ಷಣ.

ದಿಲ್ಲಿಯ ನಗರವಾಸಿಗಳಾದ ಮಹಮ್ಮದೀಯರಲ್ಲಿ ಹಲವರು ಧರ್ಮಯುದ್ಧಕ್ಕೆ ಸಿದ್ಧರಾಗಿ ಸೈನಿಕರನ್ನು ಕೂಡಿಕೊಂಡಿದ್ದರು. ನಾಲ್ಕೈದು ದಿನಗಳ ವರೆಗೆ ಪೇಟೆಯಲ್ಲಿ ವ್ಯಾಪಾರೋದ್ಯೋಗಗಳು ನಡೆಯಲಿಲ್ಲ. ಎಲ್ಲ

ಅಂಗಡಿಗಳನ್ನು ಮುಚ್ಚಿದ್ದರು. ಸಾವುಕಾರರು ಸೈನಿಕರಿಗೆ ಸಹಾಯಮಾಡಲು ಮೊದಲು ಸಮ್ಮತಿಸಲಿಲ್ಲ. ಕೊನೆಗೆ ಅವರಿಗೆ ಬೇಕಾಗುವ ಆಹಾರ ಸಾಮಗ್ರಿಯನ್ನು ಒದಗಿಸಿಕೊಡುವೆವೆಂದರು. ಸೈನಿಕರಲ್ಲಿ ಪ್ರತಿ ಅಶ್ವಾರೋಹಿಗೆ ದಿನಕ್ಕೊಂದು ರೂಪಾಯಿಯಂತೆಯೂ ಪ್ರತಿಪದಾತಿದಳದವನಿಗೆ ನಾಲ್ಕಾಣೆಯಂತೆಯೂ ವೇತನ ಕೊಡಬೇಕೆಂದು ಗೊತ್ತಾಯಿತು. ಸ್ಕಲಿ ಸಾಹೇಬನು ಕೊಳ್ಳಿ ಕೊಟ್ಟು ಹಾರಿಸಿದ ಅಸ್ತ್ರಾಗಾರವು ಸಂಪೂರ್ಣ ನಾಶವಾಗಿರಲಿಲ್ಲ. ಅದರಲ್ಲಿ ೯ ಲಕ್ಷ ತೋಟೆಗಳೂ ೧೧ ಸಾವಿರ ತುಬಾಕಿಗಳೂ ಹಲವು ವಿಧದ ತೋಫುಗಳೂ ಅಸಂಖ್ಯ ಕತ್ತಿ ಭಲ್ಲೆಗಳೂ ಉಳಿದಿದ್ದುವು. ಸೇನಾನಿವಾಸದಲ್ಲಿಯ ಮದ್ದಿನಮನೆಯಲ್ಲಿ ೧೧ ಸಾವಿರ ಪೀಪಾಯಿ ಮದ್ದಿನ ಸಂಗ್ರಹವಿದ್ದಿತು. ಆ ಕಾಲದಲ್ಲಿ ಎಂಟು ಆಣೆಗಳಿಗೆ ಒಂದು ತುಬಾಕಿ, ನಾಲ್ಕು ಆಣೆಗಳಿಗೆ ಒಂದು ಮೇಲ್ತರದ ಖಡ್ಗ, ಆಣೆಗೊಂದು ಸಂಗೀನ ಇವನ್ನು ಮಾರುತ್ತಿದ್ದರು. * ಒಂದೇ ದಿಲ್ಲೀನಗರದಲ್ಲಿ ಈಗಾಗಲೇ ೩೦ ಸಾವಿರ ವಿರೋಧಿಗಳು ಶಸ್ತ್ರಾಸ್ತ್ರಗಳೊಡನೆ ಯುದ್ಧಕ್ಕೆ ಸಿದ್ಧರಾದರು. ಇವರಲ್ಲಿ ಬಹು ಜನರು ಮಹಮ್ಮದೀಯರು.

ಕೊನೆಗೆ ದಿಲ್ಲೀ ಸಗರದಲ್ಲಿ ಲೋಕವಿಖ್ಯಾತರಾದ ಮೊಗಲ್ ಚಕ್ರವರ್ತಿಗಳ ವಂಶಜನಾದ ಬಹದ್ದೂರಷಹನ ಆಳಿಕೆ ಪ್ರಾರಂಭವಾಯಿತು. ಕೆಲವು ಸೇನಾದಳಗಳಲ್ಲಿ ಸೇರಿದ ಧರ್ಮಭ್ರಾಂತಿಯು ರಾಜ್ಯಕ್ರಾಂತಿಯ ಸ್ವರೂಪಕ್ಕೆ ಬಂದಿತು. ದಂಗೆಗಾರರಿಗೆ ಅತ್ಯವಶ್ಯವಾಗಿದ್ದ ಒಬ್ಬ ನಾಯಕನು ದೊರೆತನು. ಅವರು ಅಖಿಲ ಭರತಖಂಡವನ್ನೇ ಆಳಿದ ಮೊಗಲ್ ಬಾದಷಹರ ಉತ್ತರಾಧಿಕಾರಿಯು ತಮ್ಮ ನಾಯಕನಾದನೆಂದು ಸಾರಿದರು. ಆದರೆ ಅವರು ಸುಸಂಘಟಿತವಾಗಿ ಯುದ್ಧವನ್ನು ಆರಂಭಿಸಲಿಲ್ಲ; ಸುಸಂಘಟಿತವಾಗಿ ಕೊನೆಗಾಣಿಸಲೂ ಇಲ್ಲ. ಧರ್ಮನಾಶದ ಭೀತಿಯಿಂದ ಉನ್ಮತ್ತರಾದ ಸೈನಿಕರೂ ರಾಜ್ಯಕ್ರಾಂತಿಯನ್ನು ಬಯಸುವ ಅವರ ಪ್ರೇರಕರೂ ಏಕಕಾಲಕ್ಕೆ ಹೊರಗೆ ಬಂದು ಸುಸಂಘಟಿತವಾಗಿ ಕೆಲಸ ಮಾಡದೆ ಇದ್ದುದರಿಂದ ಅವರ ಪ್ರಯತ್ನವೆಲ್ಲ ನಿಷ್ಫಲವಾಯಿತು.

---

* Martin Indian Empire Vol. II. P. 174

# ಎರಡನೆಯ ಪರಿಚ್ಛೇದ

## ಲಕನೌವಿನಲ್ಲಿ ಕ್ರಾಂತಿ

" Here lies Henry Lawrence who tried to do his duty. May God have mercy on him."

—*Forrest*

ಶ್ರೀ ರಾಮಚಂದ್ರನ ಲೀಲಾಭೂಮಿಯೆನಿಸಿದ ಅಯೋಧ್ಯಾ ಪ್ರಾಂತವು ಪೃಥ್ವೀರಾಜನ ಅಧಃಪತನದ ತರುವಾಯ ಕ್ಷತ್ರಿಯ ರಾಜರ ಕೈಬಿಟ್ಟಿತು ; ಮಹಮ್ಮದ ಘೋರಿಯ ಅನುಯಾಯಿ ಕುತುಬುದ್ದೀನನ ಅಧೀನವಾಗಿ ದಿಲ್ಲಿಯ ರಾಜ್ಯಕ್ಕೆ ಸೇರಿತು; ಮೊಗಲ್ ಬಾದಷಾಹಿಯ ಅಧಿಕಾರ ಪರಿಸಮಾಪ್ತಿಯಾದೊಡನೆ ಅದೊಂದು ಸ್ವತಂತ್ರ ಮಹಮ್ಮದೀಯ ರಾಜ್ಯವಾಗಿ ಪರಿಣಮಿಸಿತು. ಮುಂದೆ ಸುಜಾಉದ್ದೌಲನು ಬ್ರಿಟಿಷರೊಡನೆ ಸಂಗ್ರಾಮವನ್ನು ಹೂಡಿ ಪರಾಜಿತನಾದ ತರುವಾಯ ಅಯೋಧ್ಯೆಯ ರಾಜ್ಯದಲ್ಲಿ ಬ್ರಿಟಿಷರ ಪ್ರವೇಶವಾಯಿತು. ಸುಜಾಉದ್ದೌಲನು ೧೭೬೫ನೆಯ ಇಸವಿಯ ಒಪ್ಪಂದದಂತೆ ತನ್ನ ರಾಜ್ಯದಲ್ಲಿ ಕಂಪನಿಯ ಸೈನ್ಯವನ್ನಿಟ್ಟುಕೊಂಡು ಅದರ ವೆಚ್ಚಕ್ಕಾಗಿ ಪ್ರತಿತಿಂಗಳಿಗೆ ೨೧೦ ಸಾವಿರ ರೂಪಾಯಿ ಕೊಡಬೇಕಾಯಿತು; ರಾಜಧಾನಿಯಲ್ಲಿ ಬ್ರಿಟಿಷ ರೆಸಿಡೆಂಟನ ಪ್ರವೇಶವೂ ಆಯಿತು.

೧೭೭೫ನೆಯ ಇಸವಿಯಲ್ಲಿ ಸುಜಾಉದ್ದೌಲನ ಮರಣದ ತರುವಾಯ ಆತನ ಮಗ ಅಸಫ ಉದ್ದೌಲನು ಅಯೋಧ್ಯೆಯ ನಬಾಬನಾದಾಗ ಕಾಶಿ, ಜೋನಪುರ, ಗಾಜೀಪುರ, ಮತ್ತು ಚೈತಸಿಂಗನ ರಾಜ್ಯ ಇವು, ಒಟ್ಟಿಗೆ ೨೩ ಲಕ್ಷ ರೂಪಾಯಿ ಉತ್ಪನ್ನದ ರಾಜ್ಯವು, ಕಂಪನಿಯ ಸರಕಾರಕ್ಕೆ ಸೇರಿದುವು. ಅಲ್ಲದೆ ನಬಾಬನು ತನ್ನ ರಾಜ್ಯದಲ್ಲಿದ್ದ ಬ್ರಿಟಿಷ ಸೈನ್ಯದ ವೆಚ್ಚಕ್ಕಾಗಿ ಪ್ರತಿ ತಿಂಗಳಿಗೆ ೨೬೦ ಸಾವಿರ ರೂಪಾಯಿ ಕೊಡಬೇಕಾಯಿತು. ಸುಜಾ ಉದ್ದೌಲನ

ಹೆಂಡತಿ ಭಾವ್ರೂ ಬೇಗಮಳಿಗೆ ಅಯೋಧ್ಯೆ ಫೈಜಾಬಾದಗಳನ್ನು ನೆರೆಯ ಸೀಮೆಯೊಡನೆ ಬೇರೊಂದು ಜಹಗೀರಾಗಿ ಬಿಟ್ಟುಕೊಡುವುದಲ್ಲದೆ ಸುಜಾ ಉದ್ದೌಲನ ಅಪರಿಮಿತ ಸಂಪತ್ತನ್ನೂ ಆಕೆಗೆ ಕೊಡಬೇಕೆಂದು ಗೊತ್ತಾಯಿ ಯಿತು. ಮುಂದೆ ವಾರನ್ ಹೇಸ್ಟಿಂಗ್ಸನು ಈ ಅಯೋಧ್ಯೆಯ ಬೇಗಮಳ ವಿಷಯದಲ್ಲಿ ನಡೆಯಿಸಿದ ಕಾರ್ಯಭಾರವನ್ನು ಬರ್ಕ, ಶೆರಿಡಿನ್, ವಿಲ್ ಮತ್ತು ಮಾಂಟಿಗೊಮರಿ ಮುಂತಾದ ಇಂಗ್ಲಿಷ ಗೃಹಸ್ಥರು ಕೂಡ ಪರಿ ಪರಿಯಿಂದ ವಿರೋಧಿಸಿದರು. ನಬಾಬನ ಮನಸ್ಸಿನ ವಿರುದ್ಧವಾಗಿ ಇಷ್ಟೇ ಏಕೆ? ಬ್ರಿಟಿಷ ರೆಸಿಡೆಂಟನ ಹೇಳಿಕೆಗೆ ವಿರುದ್ಧವಾಗಿಯೂ ಆಕೆಯ ಜಹಗೀರು 'ಜಪ್ತ' ಆಯಿತು. ಆಕೆಯ ಮಾನಮರ್ಯಾದೆಗಳನ್ನು ಕಡೆಗಣಿಸಿ ಆಕೆಗೆ ಸೇರಿದ ೭೬ ಲಕ್ಷ ರೂಪಾಯಿಗಳ ಸಂಪತ್ತು ಮಾಯವಾಯಿತು.

ಅಯೋಧ್ಯೆಯನ್ನು ಬೇಗಮಳಿಗೆ ಬಿಟ್ಟು ಕೊಟ್ಟಬಳಿಕ ಅಸಫ ಉದ್ದೌ ಲನು ಲಕನೌ ನಗರವನ್ನು ತನ್ನ ರಾಜಧಾನಿಯಾಗಿ ಮಾಡಿಕೊಂಡನು. ಆತನು ೧೭೭೫ರಿಂದ ೧೭೮೩ರ ವರೆಗೆ ೯ ವರುಷಗಳ ಅವಧಿಯಲ್ಲಿ ಕಂಪನಿಯ ದಂಡಿನ ವೆಚ್ಚಕ್ಕಾಗಿ ೨೩೦ ಲಕ್ಷ ರೂಪಾಯಿಗಳನ್ನು ಕೊಟ್ಟದ್ದಲ್ಲದೆ ಮುಂದೆ ಪ್ರತಿವರ್ಷ ೮೫ ಲಕ್ಷ ರೂಪಾಯಿಗಳನ್ನು ಕೊಡಬೇಕಾ ಯಿತು. ಮೇಲಾಗಿ ರಾಜ್ಯದ ಆಂತರಿಕ ಕಾರ್ಯಭಾರದಲ್ಲಿಯೂ ಆತನಿಗೆ ಸ್ವಾತಂತ್ರ್ಯವಿರಲಿಲ್ಲ. ೧೭೮೮ ರಲ್ಲಿ ಬ್ರಿಟಿಷ ಸೈನ್ಯದ ವೆಚ್ಚಕ್ಕಾಗಿ ಪ್ರತಿ ವರ್ಷ ೫೦ ಲಕ್ಷ ರೂಪಾಯಿ ಕೊಡಬೇಕೆಂದೂ ಬ್ರಿಟಿಷ ರೆಸಿಡೆಂಟನು ಸಂಸ್ಥಾನದ ಅಂತರ್ವ್ಯವಸ್ಥೆಯಲ್ಲಿ ಕೈಹಾಕಕೂಡದೆಂದೂ ನಬಾಬ ಆಸಫ ಉದ್ದೌಲನು ಲಾರ್ಡ್‌ಕಾರ್ನ್‌ವಾಲಿಸನೊಡನೆ ಒಪ್ಪಂದಮಾಡಿಕೊಂಡನು. ಅಂದಿನಿಂದ ಮತ್ತೆ ಸಂಸ್ಥಾನದ ಉತ್ಕರ್ಷಕ್ಕೆ ಅನುಕೂಲವಾಯಿತು. "ಜಿಸಕೊ ನ ದೇ ಮೌಲಾ ಉಸಕೋ ದೇ ಅಸಫ ಉದ್ದೌಲಾ" ಎಂಬ ನಾಣ್ಣುಡಿ ಪ್ರಚಾರದಲ್ಲಿ ಬಂದುದನ್ನು ನೋಡಿದರೆ ಆತನ ದಾನಶೂರತೆ ವ್ಯಕ್ತವಾಗದಿರದು. ೧೭೯೫ ರಲ್ಲಿ ಸರ್ ಜಾನ್ ಷೋಅರನು ಅಯೋಧ್ಯೆಯ ರಾಜ್ಯದಲ್ಲಿ ಮತ್ತೆರಡು ಸೇನಾದಳಗಳನ್ನು ಹೆಚ್ಚಿಸಿ ಅದರ ವೆಚ್ಚಕ್ಕಾಗಿ ವರ್ಷಕ್ಕೆ ಐದುವರೆ ಲಕ್ಷ ರೂಪಾಯಿಗಳನ್ನು ಹೆಚ್ಚಿಗೆ ಕೊಡಬೇಕೆಂದೂ ತಫಜುಲ್ ಹುಸೇನನೆಂಬ ಸಂಚುಗಾರನನ್ನು ಮುಖ್ಯ ಮಂತ್ರಿಯಾಗಿ

ನೇಮಿಸಿಕೊಳ್ಳಬೇಕೆಂದೂ ನಬಾಬನನ್ನು ಬಲಾತ್ಕರಿಸಲು ಆತನು ಮನಸ್ಸಿನ ಉದ್ವೇಗದಿಂದ ಬೇನೆ ಬಿದ್ದನು; ಕೊನೆಗೆ ಔಷಧೋಪಚಾರಗಳನ್ನು ತೊರೆದು ಮರಣಹೊಂದಿದನು. ೧೭೯೭ರಲ್ಲಿ ಅಸಫ ಉದ್ದೌಲನ ಮರಣದ ತರುವಾಯ ವಜೀರಅಲ್ಲಿಯು ನಬಾಬನಾದನು. ಆದರೆ ಮುಂದೆ ಹಲವು ತಂತ್ರಗಳು ನಡೆದು ಆತನು ನಬಾಬನ ಮಗನೇ ಅಲ್ಲವೆಂಬ ಸಂಶಯದಿಂದ ಹಿಂದುಸ್ಥಾನ ಸರಕಾರದವರು ಸುರಾಜ ಉದ್ದೌಲನ ಎರಡನೆಯ ಮಗ ಸಾದತ ಅಲ್ಲಿಯನ್ನು ನಬಾಬನನ್ನಾಗಿ ಮಾಡಿದರು.

ಸಾದತ ಅಲ್ಲಿಯು ೧೭೯೮ರಲ್ಲಿ ನಬಾಬನಾದಾಗ ಆದ ಒಪ್ಪಂದದ ಮೇರೆಗೆ ಕಂಪನಿಯ ಸರಕಾರಕ್ಕೆ ಪ್ರತಿತಿಂಗಳಿಗೆ ೭೬ ಲಕ್ಷ ೩೭ ಸಾವಿರ ರೂಪಾಯಿಗಳನ್ನು ದಂಡಿನ ವೆಚ್ಚಕ್ಕೆ ಕೊಡಲೊಪ್ಪಿದುದಲ್ಲದೆ ಅಲಹಾಬಾದ ಫತ್ತೆಗಡಗಳ ದುರ್ಗಗಳನ್ನೂ ಅವುಗಳ ನೆರೆಯ ಪ್ರದೇಶವನ್ನೂ ೨೩ ಲಕ್ಷ ರೂಪಾಯಿಗಳನ್ನೂ ಕಾಣಿಕೆಯಾಗಿ ಕೊಟ್ಟನು. ೧೮೦೧ನೆಯ ಇಸವಿಯಲ್ಲಿ ಲಾರ್ಡ್‌ವೆಲ್ಲಸ್ಲಿಯ ನಿಷ್ಠುರವಾಣಿಗೆ ವಿನೀತನಾದ ಸಾದತ ಅಲ್ಲಿಯು ಒಂದೂವರೆ ಕೋಟಿ ರೂಪಾಯಿ ಉತ್ಪನ್ನದ ಅರ್ಧರಾಜ್ಯವನ್ನು ಮತ್ತೆ ಕಂಪನಿಯ ಸರಕಾರಕ್ಕೆ ಬಿಟ್ಟುಕೊಟ್ಟು ಉಳಿದ ಅರ್ಧರಾಜ್ಯದ ಮೇಲೆ ದಂಡಿನ ವೆಚ್ಚದ ಹೊರೆತಪ್ಪಿ ಸ್ವತಂತ್ರ ಅರಸನಾದನು. ಅಂದಿನಿಂದ ಆತನು ಸುವ್ಯವಸ್ಥಿತವಾಗಿ ರಾಜ್ಯವಾಳುತ್ತ ಬಂದನು. ೧೮೧೪ರಲ್ಲಿ ಆತನು ಮರಣಹೊಂದಿದಾಗ ಸಂಸ್ಥಾನದ ಭಾಂಡಾರದಲ್ಲಿ ೧೪ಕೋಟಿ ರೂಪಾಯಿಗಳ ಶಿಲ್ಕು ಉಳಿದಿದ್ದಿತು.

ಸಾದತ ಅಲ್ಲಿಯ ತರುವಾಯ ಆತನ ಮಗ ಗಾಝಿ ಉದ್ದೀನನೂ ಮೊಮ್ಮಗ ನಸಿರುದ್ದೀನನೂ ತರುವಾಯ ಮಹಮ್ಮದ ಅಲ್ಲೀಷಹ, ಅಮಜಿದ ಅಲ್ಲಿ, ವಾಜೀದ ಅಲ್ಲಿ, ಇವರೂ ಕ್ರಮವಾಗಿ ಅಯೋಧ್ಯೆಯ ನಬಾಬರಾದರು. ಲಾರ್ಡ್ ಡಾಲಹೌಸಿಯು ಹಿಂದುಸ್ಥಾನದ ಗವರ್ನರ್ ಜನರಲನಾಗಿ ಬಂದ ಬಳಿಕ ರಾಜ್ಯದಲ್ಲಿ ಅಪರಿಮಿತ ಅವ್ಯವಸ್ಥೆಯುಂಟಾಗಿದೆಯೆಂಬ ಕಾರಣದಿಂದ ನಬಾಬನನ್ನು ಪಟ್ಟದಿಂದ ತಳ್ಳಿ ಅಯೋಧ್ಯಾ ಪ್ರಾಂತವನ್ನು ಬ್ರಿಟಿಷರಾಜ್ಯಕ್ಕೆ ಸೇರಿಸಬೇಕೆಂದು ನಿರ್ಧರಿಸಿದನು. ಡಾಲಹೌಸಿಯ ಈ ಕೃತಿ ಅತ್ಯಂತ ನಿಷೇಧಾರ್ಹವೆಂದು ರೆಸಿಡೆಂಟ್, ಸ್ಲೀಮನ್, ಸರ್ ಹೆನರಿಲಾರೆನ್ಸ ಮುಂತಾದವರು ಜನತೆಯ ಮುಂದೆ ಸಾರಿ ಸಾರಿ ಹೇಳಿದರು. ೧೮೫೬ನೆಯ ಇಸವಿಯಲ್ಲಿ

ರೆಸಿಡೆಂಟ್ ಸ್ಲೀಮನ್ನನು “ ನಾವು ಒಂದುವೇಳೆ ಅಯೋಧ್ಯೆಯ ರಾಜ್ಯವನ್ನಾಗಲಿ ಅದರದೊಂದು ಭಾಗವನ್ನಾಗಲಿ ಸೆಳೆದುಕೊಂಡರೆ ಭರತಖಂಡದಲ್ಲಿಯ ನಮ್ಮ ಕೀರ್ತಿಗೆ ಕಳಂಕವುಂಟಾಗುವುದು. ಅಯೋಧ್ಯಾ ಪ್ರಾಂತವೊಂದೇ ಏಕೆ ? ಇಂಥಹ ಹತ್ತು ರಾಜ್ಯಗಳಿಗಾಗಿ ಕೂಡ ಕೀರ್ತಿಯನ್ನು ಕಳೆದುಕೊಳ್ಳುವುದು ಯೋಗ್ಯವಲ್ಲ. ”* ಎಂದು ಗವರ್ನರ್ ಜನರಲನಿಗೆ ಸ್ಪಷ್ಟವಾಗಿ ಬರೆದು ತಿಳುಹಿದನು. ಸರ್ ಹೆನರಿ ಲಾರೆನ್ಸನು ಕಲಕತ್ತಾ ರಿವ್ಯೂ ಪತ್ರಿಕೆಯಲ್ಲಿ ಡಾಲಹೌಸಿಯ ಈ ಕೃತಿಯನ್ನು ಬಲವಾಗಿ ವಿರೋಧಿಸಿದನು. ಡಾಲಹೌಸಿಸಾಹೇಬನಿಗೆ ಈ ಅಭಿಪ್ರಾಯಗಳು ಸಮ್ಮತವಾಗಲಿಲ್ಲ. ಅಯೋಧ್ಯಾಪ್ರಾಂತವನ್ನು ಕಂಪನಿಯ ಸರಕಾರಕ್ಕೆ ಸೇರಿಸಿ ತಾನು ಅಲ್ಲಿಯ ಅಧಿಕಾರಿಯಾಗಿರುವುದಕ್ಕಿಂತ ಕೆಲಸಕ್ಕೆ ರಾಜೀನಾಮೆಯನ್ನು ಕೊಟ್ಟು ಹೋಗುವುದೇ ಒಳ್ಳೆಯದೆಂದು ಸ್ಲೀಮನ್ ಸಾಹೇಬನು ತಿಳಿದಿದ್ದನಂತೆ. ೧೮೫೪ನೆಯ ಇಸವಿಯ ನೊವ್ಹೆಂಬರ ತಿಂಗಳಲ್ಲಿ ಸ್ಲೀಮನ್ ಸಾಹೇಬನ ಬದಲು ಜನರಲ್ ಔಟ್ರ್ಯಾಮ ಸಾಹೇಬನು ಅಯೋಧ್ಯೆಯ ರೆಸಿಡೆಂಟನಾದನು. ಆತನು ೧೮೫೫ನೆಯ ಇಸವಿಯ ಜೂನ ತಿಂಗಳಲ್ಲಿ ಅಯೋಧ್ಯಾಪ್ರಾಂತವನ್ನು ಬ್ರಿಟಿಷರಾಜ್ಯಕ್ಕೆ ಸೇರಿಸುವುದನ್ನು ನಿರ್ಣಯಿಸಿದನು. ವಿಲಾಯತಿಯ ಸರಕಾರವೂ ಅದನ್ನು ಒಪ್ಪಿಕೊಂಡಿತು. ಡಾಲಹೌಸಿಯ ಬಹುದಿನಗಳ ಬಯಕೆ ಈಡೇರಿತು. ಔಟ್ರ್ಯಾಮ ಸಾಹೇಬನು ೧೮೫೬ನೆಯ ಇಸವಿಯ ಜನವರಿ ತಿಂಗಳ ಕೊನೆಯ ವಾರದಲ್ಲಿ ಒಂದುದಿನ ಸೇನಾಸಮೇತನಾಗಿ ಲಕನೌವಿಗೆ ಬಂದನು. ಸರಕಾರದ ಅಪ್ಪಣೆಯನ್ನು ಕೇಳಿ ತಿಳಿದ ನಬಾಬನು ಕಂಗೆಟ್ಟು ತನ್ನ ಶಿರೋಭೂಷಣವನ್ನು ಔಟ್ರ್ಯಾಮ ಸಾಹೇಬನ ಪಾದದ ಮೇಲಿಟ್ಟು ತನ್ನ ಅಪರಾಧವನ್ನು ಕ್ಷಮಿಸಬೇಕೆಂದು ಬೇಡಿಕೊಂಡನು. “ ಅದೆಲ್ಲಾ ಹಿಂದೆಯೇ ಆಗಿ ಹೋಯಿತು. ಈಗ ಯಾವುದಕ್ಕೂ ಅವಕಾಶ ವಿಲ್ಲ. ” ಎಂಬ ಒಂದೇ ಒಂದು ದರ್ಪದ ಮಾತಿನಲ್ಲಿ ಸಾಹೇಬನು ಎಲ್ಲವನ್ನೂ ಮುಗಿಸಿದನು. ಮತ್ತು ವರ್ಷಕ್ಕೆ ೧೨ ಲಕ್ಷ ರೂಪಾಯಿ ವರ್ಷಾಶನ ತೆಗೆದುಕೊಂಡು ಅಯೋಧ್ಯೆಯ ರಾಜ್ಯವನ್ನು ಕಂಪನಿಯ ಸರಕಾರಕ್ಕೆ ಒಪ್ಪಿಸಲು ನಬಾಬನು ಒಪ್ಪದಿರಲು ಫೆಬ್ರುವರಿ ತಿಂಗಳ ೭ನೆಯ ತಾ. ಸ ದಿನ ಆತನನ್ನು

* Sleeman's Oude Vol; II. P. 379

ಸೆರೆಹಿಡಿದು ಕಲಕತ್ತೆಯ ಫೋರ್ಟ ವಿಲಿಯಮ್ ಕೋಟೆಗೆ ಒಯ್ದು ಬಂಧನ ದಲ್ಲಿಟ್ಟನು. ನಬಾಬನ ಅವಸ್ಥೆಯನ್ನು ಕಂಡು ಆತನ ಪ್ರಜೆಗಳು ಮರಮರನೆ ಮರುಗಿದರು. ಅವರು ಆತನು ಹೊರಡುವಾಗ "ಬಾದಷಹಾ ಸಲಾಮತ. ಬಾದಷಹಾ ಫಿರ್ ಬನೇರಹೇ, ಲಂಡನ್ ಸೇ ಹುಕುಂ ಆಜಾವೇ." ಎಂದು ಪ್ರೇಮದಿಂದ ಕಣ್ಣೀರುಸುರಿಸುತ್ತ ಹರಸಿ ಕಳುಹಿದರು.

ನಬಾಬನ ವೈಯಕ್ತಿಕ ಸಂಪತ್ತನ್ನೂ ಪ್ರಪಂಚದ ಸಾಮಗ್ರಿಗಳನ್ನೂ ಪುಸ್ತಕಾಲಯದಲ್ಲಿದ್ದ ೨ಲಕ್ಷ ಹಸ್ತಲಿಖಿತ ಪುಸ್ತಕಗಳನ್ನೂ ಲಿಲಾವು ಮಾಡಿದರು. ಆತನ ರಾಣೀವಾಸಕ್ಕೆ ಸಂಬಂಧಿಸಿದ ವಸ್ತ್ರಾಭರಣಗಳೂ ಅವರ ಪೋಷಣೆಗಾಗಿಟ್ಟ ದ್ರವ್ಯವು ಕೂಡ, ನಬಾಬನಿಗೆ ಸಿಕ್ಕಲಿಲ್ಲ. ಕೋಟ್ಯವಧಿ ಪ್ರಜೆಗಳ ಒಡೆಯನಾದ ನಬಾಬನು ಇಂದು ಇಂತು ನಿರ್ಗತಿಕನಾದನು.

ಅಯೋಧ್ಯೆಯ ಪ್ರಜೆಗಳು ತಮ್ಮ ಅರಸನ ಮತ್ತು ರಾಜಪರಿವಾರದ ದುರವಸ್ಥೆಯನ್ನು ಕಂಡು ಸಂತಪ್ತರಾದರು. ನಬಾಬನ ಮನೆತನದ ಹಲವು ಜನರು ನಿರುದ್ಯೋಗಿಗಳಾಗಿ ಕುಳಿತಿದ್ದರು. ಕಂಪನಿಯ ಸರಕಾರದ ರಾಜ್ಯವು ಆರಂಭವಾದೊಡನೆ ನಬಾಬನ ಸೈನ್ಯದಲ್ಲಿದ್ದ ೮೦ಸಾವಿರ ಸಿಪಾಯಿಯರಲ್ಲಿ ೨೦ಸಾವಿರ ಜನರನ್ನು ಮಾತ್ರ ಇಟ್ಟುಕೊಂಡು ಮಿಕ್ಕ ೬೦ಸಾವಿರ ಜನರನ್ನು ನೌಕರಿಯಿಂದ ಹೊರದೂಡಿದರು. ಅವರೆಲ್ಲರೂ ಸ್ವಾಭಾವಿಕವಾಗಿ ಕಂಪನಿ ಸರಕಾರದ ಹಗೆಗಳಾದರು. ತಾಲೂಕುದಾರರು ಜಮೀನುದಾರರು ಮತ್ತು ಸರದಾರರು ಇವರ ಇನಾಮು ಭೂಮಿಯ ಮೇಲೆ ಕಣ್ಣಿಟ್ಟು ಮೊದಲು ತಾವು ಪ್ರಕಟಿಸಿದ ಜಾಹೀರನಾಮೆಯ ಕಲಮುಗಳ ವಿರುದ್ಧವಾಗಿ ಥಾಮಸನ್ ಮೊದಲಾದ ಅಧಿಕಾರಿಗಳು ಕಾರ್ಯ ನಡೆಯಿಸತೊಡಗಲು ಜನರು ಉದ್ವಿಗ್ನರಾದರು. ಬರಾಕಪುರ ಬರ್ಹಾಮಪುರಗಳಿಂದ ಹೊರ ದೂಡಿದ ಸಾವಿರಾರು ಸೈನಿಕರು ಅಯೋಧ್ಯಾಪ್ರಾಂತದವರೇ ಆಗಿದ್ದುದರಿಂದ ಅವರೆಲ್ಲರೂ ಮರಳಿ ತಮ್ಮ ದೇಶಕ್ಕೆ ಬಂದು ಮನಸ್ಸಿಗೆ ಬಂದಂತೆ ಕಂಪನಿಯ ಸರಕಾರವನ್ನು ದೂಷಿಸತೊಡಗಿದರು. ಒಟ್ಟಿಗೆ ಅಯೋಧ್ಯಾಪ್ರಾಂತವು ಕಂಪನಿಯ ಸರಕಾರದ ವಿರೋಧಿಗಳ ಆಗರವಾಗಿ ಪರಿಣಮಿಸಿತು.

ಸುದೈವದಿಂದ ಈ ಸಮಯದಲ್ಲಿ ನ್ಯಾಯಪಕ್ಷಪಾತಿಯಾದ ಸರ್ ಹೆನರಿ ಲಾರೆನ್ಸನು ಅಯೋಧ್ಯೆಯ ಕಮಿಷನರನಾಗಿದ್ದನು. ಆತನು ಹಲವು

ಉಪಾಯಗಳಿಂದ ಜನತೆಯನ್ನು ಸಮಾಧಾನಗೊಳಿಸಲು ಯತ್ನಿಸಿದನು. ಮೇ ತಿಂಗಳ ಆರಂಭದಿಂದಲೂ ಲಕನೌವಿನಲ್ಲಿಯೂ ನೆರೆಯ ಪ್ರದೇಶ ದಲ್ಲಿಯೂ ಅಸಮಾಧಾನದ ಚಿಹ್ನೆಗಳು ತಲೆದೋರಿದುವು. ಮೇ ತಿಂಗಳಿನ ಕೊನೆಯ ದಿನ ಸೇನಾನಿವಾಸದಲ್ಲಿ ರಾತ್ರಿಯ ೯ ಗಂಟೆಗೆ ಹಾರಬೇಕಾದ ತೋಫು ಹಾರಿತು; ಕೂಡಲೆ ಅಸಂಖ್ಯ ತುಬಾಕಿಗಳ ಧ್ವನಿಯೊಡನೆ ಕೋಲಾ ಹಲವು ಪ್ರಾರಂಭವಾಯಿತು. ಲಾರೆನ್ಸಸಾಹೇಬನು ಕುದುರೆಯನ್ನೇರಿ ಸೇನಾ ನಿವಾಸಕ್ಕೆ ನಡೆದನು. ಆತನ ಸುವಿಚಾರಪೂರ್ಣವಾದ ಸುವ್ಯವಸ್ಥೆಯಿಂದ ಅಂದು ಹೆಚ್ಚು ಹಾನಿ ಸಂಭವಿಸಲಿಲ್ಲ. ಉನ್ಮತ್ತರಾದ ಸೈನಿಕರು ಒಳಗೊಳಗೆ ಮನೆಗಳನ್ನು ಸುಡುವುದು, ಕೊಲೆಸುಲಿಗೆ ಮಾಡುವುದು, ಮುಂತಾದ ಉಪದ್ರವಕ್ಕೆ ಪ್ರಾರಂಭಿಸಿದರು. ಬಹುಜನ ಸೈನಿಕರು ಲಕನೌವಿನಿಂದ ಹೊರಟು ಹಳ್ಳಿಗಳನ್ನು ಸೇರಿದರು. ಮೇತಾಪುರ, ಫೈಜಾಬಾದ, ಸುಲತಾನ ಪುರ, ದಯಾನಾಬಾದ, ಮುಂತಾದ ಹಲವು ಕಡೆಗಳಲ್ಲಿ ದಂಗೆ ಸಂಭವಿಸಿ ಹಲವರು ಯುರೋಪಿಯನ್ ಅಧಿಕಾರಿಗಳ ಕೊಲೆಯಾಯಿತು.

ಇತ್ತ ಲಾರೆನ್ಸ ಸಾಹೇಬನು ಲಕನೌವಿನಲ್ಲಿ ಬಹು ದಕ್ಷತೆಯಿಂದ ಕಾರ್ಯ ನಡೆಯಿಸಿದ್ದನು. ಆತನು ಆತ್ಮರಕ್ಷಣೆಗಾಗಿ ಒಂದು ಸಾವಿರ ಸೈನಿಕರನ್ನೂ ಮದ್ದುಗುಂಡುಗಳನ್ನೂ ಸಂಗ್ರಹಿಸಿ ಸಜ್ಜುಗೊಳಿಸಿ ಇಟ್ಟು ಕೊಂಡಿದ್ದನು. ಆಗ ಆತನ ದೇಹಸ್ಥಿತಿ ಚೆನ್ನಾಗಿರಲಿಲ್ಲ.

ಬ್ರಿಟಿಷರು ಅಯೋಧ್ಯಾಪ್ರಾಂತವನ್ನು ಸ್ವಾಧೀನ ಪಡಿಸಿಕೊಂಡ ತರುವಾಯ ಅದರ ರಕ್ಷಣೆಗಾಗಿ ೧೨ ಸೇನಾದಳಗಳನ್ನು ನೂತನವಾಗಿ ರಚಿಸಿದ್ದರು. ಆ ಸೈನಿಕರೆಲ್ಲರೂ ಈಗ ಬ್ರಿಟಿಷರ ಮೇಲೆ ತಿರುಗಿಬಿದ್ದರು. ಅವರು ಲಕನೌ ನಗರವನ್ನು ವಶಮಾಡಿಕೊಂಡರು. ಲಕನೌವಿನ ರಾಜ್ಯ ಭ್ರಷ್ಟನಾದ ನಬಾಬನ ಪತ್ನಿ ' ಹಜರತ ಮಹಾಲ ' ಎಂಬವಳು ತನ್ನ ೧೧ ವರುಷದ ಬಾಲಕನನ್ನು ಅಯೋಧ್ಯೆಯ ನವಾಬನೆಂದು ಸಾರಿದಳು. ಮಮ್ಮೂಖಾನನು ಮುಖ್ಯ ವಜೀರನಾದನು. ಒಟ್ಟಿಗೆ ಲಕನೌವಿನಲ್ಲಿ ರಾಜ್ಯಕ್ರಾಂತಿಯಾಗಿ ಮತ್ತೆ ನಬಾಬಷಾಹಿಗೆ ಪ್ರಾರಂಭವಾಯಿತು. ಇದೇ ಸಂಧಿಗೆ ಅಯೋಧ್ಯಾಪ್ರಾಂತದಲ್ಲಿ ರಾಜ್ಯಕ್ರಾಂತಿಯನ್ನು ಸಾರುತ್ತಿದ್ದ ಅಹಮ್ಮದುಲ್ಲಾಷಹನೆಂಬ ಮೌಲ್ವಿಯು ಲಕನೌವಿಗೆ ಬಂದನು. ಆತನು

ಪ್ರಯತ್ನದಿಂದ ಅಸಂಖ್ಯ ಬಂಡುಗಾರರು ಅಲ್ಲಿ ಕೂಡಿದರು. ಮತ್ತೆ ಹತ್ತೆಂಟು ದಿನಗಳು ಕಳೆದುವು. ಈಗಾಗಲೇ ಕಾನಪುರದಲ್ಲಿ ದಂಗೆಯು ಪ್ರಾರಂಭವಾಗಿದ್ದಿತು. ಅಲ್ಲಿ ವ್ಹೀಲರ ಸಾಹೇಬನ ಕೊಲೆಯಾಗಿ ವಿರೋಧಿಗಳು ವಿಜಯಿಗಳಾದ ವಾರ್ತೆ ಲಕನೌವಿಗೆ ಮುಟ್ಟಿತು. ನಬಾಬಗಂಜ ಮುಂತಾದ ಸುತ್ತಲಿನ ಪ್ರದೇಶಗಳಿಂದ ದಂಗೆಗಾರರು ಲಕನೌವಿಗೆ ಸಾಗಿ ಬರುವರೆಂಬುದು ಗೊತ್ತಾಗಲು, ಲಾರೆನ್ಸ ಸಾಹೇಬನು ಇನ್ನು ಸುಮ್ಮನೆ ಕುಳಿತಿರುವುದು ಸರಿಯಲ್ಲವೆಂದು ಆಲೋಚಿಸಿ ಅವರನ್ನು ಎದುರಿಸುವುದಕ್ಕೆ ಸೈನ್ಯದೊಡನೆ ಹೊರಟನು. ಲಾರೆನ್ಸ ಸಾಹೇಬನ ಸೈನ್ಯವು ಚಿನ್ಹೂಟದ ಬಳಿಯಲ್ಲಿ ನದಿಯ ದಂಡೆಗೆ ಮುಟ್ಟಿದಾಗ ಬಂಡುಗಾರರೂ ಅಲ್ಲಿಗೆ ಬಂದಿದ್ದರು. ಕಡುತರವಾದ ಕಾಳಗವಾಗಿ ಲಾರೆನ್ಸ ಸಾಹೇಬನ ಸೈನ್ಯವು ಸೋತಿತು. ಬಹುಜನ ಯುರೋಪಿಯನ್ ಸೈನಿಕರು ಮರಣಹೊಂದಿದರು ; ಅಳಿದುಳಿದವರು ಲಕನೌವಿಗೆ ಓಡಿ ಪಾರಾದರು. ಜುಲೈ ತಿಂಗಳ ಮೊದಲನೆಯ ತಾರೀಖಿನಿಂದ ಅಯೋಧ್ಯಾಪ್ರಾಂತದಲ್ಲಿ ಬ್ರಿಟಿಷರ ಅಧಿಕಾರವು ಸಂಪೂರ್ಣ ನಷ್ಟವಾದ ಚಿಹ್ನೆಗಳು ತೋರಿಬಂದುವು.

ಚಿನ್ಹೂಟದ ಕಾಳಗದಲ್ಲಿ ಲಾರೆನ್ಸ ಸಾಹೇಬನಿಗೆ ಶತ್ರುಗಳ ಸೇನಾ ಸಾಮರ್ಥ್ಯದ ಕಲ್ಪನೆಯಾದ ಕೂಡಲೆ ಆತನು ಲಕನೌವಿನ ಬೇರೆ ಬೇರೆ ಭಾಗಗಳಲ್ಲಿದ್ದ ಯುರೋಪಿಯನರನ್ನೂ ದ್ರವ್ಯಭಾಂಡಾರ ಮುಂತಾದುವನ್ನೂ 'ರೆಸಿಡೆನ್ಸಿ' ಪ್ರದೇಶದಲ್ಲಿ ಒಂದುಗೂಡಿಸಿ ತಮ್ಮ ಶಕ್ತಿಯ ಏಕೀಕರಣ ಮಾಡಿಕೊಂಡನು. ಮತ್ತು ಅಲ್ಲಿಗೆ ಸಾಗಿಸಲು ಸಾಧ್ಯವಾಗದೆ ಇದ್ದ ಮದ್ದಿನ ಕೋಣೆಗಳಿಗೆ ಕೊಳ್ಳಿಕೊಟ್ಟು ಹಾರಿಸಿಬಿಟ್ಟನು. ಜುಲೈ ತಿಂಗಳ ಮೊದಲನೆಯ ತಾರೀಖಿನಿಂದ ಲಕನೌವಿನ ಮುತ್ತಿಗೆ ಪ್ರಾರಂಭವಾಯಿತು.

ಮತ್ತೆ ಹತ್ತೆಂಟು ದಿನಗಳು ಕಳೆದುವು. ಲಾರೆನ್ಸ ಸಾಹೇಬನು ಅತ್ಯಂತ ದಕ್ಷತೆಯಿಂದ ಕೆಲಸಮಾಡುತ್ತಿದ್ದನು. ಎರಡು ದಿನಗಳಿಂದಲೂ ಹಗಲೂ ಇರುಳೂ ಕೆಲಸ ಮಾಡಿ ದಣಿದ ಲಾರೆನ್ಸ ಸಾಹೇಬನು ತನ್ನ ಕೋಣೆಗೆ ಬಂದು ಹಾಸುಗೆಯ ಮೇಲೆ ಉಸ್ಸೆಂದು ಉರುಳಿದನು ; ಆದರೂ ಅವನಿಗೆ ಸಮಾಧಾನವಿರಲಿಲ್ಲ. ಮುತ್ತಿಗೆಯಲ್ಲಿ ಸಿಕ್ಕಿದವರಿಗೆ ಹೊರಗಿನ ಸಹಾಯವು ಬರುವವರೆಗೆ ಇದ್ದಷ್ಟು ಸಾಮಗ್ರಿಗಳಿಂದಲೇ ಕೆಲಸ ನಡೆಯಿಸ

ಬೇಕಾಗುವುದರಿಂದ ಅವುಗಳ ಅಂದಾಜು ಮಾಡಿಕೊಂಡು ಬಾರೆಂದು ತನ್ನ ಸಹಾಯಕ ಅಧಿಕಾರಿಗೆ ಹೇಳಿದನು. ಈ ಮಾತು ನಡೆದಿರುವಾಗ ಭಯಂಕರ ಗರ್ಜನೆಯೊಂದಿಗೆ ಒಂದು ಗುಂಡು ಅವರಿಬ್ಬರ ನಡುವೆ ಹಾಯ್ದು ಹೋಯಿತು. ಈಗ ಬಹಳ ಆಯಾಸವಾಗಿರುವುದರಿಂದ ನಾಳೆ ಮುಂಜಾನೆ ಲಾರೆನ್ಸ ಸಾಹೇಬನು ತನ್ನ ಕಚೇರಿಯನ್ನು ಇನ್ನೂ ಭದ್ರವಾದ ಸ್ಥಳಕ್ಕೆ ಒಯ್ಯಬೇಕೆಂದು ಗೊತ್ತಾಯಿತು. ದೈವಯೋಗವು ವಿಚಿತ್ರವಾದುದು. ಮತ್ತೆ ಘನಗರ್ಜನೆಯೊಡನೆ ಗುಂಡುಗಳ ಮಳೆ ಸುರಿಯ ತೊಡಗಿತು. ಕೋಣೆಯು ಹೊಗೆ ಧೂಳಿಗಳಿಂದ ತುಂಬಿಹೋಯಿತು. ಸಹಾಯಕ ಅಧಿಕಾರಿಯು "ಸಾಹೇಬ, ನಿಮಗೇನಾದರೂ ಗುಂಡು ಬಡಿಯಿತೇ ?" ಎಂದನು. ಉತ್ತರವಿಲ್ಲ. ಹತ್ತು ನಿಮಿಷಗಳ ತರುವಾಯ "ಸತ್ತೆನಪ್ಪಾ! ಸತ್ತೆನು !" ಎಂದುದು ಕೇಳಿಸಿತು. ಲಾರೆನ್ಸ ಸಾಹೇಬನ ಮೈಯೆಲ್ಲ ರಕ್ತದಿಂದ ತೊಯಿದು ಹೋಗಿದ್ದಿತು; ಎಡದ ತೊಡೆಯ ಮೇಲ್ಭಾಗದಲ್ಲಿ ಗುಂಡು ತಾಕಿ ಭಯಂಕರ ಗಾಯವಾಗಿದ್ದಿತು. ಸೈನ್ಯದ ಸರ್ಜನನು ಬಂದು ನೋಡಿ "ಬಹುಶಃ ೪೮ ತಾಸು ಉಳಿಯಬಹುದು !" ಎಂದು ಅರೆದುಟಿಯಲ್ಲಿ ನಡಗುವ ದನಿಯಿಂದ ತನ್ನೊಳಗೇ ಮಾತಾಡಿಕೊಂಡನು.

ಲಾರೆನ್ಸ ಸಾಹೇಬನ ಅಂತ್ಯಕಾಲವು ಸಮೀಪಿಸಿತು. ಆತನು ಸೈನ್ಯದ ಅಧಿಕಾರಿಗಳಿಗೆ ಹೇಳಬೇಕಾದುದನ್ನೆಲ್ಲ ಹೇಳಿದನು. ತನ್ನ ಶರೀರವನ್ನು ಒಬ್ಬ ಸಾಮಾನ್ಯ ಸೈನಿಕನಂತೆ ಮಣ್ಣೊಳಗೆ ಹಾಕಿ ಬಿಡಬೇಕಲ್ಲದೆ ಹೆಚ್ಚಿಗೆ ಏನೂ ಮಾಡಕೂಡದೆಂದೂ ಆ ತನ್ನ ಚಿಕ್ಕ ಕುರುಹಿನ ಮೇಲೆ "ಕರ್ತವ್ಯನಿರತನಾದ ಹೆನರಿ ಲಾರೆನ್ಸನು ಇಲ್ಲಿ ಮಲಗಿರುವನು; ಆತನ ಮೇಲೆ ದೇವರ ದಯೆಯಿರಲಿ." ಎಂದಿಷ್ಟೇ ಬರೆದಿಡಬೇಕೆಂದೂ ನಿರೂಪಿಸುತ್ತಿರುವಾಗ ಆತನ ಕರ್ತವ್ಯನಿಷ್ಠ ಆತ್ಮವು ಇಹಲೋಕದಿಂದ ಸಾಗಿ ಹೋಯಿತು.

ಅಂತ್ಯಕಾಲದಲ್ಲಿ ಕೂಡ ನ್ಯಾಯನಿಷ್ಠ ಲಾರೆನ್ಸ ಸಾಹೇಬನ ಮನಸ್ಸು ನಿರ್ವಿಕಾರವಾಗಿದ್ದಿತು. ಥಾಮುಸನ್ ಮುಂತಾದ ಕಂಪನಿಯ ಅಧಿಕಾರಿಗಳೇ ಹಿಂದುಸ್ಥಾನವನ್ನು ಈ ದಶೆಗೆ ತಳ್ಳಿದರೆಂದು ಆಗಲೂ ಆತನು ಅನ್ನುತ್ತಿದ್ದನಂತೆ.

---



ಸರ್ ಹೆನರಿ ಲಾರೆನ್ಸ, K.C.B.



ಲಾರ್ಡ್ ಡಾಲಹೌಸಿ ( ೧೮೪೮—೧೮೫೬ )



ಲಾರ್ಡ್ ಕ್ಯಾನಿಂಗ್ ( ೧೮೫೬—೧೮೬೨ )

# ಮೂರನೆಯ ಪರಿಚ್ಛೇದ

## ನಾನಾಸಾಹೇಬನಿಗೆ ಆಮಂತ್ರಣ

"Maharaja, a kingdom awaits you if you join our cause, but death if you side with our enemies." —*Forrest.*



ಗೋಬ್ರಾಹ್ಮಣ ಪ್ರತಿಪಾಲಕ ಶ್ರೀ ಶಿವಾಜಿ ಮಹಾರಾಜನಿಂದ ಸ್ಥಾಪಿತವಾದ ಮಹಾರಾಷ್ಟ್ರ ಸಾಮ್ರಾಜ್ಯದ ಅಷ್ಟಪ್ರಧಾನರಲ್ಲಿ ಒಬ್ಬನಾದ ಪೇಶವೆಯು ಮುಂದೆ ಆ ಸಾಮ್ರಾಜ್ಯದ ಸೂತ್ರಚಾಲಕನಾದನು ; ತಾನೇ ದೊರೆಯೂ ಆದನು. ಬಾಳಾಜಿ ವಿಶ್ವನಾಥನ ಮೊದಲುಗೊಂಡು ಎರಡನೆಯ ಬಾಜೀರಾಯನವರೆಗಿನ ಆರುಜನ ಪೇಶವೆಯರು ಸುಮಾರು ಒಂದು ನೂರು ವರುಷ ಕಾಲ ಆ ಸಾಮ್ರಾಜ್ಯ ಲಕ್ಷ್ಮಿಯ ಪಾಲನ ಪೋಷಣ ಕಾರ್ಯಗಳನ್ನು ಕೈಕೊಂಡಿದ್ದರು. ಒಬ್ಬಿಬ್ಬರು ಅಖಿಲ ಭರತಖಂಡದಲ್ಲಿಯೂ ತಮ್ಮ ಪ್ರಭುತ್ವವನ್ನು ಸ್ಥಾಪಿಸಿದ್ದರು ; ದಿಲ್ಲಿಯ ಬಾದಷಹನು ಕೂಡ ಅವರ ಅಂಕಿತದಲ್ಲಿದ್ದನು. ಏಳನೆಯವನಾದ ಎರಡನೆಯ ಬಾಜೀರಾಯನು ಆ ಸಾಮ್ರಾಜ್ಯ ಲಕ್ಷ್ಮಿಯನ್ನು ಬ್ರಿಟಿಷರಿಗೆ ಒಪ್ಪಿಸಿದನು.

೧೭೬೧ನೆಯ ಇಸವಿಯಲ್ಲಾದ ಪಾಣಿಪತ್ತದ ಕಾಳಗ, ರಾಘೋಬಾದಾದಾ ಆನಂದೀಬಾಯಿ ಇವರಿಂದ ಉಪಸ್ಥಿತವಾದ ಗೃಹಕಲಹ, ಇವುಗಳಿಂದ ಮಹಾರಾಷ್ಟ್ರ ರಾಜ್ಯಲಕ್ಷ್ಮಿಯ ಪ್ರತಿಭೆ ಮಲಿನವಾಗಲು ಕಾರಣವುಂಟಾಗಿದ್ದಿತು. ಮಹಾರಾಷ್ಟ್ರರ ಸ್ವಾತಂತ್ರ್ಯವನ್ನೇ ಕಳೆದುಬಿಡುವಂತಹ ಹಲವು ತಂತ್ರಗಳಿಂದ ಅನುತಾಪಗೊಂಡ ಬಾಜೀರಾಯನು ೧೮೧೮ನೆಯ ಇಸವಿಯಲ್ಲಿ ಬ್ರಿಟಿಷರೊಡನೆ ಯುದ್ಧವನ್ನು ಹೂಡಿದನು; ಆಗ ಅವರು ಸಾತಾರೆಯ ಮೂಲ ಮಹಾರಾಷ್ಟ್ರ ರಾಜನನ್ನು ಸೆರೆಯಿಂದ ಬಿಡುಗಡೆ

ಮಾಡಿ ಪೇಶವೆಯು ಅಪಹರಿಸಿದ ಮಹಾರಾಷ್ಟ್ರ ಪ್ರಭುವಿನ ಸ್ವಾತಂತ್ರ್ಯ ವನ್ನು ಪುನಃ ಸ್ಥಾಪಿಸುವುದಕ್ಕೆಂದು ತಾವು ಆತನೊಡನೆ ಯುದ್ಧವನ್ನು ಹೂಡಿರುವೆವೆಂದು ಸಾರಿದರು ; ಬಾಜೀರಾಯನ ಮುಖ್ಯ ಆಧಾರವಾಗಿದ್ದ ಮಹಾರಾಷ್ಟ್ರ ಸೈನಿಕ ಸೇನಾಧಿಕಾರಿಗಳ ಮನಸ್ಸು ತಿರುಗಿಹೋಯಿತು.

ರಣರಂಗದಲ್ಲಿ ಪರಾಜಿತನಾದ ಬಾಜೀರಾಯನು ಮಹಾರಾಷ್ಟ್ರ ರಾಜ್ಯಲಕ್ಷ್ಮಿಯನ್ನು ಮಾಲಕಮ್ ಸಾಹೇಬನಿಗೆ ಒಪ್ಪಿಸಿ ಕಂಪನಿಯ ಸರಕಾರದಿಂದ ೮ ಲಕ್ಷ ರೂಪಾಯಿ ವರ್ಷಾಶನ ಪಡೆದು ಬ್ರಹ್ಮಾವರ್ತ ಕ್ಷೇತ್ರದಲ್ಲಿ ಹೋಗಿ ವಾಸವಾದನು. ಬ್ರಹ್ಮಾವರ್ತಕ್ಕೆ ಹೋದಬಳಿಕ ಆತ ನಿಗೆ ಮೂವರು ಹೆಣ್ಣು ಮಕ್ಕಳಾದರು. ಪರಮೇಶ್ವರನು ತನಗೆ ಒಂದೂ ಪುತ್ರಸಂತಾನವನ್ನು ಕೊಡದೆ ಇದ್ದುದಕ್ಕಾಗಿ ಆತನೊಡನೆ ಪಣತೊಟ್ಟವ ನಂತೆ ಆತನು ನಾನಾಸಾಹೇಬ, ದಾದಾಸಾಹೇಬ, ಬಾಳಾಸಾಹೇಬ ಎಂಬ ಮೂವರು ದತ್ತಪುತ್ರರನ್ನು ಮಾಡಿಕೊಂಡನು. ಇವರಲ್ಲಿ ನಾನಾಸಾಹೇ ಬನು ಶೂರನೂ ಸುಂದರಾಂಗನೂ ಕರ್ತೃತ್ವಶಾಲಿಯೂ ಆಗಿದ್ದುದರಿಂದ ಬಾಜೀರಾಯನು ಆತನನ್ನು ಹೆಚ್ಚಾಗಿ ಪ್ರೀತಿಸುತ್ತಿದ್ದನು ; ಆತನೇ ತನ್ನ ಉತ್ತರಾಧಿಕಾರಿಯೆಂದೂ ನಿಶ್ಚಯಿಸಿದ್ದನು. ತನ್ನ ತರುವಾಯ ಪೇಶವೆಯ ಪದವಿಯೂ ತನಗೆ ದೊರೆಯುತ್ತಿದ್ದ ೮ ಲಕ್ಷ ರೂ. ವರ್ಷಾಶನವೂ ನಾನಾ ಸಾಹೇಬನಿಗೆ ದೊರೆಯಬೇಕೆಂದು ಬಾಜೀರಾಯನು ಕಂಪನಿಯ ಸರಕಾರಕ್ಕೆ ನಿವೇದನೆ ಮಾಡಿಕೊಂಡನು. ಆಗ ಈ ಪ್ರಶ್ನೆಯನ್ನು ಸಕಾಲದಲ್ಲಿ ಯೋಗ್ಯ ವಿಚಾರಮಾಡಿ ನಿರ್ಣಯಿಸುವೆವೆಂದು ಉತ್ತರ ದೊರೆಯಿತು.

೧೮೫೧ನೆಯ ಇಸವಿಯ ಜನವರಿ ತಿಂಗಳಲ್ಲಿ ಬಾಜೀರಾಯನು ಮರಣ ಹೊಂದಿದನು. ನಾನಾಸಾಹೇಬನು ತನ್ನ ತಂದೆಗೆ ದೊರೆಯುತ್ತಿದ್ದ ವರ್ಷಾ ಶನವು ತನಗೆ ದೊರೆಯಬೇಕೆಂದು ಹಿಂದುಸ್ಥಾನ ಸರಕಾರವನ್ನು ಕೇಳಿ ಕೊಂಡನು. ನಾನಾಸಾಹೇಬನು ಬಾಜೀರಾಯನ ಉತ್ತರಾಧಿಕಾರಿಯೆಂದೂ ಪೇಶವೆಯ ೨೮ ಲಕ್ಷ ರೂ. ಗಳ ಚರಆಸ್ತಿ, ಬ್ರಹ್ಮಾವರ್ತದ ಜಹಗೀರು ಇವು ಆತನಿಗೆ ದೊರೆಯುವುವೆಂದೂ ಬಾಜೀರಾಯನು ಬಹುಕಾಲ ( ೩೩ ವರ್ಷ) ಕಂಪನಿಯ ಸರಕಾರದಿಂದ ಪೆನ್‌ಶನ್ ಪಡೆದು ವಿಪುಲದ್ರವ್ಯವನ್ನು ಸಂಗ್ರಹಿಸಿಟ್ಟಿರುವುದರಿಂದ ಇನ್ನು ಮುಂದೆ ವರ್ಷಾಶನ ದೊರೆಯಲಾರದೆಂದೂ

ಸರಕಾರದಿಂದ ಉತ್ತರಬಂದಿತು. ಆ ಬಳಿಕ ನಾನಾಸಾಹೇಬನು ತನ್ನ ವಕೀಲ ಅಜೀಮುಲ್ಲಾಖಾನನನ್ನು ಇಂಗ್ಲೆಂಡಿಗೆ ಕಳುಹಿ "ಬಾಜೀರಾಯನು ರಾಜ್ಯವನ್ನು ಒಪ್ಪಿಸುವಾಗ **ತನ್ನ ಮತ್ತು ತನ್ನ ಪರಿವಾರದ ಪೋಷಣೆಗಾಗಿ** ವರ್ಷಾಶನ ಪಡೆದಿರುವನು; ಈಗ ಆತನು ಮರಣ ಹೊಂದಿದರೂ ಆತನ ಪರಿವಾರವು ಇದ್ದೇ ಇರುವುದು; ಪೇಶವೆಯ ರಾಜ್ಯವು ಆಚಂದ್ರಾರ್ಕವಾಗಿ ಕಂಪನಿಯ ಸರಕಾರಕ್ಕೆ ದೊರೆತಿರುವುದರಿಂದ ಅದರ ಬದಲು ಕೊಡಲೊಪ್ಪಿದ ವರ್ಷಾಶನವು ಕೂಡ ಆಚಂದ್ರಾರ್ಕವಾಗಿ ನಡೆಯಲೇ ಬೇಕು. ಬಾಜೀರಾಯನೂ ನಾನೂ ಕಂಪನಿಯ ಸರಕಾರದೊಡನೆ ಪ್ರೀತಿ ವಿಶ್ವಾಸಗಳಿಂದಲೂ ಅತ್ಯಂತ ನಿಷ್ಠೆಯಿಂದಲೂ ನಡೆದುಕೊಳ್ಳುತ್ತ ಬಂದಿರುವೆವು. ದಯಾಳು ಸರಕಾರವು ದಿಲ್ಲಿಯ ಮೊಗಲ್ ಬಾದಷಹರ ಉತ್ತರಾಧಿಕಾರಿಗಳಿಗೆ ವರ್ಷಾಶನವನ್ನು ನಡೆಯಿಸಿರುವುದು. ಪೇಶವೆಯ ಪರಿವಾರದ ಬಹು ಜನರ ಪಾಲನ ಪೋಷಣಗಳಿಗಾಗಿ ನನಗೂ ವರ್ಷಾಶನವನ್ನು ನಡೆಯಿಸಬೇಕು" ಇವೇ ಮೊದಲಾದ ತನ್ನ ಹೇಳಿಕೆಗಳನ್ನು ವಿಲಾಯತಿಯ ಸರಕಾರದ ಮುಂದೆ ಇಟ್ಟರೂ ಅದರಿಂದ ಏನೂ ಪ್ರಯೋಜನವಾಗಲಿಲ್ಲ. ಡಾಲಹೌಸಿಯ ದತ್ತಕದ ಕಾಯದೆಯಂತೆ ಸಾತಾರೆ ಝಾಂಸಿ ಮುಂತಾದ ರಾಜ್ಯಗಳನ್ನೇ ನಡೆಯಗೊಡದಿರುವಾಗ, ತಾನು ಬಾಜೀರಾಯನ ದತ್ತ ಪುತ್ರನೆಂದು ಒಪ್ಪಿಕೊಂಡುದು ತನ್ನ ಮೇಲೆ ಕಂಪನಿಯ ಸರಕಾರದ ಸಂಪೂರ್ಣ ಕೃಪಾದೃಷ್ಟಿಯಿರುವುದರ ಕುರುಹೆಂದು ನಾನಾಸಾಹೇಬನು ತಿಳಿಯಬೇಕಾಗಿದ್ದಿತು. ಆದರೆ ಆತನು ಅಷ್ಟು ಅಲ್ಪಸಂತೋಷಿಯಾಗಿರಲಿಲ್ಲ.

ಈ ವಿಷಯದಲ್ಲಿ ಕಂಪನಿಯ ಸರಕಾರವು ಅನ್ಯಾಯ ಮಾಡಿತೆಂದು ನಾನಾಸಾಹೇಬನು ಮನಸ್ಸಿನಲ್ಲಿ ಅಸಂತುಷ್ಟನಾಗಿದ್ದರೂ ಬಹಿರಂಗದಲ್ಲಿ ಬ್ರಿಟಿಷ ಅಧಿಕಾರಿಗಳೊಡನೆ ಅತ್ಯಂತ ಪ್ರೀತಿಯಿಂದಲೇ ಇದ್ದನು. ಕಾನಪುರದ ಕಲೆಕ್ಟರ ಅಯೋಧ್ಯಾಪ್ರಾಂತದ ಕಮಿಷನರ ಮೊದಲಾದ ಅಧಿಕಾರಿಗಳನ್ನು ಬ್ರಹ್ಮಾವರ್ತಕ್ಕೆ ಆಗಾಗ ಕರೆಯಿಸಿ ಪರಿಪರಿಯಿಂದ ಸನ್ಮಾನ ಮಾಡುತ್ತಿದ್ದನು. ಕಳೆದುಹೋದ ವರ್ಷಾಶನವನ್ನು ಅವರ ಸಹಾಯದಿಂದ ತಿರುಗಿ ಪಡೆಯಬೇಕೆಂದು ಆತನು ಹಂಬಲಿಸುತ್ತಿದ್ದನು.

ನಾನಾಸಾಹೇಬನ ಮಂತ್ರಿ ಅಜೀಮುಲ್ಲಾಖಾನನು ಬಾಲ್ಯದಲ್ಲಿ ಒಬ್ಬ

ಸಾಹೇಬನ ಮನೆಯಲ್ಲಿ ಕೆಲಸ ಮಾಡುವ ಹುಡುಗನಾಗಿದ್ದನು. ಅಲ್ಲಿ ಅವನು ಇಂಗ್ಲಿಷ್ ಫ್ರೆಂಚ್ ಜರ್ಮನ್ ಭಾಷೆಗಳನ್ನು ಓದಿ ಬರೆಯುವುದಕ್ಕೂ ಮಾತಾಡುವುದಕ್ಕೂ ಕಲಿತನು. ಮುಂದೆ ಕಾನಪುರದ ಸರಕಾರಿ ಶಾಲೆಯಲ್ಲಿ ಶಿಕ್ಷಕನಾಗಿದ್ದನು; ಆಗಲೇ ಯುರೋಪಿಯನರಿಗೆ ದೇಶಭಾಷೆಯನ್ನು ಕಲಿಸುವ ಮುನಷಿಯ ಕೆಲಸವನ್ನೂ ಮಾಡುತ್ತಿದ್ದನು. ಆ ಬಳಿಕ ನಾನಾ ಸಾಹೇಬನ ಮಂತ್ರಿಯಾದನು. ಈತನು ಸುಸ್ವರೂಪಿಯೂ ವಾಕ್ಚತುರನೂ ಆಗಿದ್ದನು. ಈತನು ನಾನಾಸಾಹೇಬನ ವರ್ಷಾಶನವನ್ನು ದೊರಕಿಸುವುದಕ್ಕಾಗಿ ಇಂಗ್ಲೆಂಡಿಗೆ ಹೋಗಿದ್ದನೆಂದು ಹಿಂದೆಯೇ ಹೇಳಿದೆ. ಮುಂದೆ ಕಂಪನಿಯ ಸರಕಾರದಿಂದ ತನ್ನ ಯಜಮಾನನಿಗಾದ ಅನ್ಯಾಯಕ್ಕಾಗಿ ಆತನು ಅವರೊಡನೆ ಹಗೆತನವನ್ನು ವಹಿಸಿದನು.

ಕಾನಪುರವು ಅರ್ವಾಚೀನ ನಗರವು. ಕಂಪನಿಯ ಸರಕಾರದ ಆಡಳಿತೆ ಆರಂಭವಾದ ತರುವಾಯವೇ ಇತಿಹಾಸದಲ್ಲಿ ಇದರ ಹೆಸರು ಸೇರ್ಪಡೆಯಾಯಿತು. ದಿಲ್ಲಿ ಲಕನೌ ಅಲಹಾಬಾದಗಳ ನಡುವೆ ಆಗ್ರಾ ಅಯೋಧ್ಯಾ ಪ್ರಾಂತಗಳ ಮಧ್ಯದಲ್ಲಿ ಗಂಗಾನದಿಯ ದಂಡೆಯಲ್ಲಿದ್ದುದರಿಂದ ಚಿಕ್ಕದೊಡ್ಡ ಹಡಗುಗಳ ಮೂಲಕ ವ್ಯಾಪಾರಕ್ಕೆ ಅನುಕೂಲವಾಗಿ ಕಾನಪುರವು ಈಸ್ಟ ಇಂಡಿಯಾ ಕಂಪನಿಯ ವ್ಯಾಪಾರದ ಕೇಂದ್ರವಾಯಿತು. ೧೮೫೭ನೆಯ ಇಸವಿಯಲ್ಲಿ ಇಲ್ಲಿ ೩ ಸಾವಿರ ದೇಶೀಯ ಸೈನಿಕರೂ ೬೦ ಜನ ಯುರೋಪಿಯನ್ ಗೋಲಂದಾಜರೂ, ೬೭ಜನ ಸೇನಾಧಿಕಾರಿಗಳೂ ಇರುತ್ತಿದ್ದರು. ಸರ್ ಹ್ಯೂ ವ್ಹೀಲರನು ಈ ಎಲ್ಲ ಸೈನ್ಯದ ಮುಖ್ಯಾಧಿಕಾರಿ; ಹಿಂದುಸ್ತಾನದ ಸೈನ್ಯದಲ್ಲಿ ೫೪ ವರುಷ ಕೆಲಸ ಮಾಡಿದ ಜ್ಞಾನವೃದ್ಧ ವಯೋವೃದ್ಧ ಸೇನಾಪತಿ.

ಮೇ ತಿಂಗಳ ಪ್ರಾರಂಭದಿಂದಲೂ ಮಿಕ್ಕ ಕಡೆಗಳಂತೆಯೇ ಕಾನಪುರದ ಸೇನಾನಿವಾಸದಲ್ಲಿಯೂ ಅಸಂತೋಷದ ಲಕ್ಷಣಗಳು ತೋರುತ್ತಲೇ ಇದ್ದುವು. ಮೀರತ ದಿಲ್ಲಿಗಳ ಬಂಡಾಯದ ದುರ್ವಾರ್ತೆ ೧೪ನೆಯ ತಾರೀಖಿನ ದಿನ ಕಾನಪುರಕ್ಕೆ ಮುಟ್ಟಿತು. ಅಂದಿನಿಂದ ದೇಶೀಯ ಸೈನಿಕರ ಮನಃಸ್ಥಿತಿಯಲ್ಲಿ ವಿಪರೀತ ಪರಿವರ್ತನೆಯುಂಟಾದುದು ಸ್ಫುಟವಾಗಿ ತೋರಿತು. ಯುರೋಪಿಯನರು ತೀರ ಸ್ವಲ್ಪವೇ ಇರುವುದರಿಂದ ಅವರು ಸೂರ್ಯೋದಯ-ಸೂರ್ಯಾಸ್ತಗಳನ್ನು ನಿರೀಕ್ಷಿಸಿ ದಣಿಯುತ್ತ ಒಂದೊಂದು ದಿನವನ್ನು

ಕಳೆಯುತ್ತಿದ್ದರು. ಸೇನಾಪತಿ ವ್ಹೀಲರ ಸಾಹೇಬನು ಸೈನ್ಯದ ಔಷಧಾಲಯ ವಿರುವ ಸ್ಥಳವನ್ನು ಭದ್ರಪಡಿಸಿ ಅಲ್ಲಿ ತತ್ಕಾಲಕ್ಕೆ ಸಾಕಾಗುವಷ್ಟು ಯುದ್ಧ ಸಾಮಗ್ರಿ ಅನ್ನಸಾಮಗ್ರಿಗಳನ್ನು ಸಂಚಯಮಾಡಿದನು. ಯುರೋಪಿಯನ್ ಹೆಂಗುಸರೂ ಹುಡುಗರೂ ಅಲ್ಲಿ ಹೋಗಿ ವಾಸವಾದರು.

ಕಾನಪುರದಲ್ಲಿ ಬ್ರಿಟಿಷರ ಸೇನಾನಿವಾಸವು ಸ್ಥಾಪಿತವಾದ ಬಳಿಕ ಬ್ರಹ್ಮಾವರ್ತಕ್ಕೂ ಬಲವಾದ ಕೋಟೆಯನ್ನು ಕಟ್ಟಿ ಭದ್ರಪಡಿಸಿದ್ದರು. ಆ ದುರ್ಗದ ಮಧ್ಯದಲ್ಲಿ ಪೇಶವೆಯ ಸುವಿಶಾಲವಾದ ಅರಮನೆಯಿರುವುದು. ಈ ಅರಮನೆಯ ದಕ್ಷಿಣಭಾಗದಲ್ಲಿದ್ದ ಪ್ರಶಸ್ತವಾದ ದೇವರ ಮನೆಯಲ್ಲಿ ಒಂದುದಿನ ಮಧ್ಯಾಹ್ನ ಸಮಯದಲ್ಲಿ ಬಾಜೀರಾಯನ ಧರ್ಮಪತ್ನಿ ಶಾರದಾ ಬಾಯಿಯು ದೇವತಾರ್ಚನೆಯಲ್ಲಿ ಮಗ್ನಳಾಗಿದ್ದಳು. ಪದ್ಮಾಸನದಲ್ಲಿ ಕುಳಿತು ಕೈಯಲ್ಲಿ ಜಪಮಾಲೆಯನ್ನು ಹಿಡಿದು ಅನನ್ಯಮಾನಸಳಾಗಿ ಕುಳಿತಿದ್ದ ಶಾರದಾಬಾಯಿಯ ಮನಸ್ಸಿನ ಏಕಾಗ್ರತೆಯು ಆ ಮನೆಯ ಬಾಗಿಲು ತೆರೆದ ದನಿಯಿಂದ ಭಂಗ ಹೊಂದಿತು. ಒಳಗೆ ಬರುತ್ತಿದ್ದ ಸೊಸೆ ಸುಮಿತ್ರಾಬಾಯಿಯನ್ನು ನೋಡಿ "ಏನಕ್ಕಾ, ಮುಖವೇಕೆ ಬಾಡಿದೆ? ಕಣ್ಣುಗಳಲ್ಲಿ ನೀರು ತುಂಬುವುದಕ್ಕೇನಾಯಿತು?" ಎಂದಳು.

"ನಿನ್ನೆನಿಂದಲೂ ನಮ್ಮ ದುರ್ಗದಲ್ಲಿ ಅನೇಕರು ಅನೇಕ ರೀತಿ ಮಾತಾಡುತ್ತಲಿದ್ದಾರೆ. ಮಹಾರಾಜರು ಬ್ರಿಟಿಷರ ವಿರುದ್ಧ ಮಹಾಸಂಗ್ರಾಮವನ್ನು ಹೂಡುವರೆಂದು ಹೇಳುವರು. ಅದಕ್ಕೆ ಸರಿಯಾಗಿ ಇಂದು ಪ್ರಾತಃಕಾಲದಿಂದಲೂ ಅವರೂ ಬಾಳಾಸಾಹೇಬರೂ ಶಸ್ತ್ರಾಸ್ತ್ರಗಳನ್ನು ಸಜ್ಜುಗೊಳಿಸುತ್ತಿರುವರು. ಅನೇಕ ಪತ್ರಗಳನ್ನು ಬರೆದು ಅಶ್ವಾರೋಹಿಗಳೊಡನೆ ಎಲ್ಲೆಲ್ಲಿಗೋ ಕಳುಹಿದರು."

"ಆದರೇನಾಯಿತು? ಕಳೆದುಹೋದ ಮಹಾರಾಷ್ಟ್ರರಾಜ್ಯಲಕ್ಷ್ಮಿಯನ್ನು ಪುನಃ ದೊರಕಿಸುವುದಕ್ಕೆ ಅವರೇಕೆ ಯತ್ನಿಸಕೂಡದು?"

"ನನ್ನ ಮನಸ್ಸು ಬಹು ಚಂಚಲವಾಗಿದೆ. ಅಜ್ಞಾತವಾದ ಅನಿಷ್ಟದ ಭೀತಿಯಿಂದ ಹೃದಯವು ಸೀದು ಹೋಗುತ್ತಲಿದೆ."

ದೇವರ ಮನೆಯ ಬಾಗಿಲು ಮತ್ತೆ ತೆರೆಯಿತು. ರಣವೇಷದಿಂದ ಸಜ್ಜಿತರಾದ ಇಬ್ಬರು ಒಳಗೆಬಂದು, ಮೊದಲು ದೇವರಿಗೂ ಬಳಿಕ ತಾಯಿಗೂ

ನಮಸ್ಕಾರ ಮಾಡಿದರು. "ದೇವಾಧಿದೇವ ತ್ರ್ಯಂಬಕೇಶ್ವರನು ಅನುಗ್ರಹಿಸಲಿ. ಜಯಶಾಲಿಗಳಾಗಿರಿ; ಭಾಗ್ಯಶಾಲಿಗಳಾಗಿರಿ; ಗೋಬ್ರಾಹ್ಮಣ ಪ್ರತಿಪಾಲಕರಾದ ಮಹಾರಾಜರಾಗಿ ಮೆರೆಯಿರಿ." ಎಂದು ಶಾರದಾಬಾಯಿಯು ಮಕ್ಕಳನ್ನು ಹರಸಿದಳು.

ನಾನಾಸಾಹೇಬನು ತನ್ನ ಕೈಯೊಳಗಿನ ಪತ್ರವನ್ನು ತಾಯಿಗೆ ತೋರಿ "ಅಮ್ಮಾ, ಫಿರಂಗಿಗಳು ಪ್ರಬಲವಾದ ಪ್ರತಿಬಂಧದಲ್ಲಿ ಸಿಕ್ಕಿರುವರು. ನನ್ನ ಸಹಾಯವನ್ನು ಬೇಡಿದ್ದಾರೆ; ಕಾನಪುರದ ಕಲೆಕ್ಟರನು ೩೦೦ ಜನ ಸೈನಿಕರೊಡನೆ ಕೂಡಲೆ ಹೊರಟುಬರಬೇಕೆಂದು ಪತ್ರಬರೆದಿದ್ದಾನೆ. ಸಾಧ್ಯವಾದರೆ ಮಹಾರಾಷ್ಟ್ರ ರಾಜ್ಯ ಲಕ್ಷ್ಮಿಯನ್ನು ಮರಳಿ ದೊರಕಿಸಿಕೊಂಡು ಬರುವೆನು. ಏನಿಲ್ಲೆಂದರೂ ಹಿರಿಯರಿಗೆ ದೊರೆಯುತ್ತಿದ್ದ ವರ್ಷಾಶನವನ್ನಾದರೂ ಪಡೆಯದೆ ತಿರುಗಿ ಬಾರೆನು." ಎಂದನು.

"ನಾನಾಸಾಹೇಬ, ಬಾಳಾಸಾಹೇಬ, ನಾನು ಎಲ್ಲವನ್ನೂ ಕೇಳಿ ತಿಳಿದಿರುವೆನು. ದಿಲ್ಲಿಯ ವೃದ್ಧ ಬಾದಷಹನು ಕೂಡ ತನ್ನ ಸಾಮ್ರಾಜ್ಯವನ್ನು ಮರಳಿ ಪಡೆದು ಸಿಂಹಾಸನಾರೂಢನಾಗಿ ದೇಶದ ತುಂಬ ಆಜ್ಞಾಪತ್ರಗಳನ್ನು ಕಳುಹುತ್ತಿರುವನಂತೆ. ಇಂತಿರುವಾಗ ನೀವು ವರ್ಷಾಶನವನ್ನು ಬಯಸುವುದೆಂದರೆ ಕಾಮಧೇನುವೇ ಕೈಗೆ ಸಿಕ್ಕಿದಾಗ ಗುಟುಕು ನೀರಿಗಾಗಿ ಗಂಗಾನದಿಗೆ ಓಡುವಂತಾಗುವುದು. ಅಜೀಮುಲ್ಲಾಖಾನನೂ ಗುರುದೇವ ಆನಂದಮಿಶ್ರರೂ ನನಗೆ ಎಲ್ಲವನ್ನೂ ತಿಳುಹಿರುವರು. ನರ್ಮದೆಯಿಂದ ಕನ್ಯಾಕುಮಾರಿಯವರೆಗೆ ಇರುವ ಸುವಿಶಾಲವಾದ ರಾಜ್ಯವನ್ನು ಗಳಿಸುವೆವೆಂದು ಪ್ರತಿಜ್ಞೆಮಾಡಿರಿ. ದೇವರು ಅನುಗ್ರಹಿಸುವನು. ಗೋದಾನ ಭೂದಾನ ಅಪರಿಮಿತ ಅನ್ನದಾನಗಳಿಂದ ನಿಮ್ಮ ಹಿರಿಯರು ಗಳಿಸಿದ ಪುಣ್ಯದ ಫಲವು ಒದಗಿ ಬಂದಿರುವುದು.'' ಎನ್ನುತ್ತ ಶಾರದಾಬಾಯಿಯು ದೇವರ ಮುಂದಿನ ಬಂಗಾರದ ತಟ್ಟೆಯಲ್ಲಿಯ ಪ್ರಸಾದವನ್ನು ಮಕ್ಕಳಿಗೆ ಕೊಟ್ಟಳು.

ನಾನಾಸಾಹೇಬನೂ ಬಾಳಾಸಾಹೇಬನೂ ಮತ್ತೆ ದೇವರಿಗೂ ತಾಯಿಗೂ ನಮಸ್ಕಾರಮಾಡಿ ಪ್ರಸಾದವನ್ನು ಸ್ವೀಕರಿಸಿ ಹೊರಗೆ ಬಂದರು. ನಾಲ್ಕು ಹೆಜ್ಜೆ ಹಿಂದೆ ಸುಮಿತ್ರಾಬಾಯಿಯು ತಮ್ಮನ್ನು ಅನುಸರಿಸಿ ಬಂದುದನ್ನು ನೋಡಿ ನಾನಾಸಾಹೇಬನು ಹಿಂದೆ ನಿಂತು ತಾನು ಕೂಡಲೆ

ಹೊರಡಬೇಕಾಗಿದೆಯೆಂದೂ ನಾಳೆ ಬಂದು ಎಲ್ಲವನ್ನೂ ತಿಳುಹಿ ಹೋಗುವೆನೆಂದೂ ಹೆಂಡತಿಯನ್ನು ಸಮಾಧಾನಪಡಿಸಿ ಮುಂದೆ ನಡೆದನು.

ನಾನಾಸಾಹೇಬನು ಪರಿವಾರದೊಡನೆ ಕಾನಪುರಕ್ಕೆ ಮುಟ್ಟಿದನು. ಮಾರನೆಯ ದಿನ ಮುಂಜಾನೆ ಕಲೆಕ್ಟರನು ಬಂದು ನಾನಾಸಾಹೇಬನೊಡನೆ ಮಾತಾಡಿ ಹೋದನು. ಗಂಗಾನದಿಯ ದಂಡೆಯ ಮೇಲಿದ್ದ ದ್ರವ್ಯಭಾಂಡಾರ ಅಸ್ತ್ರಾಗಾರ ಇವು ನಾನಾಸಾಹೇಬನ ರಕ್ಷಣೆಗೆ ಒಳಗಾದುವು. ಆತನು ಬ್ರಹ್ಮಾವರ್ತದಿಂದ ಬರುವಾಗ ೩೦೦ ಜನ ಮರಾಠಾ ಸೈನಿಕರನ್ನೂ ೨ ತೋಫುಗಳನ್ನೂ ತಂದಿದ್ದನು.

ಕಲೆಕ್ಟರ ಹಿಲ್ಲರ್ಸಡನ್ ( Hillersdon ) ಸಾಹೇಬನು ನಾನಾಸಾಹೇಬನ ಬಹುದಿನಗಳ ಪ್ರೀತಿಯ ಸ್ನೇಹಿತನು. ಆತನು ಅಯೋಧ್ಯೆಯ ಕಮಿಷನರನಿಗೆ ಬರೆದು ನಾನಾಸಾಹೇಬನ ವೆಚ್ಚಕ್ಕಾಗಿ ಸರಕಾರದಿಂದ ಹಣ ಕೊಡಬೇಕೆಂದು ಗೊತ್ತುಪಡಿಸಿದನು. ನಾನಾಸಾಹೇಬನು ತನ್ನ ವರ್ಷಾಶನದ ಮಾತೆತ್ತಲು ಆ ಕೆಲಸವು ಇಂತಹ ಅವಸರದಲ್ಲಿ ಆಗುವಂತಹದಲ್ಲವೆಂದು ಹೇಳಲು ನಿರುಪಾಯನಾಗಿ ಸುಮ್ಮನಾದನು.

ಮೇ ತಿಂಗಳು ಕಳೆಯಿತು. ವೃದ್ಧ ಸೇನಾಪತಿ ವ್ಹೀಲರ ಸಾಹೇಬನು ಪ್ರತಿದಿನ ಪಾಳೆಯದಲ್ಲೆಲ್ಲ ಓಡಾಡಿ ದೇಶೀಯ ಸೈನಿಕರ ಮನವೊಲಿಸಲು ಯತ್ನಿಸುತ್ತಿದ್ದನು. ಒಂದು ದಿನ ಆತನು ದೇಶೀಯ ಸೇನಾಧಿಕಾರಿಗಳನ್ನೆಲ್ಲ ಕರೆಯಿಸಿ ತುಬಾಕಿಯ ತೋಟೆಗಳು ನಿರ್ದುಷ್ಟವಾಗಿರುವುವೆಂದು ಪ್ರತಿಪಾದಿಸಿ ದೇಶೀಯ ಗುತ್ತೆದಾರನ ಕೈಗೆ ನಾಲ್ಕು ತೋಟೆಗಳನ್ನು ಕೊಟ್ಟನು; ಆಗಲೇ ಸೇನಾಧಿಕಾರಿಯೊಬ್ಬನು ಒಂದು ಪತ್ರವನ್ನೂ ಕೊಟ್ಟನು. ಅದು ಡಮ್ ಡಮ್ ಸೇನಾನಿವಾಸದಿಂದ ಬಂದುದು. ಅದರಲ್ಲಿ ತೋಟೆಗಳು ಹಿಂದುಗಳಿಗೂ ಮಹಮ್ಮದೀಯರಿಗೂ ಅಪವಿತ್ರವಾದ ನೆಣಮಿಶ್ರಿತವಾಗಿರುವುವೆಂದು ಸಾಧಾರವಾಗಿ ಪ್ರತಿಪಾದಿಸಲ್ಪಟ್ಟಿದ್ದಿತು. *

"ತಮ್ಮ ಧರ್ಮನಾಶಕ್ಕೆ ಕಾರಣವಾದ ಇಂತಹ ತೋಟೆಗಳನ್ನು ಬಾಯೊಳಗಿಡಲು ಸಮ್ಮತಿಸದಿರುವ ಅಪರಾಧಕ್ಕಾಗಿಯೇ ಮೀರತದಲ್ಲಿ ೮೫ಜನ ಸೈನಿಕರಿಗೆ ಹತ್ತು ಹತ್ತು ವರ್ಷ ಸಶ್ರಮಶಿಕ್ಷೆ ವಿಧಿಸಲ್ಪಟ್ಟಿತು."

* Indian Mutiny Vol. I. P. 414

ಸೇನಾಧಿಕಾರಿಗಳ ಗುಂಪಿನಿಂದ ಈ ಮಾತು ಬಂದುದನ್ನು ಕೇಳಿ ವ್ಹೀಲರಸಾಹೇಬನು "ನೀವು ಏನು ಹೇಳಿದರೂ ನನಗೆ ನಿಮ್ಮ ಮೇಲೆ ಸಂಪೂರ್ಣ ವಿಶ್ವಾಸವಿದೆ" ಎಂದನು.

"ಸರಿ. ನಮ್ಮ ಮೇಲೆ ವಿಶ್ವಾಸವಿರುವುದರಿಂದಲೇ ಬ್ರಹ್ಮಾವರ್ತದಿಂದ ಬಂದ ಸೈನಿಕರು ಭಾಂಡಾರವನ್ನೂ ಅಸ್ತ್ರಾಗಾರ ತೋಫುಖಾನೆಗಳನ್ನೂ ರಕ್ಷಿಸತೊಡಗಿದ್ದಾರೆ. ಲಕನೌವಿನಿಂದ ಯುರೋಪಿಯನ್ ಸೈನಿಕರೂ ತೋಪುಗಳೂ ಬರತೊಡಗಿವೆ." ಎಂದೊಬ್ಬನು ನುಡಿದನು.

ಮತ್ತೊಬ್ಬನು "ಮೊನ್ನೆ ಒಬ್ಬ ಯುರೋಪಿಯನ್ ಸೇನಾಧಿಕಾರಿಯು ದೇಶೀಯ ಕಾವಲುಗಾರರನ್ನು ಗುಂಡಿನಿಂದ ಸುಟ್ಟು ಕೊಂದನು. ಅದರ ವಿಚಾರಣೆಯಾಗಿ ಆತನು ಸೆರೆಯ ಅಮಲಿನಲ್ಲಿದ್ದನೆಂಬ ನೆವದಿಂದ ನಿರಪರಾಧಿಯಾದನು * ಆದರೆ ನಮ್ಮವನೊಬ್ಬನು ಒಬ್ಬ ಸಾಹೇಬನನ್ನು ಕೊಂದಿದ್ದರೆ ಅದು ರಾಜದ್ರೋಹದ ಕುರುಹೆಂದು ಸಂಪೂರ್ಣ ಸೇನಾವಿಭಾಗಕ್ಕೇ ಶಿಕ್ಷೆಯನ್ನು ವಿಧಿಸುತ್ತಿದ್ದಿರಿ. ಬರಾಕಪುರದ ಸೇನಾನಿವಾಸದಲ್ಲಿ ಗಾಂಜಿಯ ಅಮಲಿನಲ್ಲಿ ಹುಚ್ಚಾಟ ಹೂಡಿದ ಪಾಂಡೆಯು ಅಪರಾಧದ ಪರಿಣಾಮವೇನಾಯಿತು? ನಮ್ಮವರ ಜೀವಕ್ಕೆ ಕವಡೆಯ ಬೆಲೆಯಿಲ್ಲ ನಿಮ್ಮವರದು?" ಎನಲು—"ನಿಮ್ಮ ಕಾಲಮೇಲೆ ನೀವೇ ಕಲ್ಲು ಹಾಕಿಕೊಳ್ಳುವಿರಿ. ನಮ್ಮ ಹೊರತು ನಿಮಗೆ ನೌಕರಿ ಕೊಡುವವರು ಯಾರಿದ್ದಾರೆ!" ಎಂದು ಇನ್ನೊಬ್ಬ ಯುರೋಪಿಯನ್ ಸೇನಾಧಿಕಾರಿಯು ಗರ್ಜಿಸಿದನು.

"ದಿಲ್ಲಿಯಲ್ಲಿ ಮೊಗಲ್ ಸಾಮ್ರಾಜ್ಯದ ಸ್ಥಾಪನೆಯಾಗಿದೆ. ನಾವು ಅಲ್ಲಿಗೆ ಹೋಗುವೆವು." ಸೇನಾಪತಿ ವ್ಹೀಲರ ಸಾಹೇಬನು ಈ ಮಾತುಗಳನ್ನು ಕೇಳಿ ವ್ಯಾಕುಲಗೊಂಡನು. ಸೈನಿಕರ ಅಂತರಂಗದ ಉದ್ವೇಗವು ದಿನದಿನಕ್ಕೂ ಪರಮಕಾಷ್ಠೆಗೆ ಮುಟ್ಟಿ ಬಹಿರಂಗಕ್ಕೆ ಬರತೊಡಗಿತು. ಯುರೋಪಿಯನ್ ಅಧಿಕಾರಿಗಳೆಲ್ಲರೂ ಚಂಚಲರಾದರು.

ನಾನಾಸಾಹೇಬನು ನವಾಬಗಂಜದಲ್ಲಿ ಕಲೆಕ್ಟರ ಸಾಹೇಬನ ಮನೆಯಲ್ಲಿ ವಾಸವಾಗಿದ್ದನು. ಆ ಮನೆಯ ಮಹಾದ್ವಾರದಲ್ಲಿ ಎರಡು ತೋಪುಗಳನ್ನು ಇಟ್ಟುಕೊಂಡು ಸಶಸ್ತ್ರ ಸೈನಿಕರು ಹಗಲಿರುಳು ಕಾವಲು ಮಾಡು

* Indian Mutiny Vol I. P. 415

-ತ್ತಿದ್ದರು. ರಾತ್ರಿ ೧೨ ಗಂಟೆಯಾಗಿದೆ. ಮಹಾಜನ ಸಮ್ಮರ್ದವಾದ ನಗರವೆಲ್ಲವೂ ನಿಶ್ಶಬ್ದವಾಗಿದೆ. ಒರಿವ್ಯೆಯಲ್ಲಿ ಮಲಗಿ ನಿದ್ದೆಮಾಡಿದವರು ಕೂಡ ಬೇಸಗೆಯ ಉತ್ತಾಪದಿಂದ ಉಸ್ಸೆಂದು ಉಸಿರ್ಗರೆದು ಆ ಮಗ್ಗಲು ಈ ಮಗ್ಗಲು ಉರುಳಾಡುತ್ತಿದ್ದರು. ಅಕಸ್ಮಾತ್ ನಾಲ್ಕು ಜನ ಸೇನಾಧಿಕಾರಿಗಳು ರಣವೇಷದಲ್ಲಿ ನಾನಾಸಾಹೇಬನ ನೂತನ ನಿವಾಸದ ಬಳಿಗೆ ಬಂದರು. ಅರೆನಿದ್ದೆಯಲ್ಲಿ ತೂಕಡಿಸುತ್ತಿದ್ದ ಕಾವಲುಗಾರರು ಅವರನ್ನು ತಡೆದರು. ಯಜಮಾನರೊಡನೆ ಮಹತ್ವದ ಕೆಲಸವಿದೆಯೆಂದು ಹೇಳಿದ ಬಳಿಕ ಒಳಗೆ ಬಿಟ್ಟರು. ಏನು ಮಾಡಬೇಕು ? ಹೇಗೆ ಮಾಡಬೇಕು ? ಎಂಬ ವಿಚಾರದಲ್ಲಿ ತೊಡಗಿ ನಿದ್ದೆಯಿಲ್ಲದೆ ಹಾಸುಗೆಯಲ್ಲಿಉರುಳಾಡುತ್ತಿದ್ದ ನಾನಾಸಾಹೇಬನು ಮಹಾದ್ವಾರದಲ್ಲಿ ನಡೆದ ಮಾತಿನಿಂದಲೇ ಎಲ್ಲ ವಿಚಾರಗಳನ್ನು ತರ್ಕಿಸಿ ಹೊರಗೆ ಬಂದನು. ಮನೆಯ ಮುಂದಣ ದೀಪದ ಮುಂದೆ ನಿಂತು ಮುಜರೆ ಮಾಡಿದವರನ್ನು ಕಂಡು “ ಏನಿದು ? ಸುಭೇದಾರ ಟೀಕಾಸಿಂಹ ! ತಾವೇ ಇಲ್ಲಿಗೆ ಬರೋಣವಾಯಿತು ” ಎಂದನು. “ ಬೆಕ್ಕಿನ ಕೊರಳಿಗೆ ಗಂಟೆಯನ್ನು ಯಾರು ಕಟ್ಟಬೇಕೆಂಬ ಜೊಳ್ಳು ವಾದವಿವಾದವು ಇನ್ನು ಸಾಕು. ಈ ವಿವಾದದಲ್ಲಿಯೇ ೧೫–೨೦ ದಿನಗಳು ಕಳೆದುವು. ತಾವು ಗೋಬ್ರಾಹ್ಮಣ ಪ್ರತಿಪಾಲಕರೆಂದು ಹೇಳಿಕೊಳ್ಳುವಿರಿ. ಧರ್ಮರಕ್ಷಣೆಯುತಮ್ಮ ಕರ್ತವ್ಯವು. ಧರ್ಮಭೀತಿಯಿಂದ ಕಂಗಾಲರಾದ ನಮಗೆ ಆಶ್ರಯಕೊಟ್ಟು ಮಹಾರಾಷ್ಟ್ರ ರಾಜ್ಯಲಕ್ಷ್ಮಿಯ ಉದ್ಧಾರಮಾಡುವಿರೋ ? ವಿಧರ್ಮಿಗಳೊಡನೆ ಸೇರಿಕೊಂಡು ನಮ್ಮ ಸರ್ವನಾಶಕ್ಕೆ ಸಿದ್ಧರಾಗುವಿರೊ ? ಎಂದೊಬ್ಬ ಸುಭೇದಾರನು ನುಡಿದನು. “ಮಹಾರಾಜರೇ, ನಮ್ಮವರಾಗಿ ಮಹಾಸಾಮ್ರಾಜ್ಯವನ್ನು ದೊರಕಿಸುವಿರೋ ? ಹಗೆಗಳನ್ನು ಕೂಡಿ ಜೀವ ಕಳೆದುಕೊಳ್ಳುವಿರೋ ? ” ಎನ್ನುತ್ತ ಟೀಕಾಸಿಂಹನು ಹುಚ್ಚುನಗೆ ನಕ್ಕನು.

ನಾನಾಸಾಹೇಬನು “ ನಾನು ನಿಮ್ಮವನು. ನಿಮಗೆ ಅನ್ಯನಲ್ಲ. ನೀವೆಲ್ಲರೂ ಒಮ್ಮನಸ್ಸಿನಿಂದ ನಿರ್ಣಯಿಸಿಕೊಂಡು ನನಗೆ ಹೇಳಿದುದನ್ನು ಮಾಡಲು ನಾನು ತುದಿಗಾಲಮೇಲೆ ಸಿದ್ಧನಿರುವೆನು. ” ಎನ್ನುತ್ತ ಅವರನ್ನು ಒಳಗೆ ಕರೆದೊಯ್ದನು. ಅವರವರ ಗುಪ್ತವಿಚಾರಗಳು ಯಾರಿಗೂ ತಿಳಿಯಲಿಲ್ಲ.

---

# ನಾಲ್ಕನೆಯ ಪರಿಚ್ಛೇದ

## ಕಾನಪುರದಲ್ಲಿ ಕೋಲಾಹಲ

"All those who are in no way connected with the acts of Lord Dalhousie, and are willing to lay down their arms shall receive a safe passage to Allhabad ". —*Forrest*



ಕಾನಪುರದ ಸ್ಥಿತಿಯು ಬಹು ಚಿಂತಾಜನಕವಾಗಿದ್ದಿತು. ಸೇನಾಪತಿ ವ್ಹೀಲರಸಾಹೇಬನು ತನ್ನವರ ರಕ್ಷಣೆಗಾಗಿ ಸಿದ್ಧಪಡಿಸಿದ ಆಶ್ರಯಸ್ಥಾನವು ಸಾಕಾದಷ್ಟು ಭದ್ರವಾಗಿರಲಿಲ್ಲ. ನಾಲ್ಕೈದು ಅಡಿ ಎತ್ತರವಾದ ಮಣ್ಣಿನ ಗೋಡೆಯೇ ಅದರ ಕೋಟೆ. ಜನಬಲವಿಲ್ಲ; ಧನಬಲವಿಲ್ಲ; ಆಹಾರಸಾಮಗ್ರಿ ಯುದ್ಧಸಾಮಗ್ರಿಗಳೂ ಅಲ್ಪ ಪ್ರಮಾಣದಿಂದಿದ್ದುವು. ಹೊರಗಿನ ಸಹಾಯವಂತೂ ಬೇಗನೆ ದೊರೆಯುವ ಭರವಸೆಯಿರಲಿಲ್ಲ. ಆದುದರಿಂದ ಆತನು ದೇಶೀಯ ಸೈನಿಕರ ಮನವೊಲಿಸಿಕೊಂಡು ನಾನಾಸಾಹೇಬನೇ ಮೊದಲಾದವರ ನೆರವನ್ನು ನಂಬಿ ಕಾಲಕಳೆಯಬೇಕಾಗಿದ್ದಿತು. ಮೇ ತಿಂಗಳ ೨೪ನೆಯ ತಾರೀಖಿನ ದಿನ ಬ್ರಿಟಿಷಸಾಮ್ರಾಜ್ಯಾಧಿಕಾರಿಣಿಯ ಜನ್ಮದಿನವಿದ್ದುದರಿಂದ ಪ್ರತಿವರುಷದಂತೆ ಸೇನಾನಿವಾಸದಲ್ಲಿ ಮಹಾಸಮಾರಂಭವನ್ನು ನೆರವೇರಿಸಬೇಕಾಗಿದ್ದಿತು; ಅನೇಕಾನೇಕ ತೋಫುಗಳ ಗರ್ಜನೆಯಿಂದ ಭೂಮಿಯನ್ನೂ ವೈರಿರಾಜರ ಹೃದಯವನ್ನೂ ಗಡಗಡನೆ ನಡುಗಿಸಬೇಕಾಗಿದ್ದಿತು. ಆದರೆ ಅಂದು ಕಾನಪುರದ ಸೇನಾನಿವಾಸವು ನಿಶ್ಶಬ್ದ; ನಿರುತ್ಸಾಹ ನಿರಾಶೆಗಳಿಂದ ಹಾಳುಸುರಿಯುತ್ತಿದ್ದಿತು.

ಇಂದು ಜೂನ್ ತಿಂಗಳ ಮೂರನೆಯ ತಾರೀಖು. ಮಧ್ಯಾಹ್ನದ ನಾಲ್ಕು ಗಂಟೆಯಾಗಿರಬಹುದು. ಕಾನಪುರದ ಕಲೆಕ್ಟರನು ನಾನಾಸಾಹೇಬನಿರುವ ಸಬಾಬಗಂಜಕ್ಕೆ ಹೊರಟಿದ್ದನು. ಸಂಗಡ ಇನ್ನಿಬ್ಬರು ಯುರೋಪಿಯನ್ ಸೇನಾಧಿಕಾರಿಗಳಿದ್ದರು. ಬಿಸಿಲಿನ ಬೇಗೆಯಿಂದ ಸಾಹೇಬರ ಮೈಯೆಲ್ಲ

ಬೀಯುತ್ತಿದ್ದಿತು. ಮುಖದಲ್ಲಿ ಸುರಿಯುತ್ತಿದ್ದ ಬೆವರ ಹನಿಗಳು ಮಾಂಸದ ಕರಣಿಯಿಂದ ತಟಕಿಕ್ಕುವ ರಕ್ತದ ಹನಿಗಳಂತೆ ತೋರುತ್ತಿದ್ದುವು. ಸಾಹೇಬರು ಬಂದುದನ್ನು ತಿಳಿದು ನಾನಾಸಾಹೇಬನು ಇದಿರುಬಂದು ಒಳಗೆ ಕರೆದೊಯ್ದನು. ಅಲ್ಲಿ ಎರಡೇ ಆಸನಗಳಿದ್ದುವು. ಒಂದರಮೇಲೆ ನಾನಾ ಸಾಹೇಬನು ಕುಳಿತನು. ಹಿಲ್ಲರ್ಸಡನ್ ಸಾಹೇಬನು ಇನ್ನೊಂದರ ಬಳಿಗೆ ಹೋಗಿ ನಿಂತನು. ನಾನಾಸಾಹೇಬನು ಅವರು ನಿಂತಿರುವುದನ್ನು ನೋಡಿಯೂ ನೋಡದವನಂತಿರುವುದನ್ನು ಕಂಡು ಕಲೆಕ್ಟರನು ಆ ಪ್ರಸ್ತಾವವನ್ನು ಎತ್ತಿದನು. ನಾನಾಸಾಹೇಬನು 'ಮಿಕ್ಕವರು ಹೊರಗೆ ಹೋಗಿ ಅಲ್ಲಿರುವ ಆಸನಗಳ ಮೇಲೆ ಕುಳ್ಳಿರಬಹುದು' ಎಂದನು.

**ಕಲೆಕ್ಟರ:—** ನಾನಾಸಾಹೇಬ, ನಾವಿಬ್ಬರೂ ಪರಮಸ್ನೇಹಿತರು.

**ನಾನಾ:—** ಹೌದು. ಅಂತೆಯೇ ನಾನು ನಿಮಗೆ ನೆರವಾಗಲು ಬಂದೆನು. ನನ್ನ ದೇಶಬಾಂಧವರು ನನ್ನನ್ನು ದೇಶದ್ರೋಹಿಯೆಂದು ನಿಂದಿಸುವರು.

**ಕಲೆಕ್ಟರ:—** ಇಂದು ನನ್ನ ಸಂಗಡ ಬಂದವರಿಗೆ ಅಪಮಾನವಾಯಿತು.

**ನಾನಾ:—** ಕೆಲವು ದಿನಗಳ ಹಿಂದೆ ನಾನು ಲಕನೌವಿನಲ್ಲಿ ಲಾರೆನ್ಸ ಸಾಹೇಬರ ದರ್ಶನಕ್ಕೆ ಹೋದಾಗ ನನ್ನ ಸಂಗಡಿಗರು ಕಡೆತನಕ ನಿಂತೇ ಇರಬೇಕಾಗಿದ್ದಿತು. ಇಂದು ನಾನು ನಿಮ್ಮವರಿಗೆ ಹೊರಗೆ ಆಸನಗಳನ್ನು ಇಡಿಸಿದ್ದೇನೆ. ಇದರಲ್ಲಿ ಇನ್ನೂ ಒಂದು ಉದ್ದೇಶವಿದೆ. ತಾವು ನನಗೆ ಪರಮಸ್ನೇಹಿತರು, ಸರಿ; ಆದರೆ ನಮ್ಮ ಸಂಭಾಷಣೆಯನ್ನು ಅವರೆಲ್ಲರೂ ಕೇಳಿ ತಿಳಿಯುವ ಆವಶ್ಯಕತೆಯಿಲ್ಲವಷ್ಟೇ"

**ಕಲೆಕ್ಟರ:—** ನಾನು ತಮ್ಮನ್ನು ನಂಬಿ ಮೋಸಹೋದೆನೆಂದು ನಮ್ಮವರು ನನ್ನನ್ನು ಆಡಿಕೊಳ್ಳುತ್ತಿದ್ದಾರೆ. ಲಾರೆನ್ಸ ಸಾಹೇಬನಂತೂ ಹಾಗೆ ಸ್ಪಷ್ಟವಾಗಿ ಬರೆದಿರುವನು.

**ನಾನಾ:—** ನಾನು ತಮ್ಮ ಸ್ನೇಹಕ್ಕಾಗಿ ಮಾತೃಭೂಮಿಯ ಅಹಿತವನ್ನು ಬಗೆಯುತ್ತಿದ್ದೇನೆಂದು ನಮ್ಮವರು ನನ್ನನ್ನು ದೂಷಿಸುತ್ತಾರೆ; ಕನಡೆಯ ಸ್ವಾರ್ಥಕ್ಕಾಗಿ ಕೋಟಿ ಕೋಟಿ ದೇಶಬಾಂಧವರ ಅಹಿತವನ್ನು ಬಗೆಯುವ ಪರಮನೀಚನೆಂದು ನಮ್ಮ ಸೈನಿಕರೂ ಸೇನಾಧಿಕಾರಿಗಳೂ ನನ್ನನ್ನು ಹೀಯಾಳಿಸುತ್ತಿದ್ದಾರೆ.

**ಕಲೆಕ್ಟರ:—** ನಿನ್ನೆ ಸಾಯಂಕಾಲ ನೀವೂ ಕೆಲವರು ಸೇನಾಧಿಕಾರಿಗಳೂ ಗಂಗಾನದಿಯಲ್ಲಿ ನಾವೆಯಲ್ಲಿ ಕುಳಿತು ಎರಡು ತಾಸುಗಳ ವರೆಗೆ ಸಂಚಿನ ಮಾತಾಡುತ್ತಿದ್ದುದನ್ನು ನಮ್ಮವರು ನೋಡಿದ್ದಾರೆ.

**ನಾನಾ:—** ನಿಜವಾದ ಮಾತೇ ಸರಿ. ಅವರು ನನ್ನನ್ನು ತಮ್ಮ ಪಕ್ಷಕ್ಕೆ ಎಳೆಯುತ್ತಲಿದ್ದಾರೆ. ಬ್ರಿಟಿಷರು ಈ ದೇಶದಲ್ಲಿ ಮಹಾಸಾಮ್ರಾಜ್ಯವನ್ನು ಸ್ಥಾಪಿಸಿಕೊಂಡುದು ಸಾಲದೆ ದೇಶವನ್ನೆಲ್ಲ ಕ್ರೈಸ್ತಮಯವಾಗಿ ಮಾಡಿಬಿಡುವ ಆಲೋಚನೆಯಲ್ಲಿರುವರೆಂದೂ ಹಿಂದು ಮಹಮ್ಮದೀಯರ ಸರ್ವನಾಶಕ್ಕೆ ಪ್ರಯತ್ನಿಸುತ್ತಿದ್ದಾರೆಂದೂ ಅವರೆಲ್ಲರೂ ನಿಶ್ಚಯವಾಗಿ ತಿಳಿದುಕೊಂಡಿದ್ದಾರೆ. ಈ ಮಾತಿನಲ್ಲಿ ಎಳ್ಳಷ್ಟೂ ತಥ್ಯವಿಲ್ಲೆಂದು ಪ್ರತಿಪಾದಿಸಿ ಅವರನ್ನು ಸಮಾಧಾನ ಪಡಿಸಲು ನನಗೆ ಅಷ್ಟು ಕಾಲ ಅವರೊಡನೆ ಮಾತಾಡುತ್ತಿರಬೇಕಾಯಿತು. ಇನ್ನೂ ಅವರಿಗೆ ಸಂಪೂರ್ಣ ಸಮಾಧಾನವಾಗಿಲ್ಲ.

**ಕಲೆಕ್ಟರ:—** ನಿಮ್ಮ ಮಾತು ಕತೆ ನಡೆದಾಗ ಅಲ್ಲಿದ್ದು ಎಲ್ಲವನ್ನೂ ಕೇಳಿ ತಿಳಿದ ದೇಶೀಯ ಸೇನಾಧಿಕಾರಿಯೊಬ್ಬನು ನಿನ್ನೆ ಸಾಯಂಕಾಲ ತನ್ನ ವಾರಾಂಗನೆಯೊಡನೆ ಮಾತಾಡುತ್ತಿದ್ದಾಗ ಇನ್ನು ಕೆಲವು ದಿನಗಳಲ್ಲಿಯೇ ಪೇಶವೆಯ ಸಾಮ್ರಾಜ್ಯ ಸ್ಥಾಪನೆಯಾಗುವುದೆಂದೂ ಆ ಮೇಲೆ ನಿನ್ನ ಮನೆಯನ್ನು ಹೊನ್ನುಗಳಿಂದ ತುಂಬಿ ಬಿಡುವೆನೆಂದೂ ಹೇಳಿದನಂತೆ.

**ನಾನಾ:—** ಹೇಳಿ ಕೇಳಿ ದುರಾಚಾರಿಗಳು. ಸೆರೆಯ ಅಮಲಿನಲ್ಲಿ ಅವರು ಇಂತಹದನ್ನೇ ಮಾತಾಡುತ್ತಾರೆಂದು ಯಾರು ತಾನೇ ಹೇಳಬಹುದು ? ಆಗ ಅವರು ಈ ಲೋಕದಲ್ಲಿರುವುದಿಲ್ಲ. ಸುರಾದೇವಿಯು ಅವರನ್ನು ಸುರಲೋಕಕ್ಕೆ ಕರೆದೊಯ್ದಿರುವಳು. ನಾನು ನಿಮಗೊಂದು ಗುಪ್ತ ಸಂಗತಿ ಹೇಳಬೇಕಾಗಿದೆ. ಮೊಗಲ್ ಬಾದಷಹನ ಆಜ್ಞಾಪತ್ರಗಳನ್ನು ಓದಿದ ಮಹಮ್ಮದೀಯ ಸೈನಿಕರು ತುಂಬ ಉತ್ತೇಜಿತರಾಗಿದ್ದಾರೆ; ಅವರು ಉನ್ಮತ್ತರಾಗಿ ದಿಲ್ಲಿಗೆ ಹೊರಡಲು ಸಿದ್ಧರಾಗಿದ್ದಾರೆ; ಇಲ್ಲಿ ಹೆಚ್ಚು ಕಾಲ ನಿಲ್ಲುವುದಿಲ್ಲ. ನೀವು ನಿಮ್ಮ ಆಶ್ರಯಸ್ಥಾನದಲ್ಲಿ ಸುರಕ್ಷಿತವಾಗಿರಬಹುದು.

**ಕಲೆಕ್ಟರ:—** ಅಷ್ಟು ಮಾಡಿದರೆ ತಾವು ನಮ್ಮ ಮೇಲೆ ಅನಂತ ಉಪಕಾರ ಮಾಡಿದಂತಾಗುವುದು. ಬಹುಜನ ಹೆಂಗುಸರೂ ಹುಡುಗರೂ ನಮ್ಮೊಡನೆ ಇರುವರು. ಇಲ್ಲವಾದರೆ ನಾವು ಈ ದಂಗೆಗಾರರಿಗೆ ಅಂಜು

ತ್ತಿರಲಿಲ್ಲ. ನಾವು ಅಂತಹ ಹೇಡಿಗಳಲ್ಲ. ಶಸ್ತ್ರಾಸ್ತ್ರ ಸಜ್ಜಿತರಾಗಿ ಶತ್ರುಗಳ ವ್ಯೂಹಗಳನ್ನು ಭೇದಿಸಿ ಕ್ಷಣಕಾಲದಲ್ಲಿ ಪಾರಾಗಿ ಹೋಗಿ ಬಿಡುತ್ತಿದ್ದೆವು.

ನಾನಾ :— ತಾವು ಈ ವಿಷಯದಲ್ಲಿ ನನ್ನ ಮೇಲೆ ಭಾರಹಾಕಿ ನಡೆಯ ಬಹುದು. ನಿಮ್ಮ ಹೆಂಗುಸರಿಗೂ ಹುಡುಗರಿಗೂ ಯಾವ ರೀತಿಯಿಂದಲೂ ತೊಂದರೆಯಾಗದಂತೆ ನೋಡಿಕೊಳ್ಳುವೆನು. ಇದೇ ನನ್ನ ವಚನ. ಈಗಿನ ಪರಿಸ್ಥಿತಿ ತುಂಬ ವಿಚಿತ್ರ ತರದ್ದಾಗಿದೆ. ನಿಮಗೆ ದೇಶೀಯರ ಮೇಲೆ ನಂಬುಗೆ ಯಿಲ್ಲ. ದೇಶೀಯರ ಭಕ್ತಿ ವಿಶ್ವಾಸಗಳನ್ನು ಪೂರಾ ಕಳೆದುಕೊಂಡಿರುವಿರಿ.

ಇನ್ನೂ ಅನೇಕ ಮಾತು ಕತೆ ನಡೆದ ಬಳಿಕ ಕಲೆಕ್ಟರ ಸಾಹೇಬನು ತಮ್ಮ ಆಶ್ರಯ ಸ್ಥಾನಕ್ಕೆ ಮರಳಿ ಹೊರಟನು. ಸಾಯಂಕಾಲವು ಸಮೀಪಿ ಸಿತು. ಇಳಿಹೊತ್ತಿನ ಹೂಬಿಸಿಲೂ ಅತ್ಯುಷ್ಣವಾಗಿದ್ದುದರಿಂದಲೂ, ಮನಸ್ಸಿನ ವಿಚಾರಭಾರದಿಂದ ಹಣ್ಣಾಗಿದ್ದುದರಿಂದಲೂ ಸಾಹೇಬನು ಸಾವಕಾಶವಾಗಿ ನಡೆದಿದ್ದನು. ದಾರಿಯಲ್ಲಿ ಕೂಡಿದ ದೇಶೀಯರು ಮೊದಲಿನಂತೆ ಆದರದಿಂದ ನೋಡಿ ಸಲಾಮು ಮಾಡಿ ಸನ್ಮಾನಿಸದಿರುವುದನ್ನು ಕಂಡು ಸಾಹೇಬನು ಮನಸ್ಸಿನಲ್ಲಿ ಸಂತಾಪಗೊಳ್ಳುತ್ತ ತಮ್ಮ ಆಶ್ರಯಸ್ಥಾನವನ್ನು ಸೇರಿದನು.

ಇಂದು ಜೂನ್ ತಿಂಗಳ ೪ನೆಯ ತಾರೀಖು. ಪ್ರಾತಃಕಾಲದಿಂದಲೂ ಕಾನಪುರದ ಶಿಬಿರದಲ್ಲಿ ಅತಿಶಯ ಕೋಲಾಹಲ. ಎಂಟು ಗಂಟೆಯಾದೊಡನೆ ರಣಭೇರಿಯು ಬಹುಭಯಂಕರವಾಗಿ ಮೊಳಗಿತು. ಮುಹಮ್ಮದೀಯ ಸೈನಿಕರೂ ಸೇನಾಧಿಕಾರಿಗಳೂ ಅಶ್ವಬಲದವರೂ "ದೀನ್ ದೀನ್" ಎಂದು ಗರ್ಜನೆ ಮಾಡುತ್ತ ಶಸ್ತ್ರಾಸ್ತ್ರ ಸಜ್ಜಿತರಾಗಿ ಸೇನಾನಿವಾಸದಿಂದ ಹೊರಗೆ ಬಂದು ಬಿಟ್ಟರು. ಹಲವರು ಹಿಂದು ಸೈನಿಕ ಸೇನಾಧಿಕಾರಿಗಳೂ ಅವರನ್ನು ಅನುಸರಿಸಿದರು. ಮಧ್ಯಾಹ್ನದ ೧೨ ಗಂಟೆಯ ವರೆಗೂ ಸೈನಿಕರು ಗುಂಪು ಗುಂಪಾಗಿ ಹೊರಡುತ್ತಲೇ ಇದ್ದರು. ಹಲವರು ಸೈನಿಕರ ಮನೆ ಮನೆಗೆ ಹೋಗಿ ಹೊರಡಿರೆಂದು ಆಗ್ರಹ ಮಾಡುತ್ತಿದ್ದರು. ಯುರೋಪಿನ್ ಅಧಿಕಾರಿ ಗಳಲ್ಲಿ ಒಬ್ಬನೂ ತಮ್ಮ ಆಶ್ರಯದಿಂದ ಹೊರಗೆ ಬಂದಿರಲಿಲ್ಲ. ಎರಡು ವಿಭಾಗಗಳ ದೇಶೀಯ ಸೈನಿಕರು, ಬಹುತರ ಎಲ್ಲ ಜನರು, ಅಶ್ವಬಲದವರೂ ಕಾಲುದಳದವರೂ ದಂಗೆಗಾರರಾಗಿ ಹೊರಟು ನಡೆದಿದ್ದರು. ಮೂರನೆಯ ದೊಂದು ವಿಭಾಗದವರು ಮಾತ್ರ ಇನ್ನೂ ತಮ್ಮ ನಿವಾಸದಲ್ಲಿಯೇ ಅಡುಗೆ

ಮಾಡಿಕೊಳ್ಳುತ್ತಲಿದ್ದರು. ಅಕಸ್ಮಾತ್ ಬ್ರಿಟಿಷರ ಆಶ್ರಯಸ್ಥಾನದಿಂದ ಗುಂಡಿನ ಮಳೆ ಸುರಿಯತೊಡಗಿತು. ಸೈನಿಕರು ಗಾಬರಿಯಾದರು. ತಮ್ಮ ದೇಶ ಬಾಂಧವರ ಮಾತುಮೀರಿ ಸ್ವಾಮಿನಿಷ್ಠರಾಗಿ ನಿಂತಿರುವಾಗ ಯುರೋಪಿಯನರೇ ತಮ್ಮ ಮೇಲೆ ಗುಂಡಿನ ಮಳೆಗರೆಯುವುದನ್ನು ಕಂಡು ಅವರು ಪಶ್ಚಾತ್ತಾಪ ಪಟ್ಟರು. ಕೊನೆಗೆ ನಿರುಪಾಯರಾಗಿ ಊಟಕ್ಕೆ ಸಿದ್ಧವಾದ ಅಡುಗೆಯನ್ನು ಅಲ್ಲಿಯೇ ಬಿಟ್ಟು ಅವರೂ ಶಿಬಿರದಿಂದ ಹೊರಗೆ ಬಂದರು.

ದಂಗೆಗಾರರು ನಬಾಬಗಂಜಕ್ಕೆ ಬಂದು ನಾನಾಸಾಹೇಬನನ್ನು ಕಂಡು ಮಾತಾಡಿ ನೀನು ನಮ್ಮೊಡನೆ ದಿಲ್ಲಿಗೆ ಹೊರಡಲೇಬೇಕೆಂದು ಆಗ್ರಹ ಪಡಿಸಿದರು. ಹಲವು ಸಾರೆ ಭವತಿ ನಭವತಿಗಳಾದ ಬಳಿಕ ಆತನು ನಿರುಪಾಯದಿಂದ ಅವರನ್ನು ಅನುಸರಣಮಾಡಬೇಕಾಯಿತು. ದ್ರವ್ಯ ಭಾಂಡಾರವನ್ನೂ ಅಸ್ತ್ರಾಗಾರವನ್ನೂ ಈಗಾಗಲೇ ದಂಗೆಗಾರರು ತಮ್ಮ ವಶಮಾಡಿಕೊಂಡಿದ್ದರು. ಜೈಲುಖಾನೆಯನ್ನು ತೆರೆದು ಅಪರಾಧಿಗಳೆಲ್ಲರೂ ಹೊರಗೆ ಬಂದಿದ್ದರು. ಲಕ್ಷಾವಧಿ ಜನವಸತಿಯಿರುವ ಕಾನಪುರ ನಗರದಲ್ಲಿ ಕೊಲೆ ಸುಲಿಗೆಗಳು ಪ್ರಾರಂಭವಾದುವು. ಯುರೋಪಿಯನರ ಮನೆಮಾರುಗಳು ಬೆಂಕೆಹೊತ್ತಿ ಉರಿಯತೊಡಗಿದುವು. ಸಾಯಂಕಾಲದ ಸಮಯಕ್ಕೆ ಎಲ್ಲ ದಂಗೆಗಾರರೂ ನಾನಾಸಾಹೇಬ, ಬಾಳಾಸಾಹೇಬ, ಬಾಬಾಭಟ್ಟ, ಅಜೀಮುಲ್ಲಾಖಾನ, ಸುಭೇದಾರ ಟೀಕಾಸಿಂಹ, ಗಂಗಾದೀನ, ದಿಗ್ವಿಜಯಸಿಂಹ, ಮೊದಲಾದವರೂ ದಿಲ್ಲಿಯ ದಾರಿಯನ್ನು ಹಿಡಿದು ಕಲ್ಯಾಣಪುರಕ್ಕೆ ಮುಟ್ಟಿದರು. ಮುಂದೇನು ಮಾಡಬೇಕೆಂಬ ವಿಷಯದಲ್ಲಿ ರಾತ್ರಿಯೆಲ್ಲಾ ವಿಚಾರ ನಡೆಯಿತು. ಮುಹಮ್ಮದೀಯರು ದಿಲ್ಲಿಗೆ ಹೊರಡಲು ಆತುರರಾಗಿದ್ದರು. ಆದರೆ ಅಜೀಮುಲ್ಲಾಖಾನನು “ ನೀವು ದಿಲ್ಲಿಗೆ ಹೋದರೆ ಅಲ್ಲಿ ನಿಮ್ಮನ್ನು ಕೇಳುವವರಿಲ್ಲದಂತಾಗುವುದು. ಸಮುದ್ರದಲ್ಲಿ ಬಿದ್ದ ಕಸಕಸೆಯ ಕಾಳಿನಂತೆ ನಿಮ್ಮ ಗತಿಯಾಗುವುದು. ಇಲ್ಲಿಯೇ ಇದ್ದರೆ ಪೇಶವೆಯ ಅಧಿಕಾರದಲ್ಲಿ ನೀವೆಲ್ಲರೂ ಸುಖಿಗಳಾಗುವಿರಿ. ನಿಮ್ಮ ನಿಮ್ಮ ವ್ಯಕ್ತಿಗತ ಅಧಿಕಾರ ವೈಭವಗಳು ಹೆಚ್ಚುವುವು. ಶ್ರೀಮಂತ ಪೇಶವೆಯ ಪಟ್ಟಾಭಿಷೇಕದ ದಿನ ಪ್ರತಿ ಸೈನಿಕನಿಗೂ ಒಂದೊಂದು ಬಂಗಾರದ ಕಡೆಯನ್ನು ಕೊಡುವೆವು. ಇದೂ ಅಲ್ಲದೆ ಇದರಲ್ಲಿ ಯುದ್ಧಶಾಸ್ತ್ರದ ತತ್ವವೂ

ಅಡಕವಾಗಿದೆ. ನಾವೆಲ್ಲರೂ ಒಂದೆಡೆಯಲ್ಲಿ ಸೇರುವುದರಿಂದ ಶತ್ರುಗಳಿಗೆ ತಮ್ಮ ಶಕ್ತಿಯನ್ನು ಏಕಕೇಂದ್ರವಾಗಿ ಮಾಡಲು ಅನುವಾಗುವುದು; ಅವರ ಬಲವು ಹೆಚ್ಚುವುದು. ನಾವು ಮೊದಲು ಆಲೋಚಿಸಿದಂತೆ ಕಲಕತ್ತೆಯಿಂದ ಪೇಶಾವರದ ವರೆಗೆ ಅಖಿಲ ಹಿಂದುಸ್ಥಾನದಲ್ಲಿ ಏಕಕಾಲಕ್ಕೆ ಯುದ್ಧವನ್ನು ಆರಂಭಿಸುವುದಕ್ಕಂತೂ ಆಗಲೇ ಇಲ್ಲ. ಈಗಲಾದರೂ ನಾವು ಅಲ್ಲಲ್ಲಿ ರಣ ಭೂಮಿಗಳನ್ನುಂಟುಮಾಡಿ ಬ್ರಿಟಿಷರ ಬಲವನ್ನು ನಾಲ್ಕು ಕಡೆಗೂ ಹರಿದು ಹಂಚಿ ಚೆದರಿಸುವ ಉಪಾಯಮಾಡಬೇಕಲ್ಲದೆ ಒಂದೆಡೆಗೆ ಹೋಗಿ ಕೂಡಿ ಬಿದ್ದು ಇರುಕಿನಲ್ಲಿ ಸಿಕ್ಕಿದ ಇರುವೆಯ ರಾಶಿಯಂತೆ ನುಚ್ಚುನೂರಾಗಿ ಹೋಗುವುದರಲ್ಲಿ ಏನೂ ಅರ್ಥವಿಲ್ಲ." ಎಂದು ಮುಂತಾಗಿ ಬಹು ವಿಧದಿಂದ ಉಪದೇಶಿಸಿದ ಬಳಿಕ ಮರುದಿನ ಬೆಳಗು ಮುಂಜಾನೆ ದಂಗೆಗಾರರೆಲ್ಲರೂ ತಿರುಗಿ ಕಾನಪುರಕ್ಕೆ ಬಂದರು. ಸೇನಾಪತಿ ವ್ಹೀಲರಸಾಹೇಬನಿಗೆ ನಾನಾ ಸಾಹೇಬನ ಹೆಸರಿನಿಂದ ಯುದ್ಧದ ಆಮಂತ್ರಣವು ಕಳುಹಲ್ಪಟ್ಟಿತು. ಯುರೋಪಿಯನರು ಉಳಿದಿದ್ದ ಕೆಲವು ಜನ ದೇಶೀಯ ಸೈನಿಕರನ್ನೊಡ ಗೊಂಡು ಯುದ್ಧದ ಸಿದ್ಧತೆ ಮಾಡಿಕೊಂಡರು. ಯುದ್ಧಾರಂಭವಾಯಿತು.

ಇಂದು ಜೂನ್ ತಿಂಗಳ ೨೩ನೆಯ ತಾರೀಖು. ಪ್ಲಾಸಿಯ ಕಾಳಗವಾಗಿ, ಹಿಂದುಸ್ಥಾನದಲ್ಲಿ ಬ್ರಿಟಿಷರ ಅಧಿಕಾರ ಸ್ಥಾಪನೆಯಾಗಿ, ಇಂದಿಗೆ ಒಂದು ನೂರು ವರುಷಗಳು ತುಂಬಿದುವು. ಕಾನಪುರದ ಸಾಲಂಗಡಿಗಳ ವಿಶಾಲವಾದ ಬಯಲಿನಲ್ಲಿ ನೂತನವಾಗಿ ರಚಿಸಿದ ಸಭಾಮಂಟಪದಲ್ಲಿ ಪೇಶವೆಯ ದರ್ಬಾರು ಮಹಾವೈಭವದೊಡನೆ ಪ್ರಾರಂಭವಾಗಿದ್ದಿತು. ದರ್ಬಾರಿನಲ್ಲಿ ಮಂತ್ರಿಶ್ರೇಷ್ಠ ಅಜೀಮುಲ್ಲಾಖಾನನು ಎದ್ದು ನಿಂತು ದಿಲ್ಲಿ ಲಕನೌಗಳಲ್ಲಿ ದೇಶೀಯರು ವಿಜಯಶಾಲಿಗಳಾಗಿರುವರೆಂದೂ ಉತ್ತರ ಹಿಂದುಸ್ಥಾನದಲ್ಲಿ ಬ್ರಿಟಿಷರ ರಾಜ್ಯಾಧಿಕಾರವು ಸಂಪೂರ್ಣನಷ್ಟವಾಗಿರುವುದೆಂದೂ ಅಖಿಲ ಭರತಖಂಡವೂ ಸ್ವತಂತ್ರವಾಗಿರುವುದೆಂದೂ ಪುಣೆಯಲ್ಲಿ ಪೇಶವೆಯ ಸಾಮ್ರಾಜ್ಯ ಸ್ಥಾಪನೆ ಯಾಗಿದೆಯೆಂದೂ ವಿರೋಧಿಗಳಿಗೆ ಯಾರೂ ಯಾವ ರೀತಿಯಿಂದಲೂ ಸಹಾಯಮಾಡಕೂಡದೆಂದೂ ಅಪ್ಪಣೆಕೊಡಿಸಿದನು. ಆ ಬಳಿಕ ಹಿಂದಿನ ದಿನ ರಾತ್ರಿ ಹಣದ ಆಸೆಯಿಂದ ಬ್ರಿಟಿಷರ ಆಶ್ರಯಸ್ಥಾನಕ್ಕೆ ಆಹಾರಸಾಮಗ್ರಿ ಯನ್ನು ಒಯ್ದು ಕೊಡುತ್ತಿದ್ದ ೧೫ ಜನ ಅಪರಾಧಿಗಳ ವಿಚಾರಣೆ ನಡೆದು

ಕಡುತರವಾದ ಶಿಕ್ಷೆಯನ್ನು ವಿಧಿಸಿದರು. ವೃದ್ಧ ಸಂನ್ಯಾಸಿಯ ವೇಷದಿಂದ ಅಲಹಾಬಾದಕ್ಕೆ ಹೊರಟು ಹಗೆಗಳ ಕೈಯಲ್ಲಿ ಸಿಕ್ಕು ಬಿದ್ದ ಯುರೋಪಿಯನ್ ಸೇನಾಧಿಕಾರಿ ಶೆಫರ್ಡ್ ಸಾಹೇಬನಿಗೆ ಮೂರುವರ್ಷ, ಅವನಿಗೆ ಸಹಾಯಮಾಡಿದ ಜಮಾದಾರ ಖುದಾಭಕ್ಷನಿಗೆ ಆರುವರ್ಷ, ಸಶ್ರಮಶಿಕ್ಷೆ ವಿಧಿಸಲ್ಪಟ್ಟಿತು. ಸಭಾವಿಸರ್ಜನೆಯಾದ ಬಳಿಕ ಶ್ರೀಮಂತ ನಾನಾಸಾಹೇಬ ಪೇಶವೆಯು ಭಟ್ಟಂಗಿಗಳ ಜಯಜಯಕಾರದೊಡನೆ ತನ್ನ ನಿವಾಸಕ್ಕೆ ತೆರಳಿದನು. ಮಂತ್ರಿಶ್ರೇಷ್ಠ ಅಜೀಮುಲ್ಲಾಖಾನ, ಸೇನಾಪತಿ ಟೀಕಾಸಿಂಹ, ಜ್ವಾಲಾಪ್ರಸಾದ, ದಿಗ್ವಿಜಯಸಿಂಹ ಮೊದಲಾದ ಕೆಲವರು ಮುಖಂಡರು ಅಲ್ಲಿಯೇ ಉಳಿದು ಮಾತಾಡಿಕೊಂಡು ಸೇನಾಪತಿ ವ್ಹೀಲರಸಾಹೇಬನೊಡನೆ ನಾಳೆಯೇ ಸಂಧಿಯ ಪ್ರಸ್ತಾಪ ನಡೆಯಿಸಬೇಕೆಂದು ನಿರ್ಣಯಿಸಿದರು.

ಇತ್ತ ಬ್ರಿಟಿಷರ ಆಶ್ರಯಸ್ಥಾನದಲ್ಲಿ ಬಹುಕಷ್ಟ ಸಂಭವಿಸಿದ್ದಿತು. ಹೆಂಗುಸರಿಗೂ ಹುಡುಗರಿಗೂ ಬೇನೆಯವರಿಗೂ ಗಾಯಹೊಂದಿದವರಿಗೂ ಆಶ್ರಯಸ್ಥಾನವಾಗಿದ್ದ ಔಷಧಾಲಯವು ಸುಟ್ಟುಹೋಗಿ, ಔಷಧ ಸಾಮಗ್ರಿಗಳೂ ಶಸ್ತ್ರಕ್ರಿಯೆಯ ಉಪಕರಣಗಳೂ ನಾಶವಾಗಿ, ಬಹುಕಷ್ಟಕ್ಕೆ ಕಾರಣವಾಗಿದ್ದಿತು. ಇನ್ನೂರಕ್ಕಿಂತ ಹೆಚ್ಚು ಜನರು ಬಯಲಲ್ಲಿ ನಿಂತು ಹಗಲು ಉರಿವ ಬಿಸಿಲಲ್ಲಿ, ರಾತ್ರಿ ಮೈನಡಗುವ ಚಳಿಯಲ್ಲಿ, ಕಾಲಕಳೆಯಬೇಕಾಗಿದ್ದಿತು. ಅಲಹಾಬಾದದಿಂದ ಸಹಾಯ ಬರುವ ಮಾರ್ಗವನ್ನು ಇಪ್ಪತ್ತು ದಿನಗಳಿಂದಲೂ ಹುಬ್ಬುಗೈಯಿಕ್ಕಿ ನಿರೀಕ್ಷಿಸಿ ಅವರೆಲ್ಲರೂ ದಣಿದಿದ್ದರು.

ರಾತ್ರಿ ಬಹಳವಾಗಿದೆ. ಕಗ್ಗತ್ತಲೆ. ಸಕಲರೂ ಮಲಗಿ ನಿದ್ದೆ ಹೋಗಿರುವರು. ಕಾನಪುರದ ಸೇನಾನಿವಾಸದಿಂದ ಒಂದು ಮೈಲು ದೂರದಲ್ಲಿದ್ದ ಸತೀಚೌರಾ ಗಟ್ಟದಲ್ಲಿ ಒಬ್ಬ ನಾವಾಡಿಯು ತನ್ನ ಚಿಕ್ಕ ದೋಣಿಯನ್ನು ಕಂಬಕ್ಕೆ ಕಟ್ಟಿಕೊಂಡು ಅದರಲ್ಲಿಯೇ ಮಲಗಿದ್ದನು. ಅಕಸ್ಮಾತ್ ಯಾರೋ ಬಂದು ಆತನು ಹೊದೆದುಕೊಂಡಿದ್ದ ಕಂಬಳಿಯ ಮುಸುಕು ತೆರೆದರು. ನಾವಾಡಿಯು ಬೆಚ್ಚಿಬಿದ್ದು ಎದ್ದು ಕುಳಿತು ಅತ್ತಿತ್ತ ನೋಡಿ ಗಟ್ಟದ ಮೆಟ್ಟಲಮೇಲೆ ನಿಂತಿರುವ ಸ್ತ್ರೀಮೂರ್ತಿಯನ್ನು ಕಂಡು ಅದು ಪ್ರೇತವಾಗಿರಬೇಕೆಂದು ಊಹಿಸಿದನು. ಬಾಲ್ಯದಲ್ಲಿ ಕೇಳಿದ ಭೂತಪಿಶಾಚಿಗಳ ಕತೆಗಳೆಲ್ಲ ನೆನಪಿಗೆ ಬಂದುವು. ಮೈ ಬೆವರಿತು. ಅಂಗಾಂಗಗಳೆಲ್ಲ ನಡುಗಿದುವು. ಹಗಲಿ

ನಲ್ಲಿಯೂ ಹೆಂಗುಸು ಒಂಟಿಗಳಾಗಿ ನದಿಯ ಗಟ್ಟಕ್ಕೆ ಬಾರದಿರುವಂತಹ ಅಶಾಂತಿ (ಹೆದರಿಕೆ) ಯ ದಿನದಲ್ಲಿ ಮಧ್ಯರಾತ್ರಿಯಲ್ಲಿ ಒಬ್ಬಳೇ ಹೆಂಗುಸು ಅಲ್ಲಿಗೆ ಬರುವುದು ತೀರ ಅಸಂಭಾವ್ಯವೆಂದು ಆತನು ತರ್ಕಿಸಿದನು. ದೂರ ನಿಂತಿರುವ ಪ್ರೇತವು ಮೆಲ್ಲನೆ ತನ್ನೆಡೆಗೆ ಸರಿದು ಬರುವುದನ್ನು ಕಂಡು ಪ್ರಾಣಭಯದಿಂದ ಚಿಟ್ಟನೆ ಚೀರಿದನು. (ಕೂಗಿಕೊಂಡನು.) ನೆರೆಯ ಶಿವಾಲಯದಲ್ಲಿ ಮಲಗಿದ್ದ ಗಟ್ಟದ ಕಾವಲುಗಾರರು ಅದನ್ನು ಕೇಳಿ ಧಾವಿಸಿ ಬಂದು ಆಕೆಯನ್ನು ಹಿಡಿದೊಯ್ದರು. ದೀಪದ ಬೆಳಕಿನಲ್ಲಿ ನೋಡಲು ಆಕೆಯು ದೇಶೀಯರ ಉಡುಗೆತೊಡುಗೆಗಳನ್ನು ಧರಿಸಿದ ಒಬ್ಬ ಯುರೋಪಿಯನ್ ಸ್ತ್ರೀಯಾಗಿದ್ದಳು. ಮೂರನೆಯ ದಿನ ಮುಂಜಾನೆ ಅವರು ಆಕೆಯನ್ನು ಒಯ್ದು ಸೇನಾಪತಿ ಟೀಕಾಸಿಂಹನಿಗೆ ಒಪ್ಪಿಸಿದರು.

ಸಂಧಿಯ ಪತ್ರವನ್ನು ಹೇಗೆ ಕಳುಹಬೇಕೆಂಬ ವಿಚಾರದಲ್ಲಿದ್ದ ಅಜೀಮುಲ್ಲಾಖಾನ ಮುಂತಾದವರಿಗೆ ಅನಾಯಾಸವಾಗಿ ಒಂದು ಆಳು ದೊರೆದಂತಾಯಿತು. ಅವರೊಂದು ಪತ್ರವನ್ನು ಕೊಟ್ಟು ಸೇನಾಪತಿ ವ್ಹೀಲರ ಸಾಹೇಬನಿಗೆ ಮುಟ್ಟಿಸೆಂದು ಹೇಳಿ ಆಕೆಯನ್ನು ತಿರುಗಿ ಕಳುಹಿದರು.

"ಲಾರ್ಡ ಡಾಲಹೌಸಿಯ ಕೃತಿಗೆ ಯಾವರೀತಿಯಿಂದಲೂ ಸಂಬಂಧವಿಲ್ಲದಿರುವ ಮತ್ತು ಆಯುಧಗಳನ್ನು ಕೆಳಗಿಟ್ಟು ಶರಣುಬರುವ ಯಾವತ್ತು ಜನರನ್ನು ಅಲಹಾಬಾದಕ್ಕೆ ಸುರಕ್ಷಿತವಾಗಿ ಹೋಗಗೊಡುವೆವು" ಎಂದು ಮುಂತಾಗಿ ಬರೆದಿರುವ ಪತ್ರಾಭಿಪ್ರಾಯವನ್ನು ತಿಳಿದು ವ್ಹೀಲರ ಸಾಹೇಬನು ವಿಚಾರಮಗ್ನನಾದನು. ಆ ಪತ್ರಕ್ಕೆ ಯಾರೂ ಸಹಿಮಾಡಿರಲಿಲ್ಲ. ಹಸ್ತಾಕ್ಷರವು ಅಜೀಮುಲ್ಲಾಖಾನನ ಬರೆಹದಂತಿತ್ತು. ಸೇನಾಪತಿಯು ತನ್ನ ಸಹಕಾರಿಗಳ ಅಪ್ತಾಲೋಚನೆ ಕೇಳಿದನು.

**ಕ್ಯಾಪ್ಟನ್ ಮೂರ್**— ನಾವು ತೀರ ಸ್ವಲ್ಪ ಜನರಿರುವೆವು. ಯುದ್ಧ ಸಾಮುಗ್ರಿ ಆಹಾರ ಸಾಮುಗ್ರಿಗಳೂ ತೀರಿ ಹೋಗಿವೆ. ಸೈನಿಕರು ಮೊನ್ನೆ ತೋಫಿನಗಾಡಿಗೆ ಹೂಡುವ ಎತ್ತುಗಳನ್ನೂ ಕೊಯ್ದು ತಿಂದಿರುವರು. ನಮ್ಮ ಶಿಬಿರದಲ್ಲಿ ಕುದುರೆಗಳಂತೂ ಒಂದೂ ಉಳಿದಿಲ್ಲ.

**ಕ್ಯಾಪಟನ್ ವಾಯಿಟಂಗ್**—ಸದ್ಯಕ್ಕೆ ಕಲಕತ್ತೆಯಿಂದಾಗಲಿ, ಲಕನೌವಿನಿಂದಾಗಲಿ ನಮಗೆ ಸಹಾಯಬರುವ ಸಂಭವ ತೋರುವುದಿಲ್ಲ.

**ಸೇನಾಪತಿ—** ಈಗ ಇಪ್ಪತ್ತು ದಿನಗಳಿಂದಲೂ ಬೇನೆಯಿಂದ ಇಲ್ಲವೆ ರಣಭೂಮಿಯಲ್ಲಿ ಮರಣಹೊಂದಿದ ೨೫೦ಕ್ಕಿಂತ ಹೆಚ್ಚು ಜನರನ್ನು ಒಂದೇ ಬಾವಿಯಲ್ಲಿ ಮಲಗಿಸಿದೆವು. ಇನ್ನೂರಕ್ಕಿಂತ ಹೆಚ್ಚು ಜನ ಹೆಂಗುಸರೂ ಹುಡುಗರೂ ನಮ್ಮ ಕಾಲಿಗೆ ತೊಡಿಸಿದ ಸಂಕೋಲೆಗಳಂತಾಗಿ ಕುಳಿತಿದ್ದಾರೆ.

**ಕ್ಯಾಪ್ಟನ್ ವೈಟಿಂಗ್—** ಈ ನಾಲ್ಕೈದು ಅಡಿ ಎತ್ತರವಾದ ಮಣ್ಣಿನ ದುರ್ಗವು ಮಳೆಯು ಆರಂಭವಾದೊಡನೆ ತೊಳೆದು ಹೋಗುವುದು. ನೂರಕ್ಕಿಂತ ಕಡಮೆ ಸಂಖ್ಯೆಯು ನಾವು ಇಂತಹ ಕಷ್ಟಮಯ ಸ್ಥಿತಿಯಲ್ಲಿ ಸಾವಿರಾರು ಹಗೆಗಳೊಡನೆ ಇನ್ನೆಷ್ಟು ದಿನ ತಾನೆ ಕಾದಾಡುವೆವು!

ಸೇನಾಪತಿ ವ್ಹೀಲರ ಸಾಹೇಬನು ಅಂತಃಕರಣದಲ್ಲಿ ಅತ್ಯಂತ ಕಾತರನಾಗಿ ಪೇಶವೆಯ ಸಂಧಿಯ ಪ್ರಸ್ತಾಪಕ್ಕೆ ಒಪ್ಪಿಕೊಂಡನು. ಮೊದಲು ನಾನಾಸಾಹೇಬನಿಗೆ ಇಂಗ್ಲಿಷು ಭಾಷೆಯನ್ನು ಕಲಿಸುತ್ತಿದ್ದ ಟಾಡ್ ಸಾಹೇಬನು ಹಿಂದಿನ ಪತ್ರವನ್ನು ಒಯ್ದು ಪೇಶವೆಯ ಸಹಿ ಮಾಡಿಸಿಕೊಂಡು ಬಂದನು. ಬಹುದಿನಗಳ ಕಷ್ಟಾನುಭವದ ತರುವಾಯ ಇಂದು ಕಾನಪುರದ ಬ್ರಿಟಿಷರ ನಿವಾಸದಲ್ಲಿ ಆನಂದ ಸಂಚಾರವಾಯಿತು. ಪೇಶವೆಯ ಸೇನಾಪತಿ ಜ್ವಾಲಾಪ್ರಸಾದನು ಬ್ರಿಟಿಷರ ಆಶ್ರಯಸ್ಥಳಕ್ಕೆ ಹೋಗಿ ಅಲ್ಲಿದ್ದ ೧೨೦ ಸಾವಿರ ರೂಪಾಯಿಗಳನ್ನೂ ಹೆಚ್ಚಿನ ಮದ್ದುಗುಂಡುಗಳನ್ನೂ ತನ್ನ ಆಧೀನಕ್ಕೆ ತೆಗೆದುಕೊಂಡನು. ಸಂಧಿಯು ನಿಶ್ಚಯವಾಯಿತು.

ಸೂರ್ಯಾಸ್ತವಾಗಿ ನಿಶಾಸಮಯವು ಸಮೀಪಿಸಿತು. ಉಗ್ರವಾದ ಬಿಸಿಲಿನ ತಾಪವು ಅಡಗಿ ಗಂಗಾನದಿಯತ್ತಣಿಂದ ತಂಗಾಳಿ ತೊನೆಯಲಾರಂಭಿಸಿತು. ಕಾನಪುರದಲ್ಲಿ ಬ್ರಿಟಿಷರ ಶಿಬಿರದಲ್ಲಿ ಬಹುದಿನಗಳವರೆಗೆ ಬಹುವಿಧದ ಕಷ್ಟನಷ್ಟಗಳನ್ನು ಅನುಭವಿಸಿದ ಸೈನಿಕ ಸೇನಾಧಿಕಾರಿಗಳು ಹಿಂದಿನದನ್ನೆಲ್ಲ ಮರೆತು ರಣವಾದ್ಯಗಳ ಕೋಲುಗಳಿಂದ ತಾಳ ಹಾಕುತ್ತ ಹಾಡುತ್ತ ಕುಳಿತಿದ್ದರು. ಎಳೆಯ ಮಕ್ಕಳು ಅತಿಶಯ ಆನಂದದಿಂದ ಅತ್ತಿತ್ತ ಕುಣಿದಾಡುತ್ತಿದ್ದರು. ಹೆಂಗುಸರು ತಮ್ಮ ತಮ್ಮ ಬಟ್ಟೆಗಳನ್ನೂ ಸಾಮಗ್ರಿಗಳನ್ನೂ ಸರಿಪಡಿಸಿಕೊಳ್ಳುತ್ತಿದ್ದರು. ವೃದ್ಧ ಸೇನಾಪತಿ ವ್ಹೀಲರ ಸಾಹೇಬನು ಮನಸ್ಸಿನ ಹೊರಲಾರದ ಹೊರೆಯನ್ನು ಕೆಳಗೊಗೆದು ನಿಶ್ಚಿಂತನಾಗಿ ಬಯಲಲ್ಲಿ ಬರಿಯ ನೆಲದ ಮೇಲೆ ಮಲಗಿ ವಿಶ್ರಮಿಸುತ್ತಿದ್ದನು.

# ಐದನೆಯ ಪರಿಚ್ಛೇದ

## ಕಾನಪುರದಲ್ಲಿ ಕೊಲೆ-ಕ್ರಾಂತಿ

"Nana took his seat on the throne as Peshva, the sacred marks were affixed on his fore-head, salutes were fired and the city illuminated at night in honour of the occasion."

—*Forrest.*



ಕಾನಪುರದೊಳಗಿನ ಬ್ರಿಟಿಷರ ಆಶ್ರಯ ಸ್ಥಾನದ ವಾಯವ್ಯ ದಿಕ್ಕಿನಲ್ಲಿ ೭೦-೮೦ ಅಡಿ ಆಳವಾದ ಒಂದು ಹಾಳು ಬಾವಿಯಿದ್ದಿತು. ಹಿಂದೆ ಹೇಳಿದಂತೆ ೨೫೦ ಕ್ಕಿಂತ ಹೆಚ್ಚು ಹೆಣಗಳನ್ನು ಅದರಲ್ಲಿ ಒಗೆದಿದ್ದರು. ಆ ಹೆಣಗಳು ಕೊಳೆತ ದುರ್ವಾಸನೆಯಿಂದ ಅದರ ಸಮೀಪದಲ್ಲಿ ಹಾಯುವುದು ಕೂಡ ಬಹು ಕಷ್ಟವಾಗಿದ್ದಿತು. ಇಂತಹ ಬಾವಿಯನ್ನು ೧೭-೧೮ ವರ್ಷದ ತರುಣಿಯೊಬ್ಬಳು ಹಣಿಯಿಕ್ಕಿ ನೋಡಿ "ಹಾ ದೇವಾ! ಕೊನೆಗೂ ನಿನ್ನ ಕಿವಿಗಳಿಗೆ ಈ ದೀನೆಯ ಮೊರೆ ಕೇಳಿಸಲೆ ಇಲ್ಲ. ನನ್ನ ಅಂತಃಕರಣವನ್ನು ಬಾವಿಯಲ್ಲಿ ಎಸೆದು ಇಂದಿಗೆ ಎಂಟು ದಿನಗಳಾದುವು. ಪ್ರಿಯತಮಾ, ಹೋಗಿಬರುತ್ತೇನೆ." ಎನ್ನುತ್ತ ಕರವಸ್ತ್ರವನ್ನು ಮುಖಕ್ಕೆ ಮುಚ್ಚಿಕೊಂಡು ಅಳತೊಡಗಿದಳು. ಅಕಸ್ಮಾತ್ ಯಾರೋ ಆಕೆಯ ಹೆಗಲ ಮೇಲೆ ಕೈಯಿಟ್ಟು ನಿಂತರು. ತರುಣಿಯು ಬೆಚ್ಚಿಬಿದ್ದು ತಿರುಗಿ ನೋಡಿದಳು. ಆಶ್ಚರ್ಯ! ವಿಸ್ಮಯ! ಯಾವಾತನು ಮೃತನೆಂದು ಭಾವಿಸಿದ್ದಳೋ ಆತನೇ ಆಕೆಯ ಹೆಗಲಮೇಲೆ ಕೈಯಿಟ್ಟು ನಿಂತಿದ್ದಾನೆ! "ಪ್ರಿಯೇ, ಅಳುವುದಕ್ಕೇನಾಯಿತು?" ಎಂದು ಕೇಳುತ್ತಿದ್ದಾನೆ! ಇದೇನು ಕನಸೋ? ಪ್ರೇತವೋ? ಎಂದವಳು ಭಯಭ್ರಾಂತಳಾಗಿ "ಅಲ್ಲೀಖಾನ" ಎಂದು ಕೂಗಿದಳು. ಅಲ್ಲೀಖಾನನು ಆಕೆಯನ್ನು ಬಿಗಿಯಾಗಿ ಅಪ್ಪಿಕೊಂಡು "ಪ್ರಿಯೇ ಅಳುವುದೇಕೆ? ನಾನು ಸುರಕ್ಷಿತವಾಗಿದ್ದೇನೆ." ಎಂದನು.

"ಈಗೆಂಟು ದಿನಗಳ ಹಿಂದೆ ನೀನು ಹಗೆಗಳ ಗುಂಡುಬಡಿದು ಮರಣ ಹೊಂದಿದೆಯೆಂದೂ ಮಿಕ್ಕ ಹಲವರ ಶವದೊಡನೆ ನಿನ್ನ ಶವವನ್ನೂ ಈ ಬಾವಿಯಲ್ಲಿ ಎಸೆದುಬಿಟ್ಟರೆಂದೂ ನಮ್ಮ ತಂದೆಯವರು ಹೇಳಿದ್ದರು."

"ಇಲ್ಲ; ಅಂದೇ ನಾನು ನಿಮ್ಮ ಆಶ್ರಯಸ್ಥಾನವನ್ನು ಬಿಟ್ಟು ಹಗೆಗಳ ಪಾಳೆಯವನ್ನು ಸೇರಿದೆನು. ನಿಮ್ಮ ತಂದೆ ವ್ಹೀಲರಸಾಹೇಬನು ನನ್ನನ್ನು ಆಗ್ರಹಪಡಿಸಿ ಹೊರಡಿಸಿದನು. ನೀನು ನನ್ನನ್ನು ಪ್ರೀತಿಸುವುದು ಆತನಿಗೆ ಗೊತ್ತಾಗಿದೆ. ನೀವೆಲ್ಲರೂ ನಾಳೆ ಅಲಹಾಬಾದಿಗೆ ಹೋಗುವುದು ಗೊತ್ತಾಗಿದೆಯಂತೆ. ಆದುದರಿಂದ ನಿನ್ನನ್ನು ನೋಡಿ ಹೋಗಬೇಕೆಂದು ಈ ಕಳ್ಳದಾರಿಯಿಂದ ಒಳಗೆ ಬಂದೆನು."

"ಹೌದು. ನಮ್ಮವರಿಗೆ ಇಂದು ಅತ್ಯಾನಂದವಾಗಿದೆ. ನಾನು ಮಾತ್ರ. . . ."

"ಈ ಆನಂದವು ಹೆಚ್ಚುಕಾಲ ನಿಲ್ಲಲಾರದು. ನಾಳೆ ಬೆಳಗಾದೊಡನೆ ಮತ್ತೆ ಭಯಂಕರವಾದ ವಿಪತ್ತು ಒದಗುವುದು. ಸತೀಚೌರಾ ಗಟ್ಟದಲ್ಲಿ ಮೃತ್ಯುದೇವತೆ ನಿಮ್ಮವರಿಗಾಗಿ ಆಯೆಂದು ಬಾಯಿತೆರೆದು ಕುಳಿತಿರುವಳು."

"ಹಾಗೆಂದರೇನು? ಸಂಧಿಯ ವಚನಪತ್ರದ ಮೇಲೆ ನಾನಾಸಾಹೇಬನೇ ಸಹಿ ಮಾಡಿದ್ದಾನೆ."

"ನಾನಾಸಾಹೇಬನು ಹೆಸರಿಗೆ ಮಾತ್ರ ಮಹಾರಾಜನು. ದಂಗೆಗಾರ ಸೈನ್ಯದ ಮೇಲೆ ಆತನ ಅಧಿಕಾರವು ಎಷ್ಟೂ ನಡೆಯುವುದಿಲ್ಲ. ವಜೀರ ಅಜೀಮುಲ್ಲಾಖಾನನು ಮಹಾ ತಂತ್ರಗಾರನು. ಸೇನಾಪತಿ ಜ್ವಾಲಾಪ್ರಸಾದನೂ ಅತಿಶಯ ಕಪಟಿ. ಬಾಳಾಸಾಹೇಬನೂ ಮತ್ತೆ ಕೆಲವರೂ ಈ ಸಂಚಿನಲ್ಲಿ ಸೇರಿದ್ದಾರೆ. ನಿನ್ನೆ ಸಾಯಂಕಾಲವೇ ಎಲ್ಲವೂ ಗೊತ್ತಾಗಿದೆ."*

"ಮುಂದೇನು ಗತಿ? ನಮ್ಮವರಿಗೆ ದೈವವು ಅನುಕೂಲವಾಗಿಲ್ಲವೆಂದು ತೋರುತ್ತದೆ."

---

*** At sunset a consultation was held in Nana's tent when it was decided that the British should be massacred at the Sutteechoura Ghat. Bala, Nana's brother, Azemoolah, Bregadier Jwala Prasad, Shah Alli......were present.** ***Forrest.***

“ ನೀನು ಈಗಲೇ ಹೋಗಿ ನಿಮ್ಮ ತಂದೆಯವರಿಗೆ ಎಲ್ಲವನ್ನೂ ತಿಳುಹು. ನಾನು ಹೇಳಿದೆನೆಂದಾಗಲಿ ನೀನು ನನ್ನನ್ನು ನೋಡಿದೆಯೆಂದಾಗಲಿ ಹೇಳಬೇಡ. ನಿಮ್ಮವರ ಉಪ್ಪನ್ನವನ್ನುಂಡುದನ್ನು ಮರೆಯಲಾರದೆ ಈ ಮಾತು ನಿಮಗೆ ತಿಳುಹಬೇಕಾಯಿತು. ”

“ ಪ್ರಿಯತಮ ! ನಾನು ಪುನಃ ನಿನ್ನನ್ನು ಎಂದು, ಎಲ್ಲಿ ಕಾಣಬೇಕು? ಇಂದು ನೀನು ಗೋರಿಯಿಂದಲೇ ಎದ್ದು ಬಂದಂತಾಗಿದೆ. ”

“ ಎಲ್ಲವೂ **ಆತನಿಗೆ** ಸೇರಿದುದು. ನಾನಿನ್ನು ಇಲ್ಲಿ ಹೆಚ್ಚು ಹೊತ್ತು ನಿಲ್ಲಲಾರೆ. ನೀನೂ ಹೊರಡು. ”

ಅಲ್ಲೀಖಾನನು ಹೊರಟು ನಡೆದನು. ತರುಣಿಯು ಬಹು ದುಃಖದಿಂದ ತನ್ನ ನಿವಾಸಕ್ಕೆ ತಿರುಗಿಬಂದಳು. ವಿಶ್ರಾಂತಿಗಾಗಿ ಮಲಗಿದ್ದ ಸೇನಾಪತಿ ವ್ಹೀಲರಸಾಹೇಬನು ಮಗಳು ಬರುವುದನ್ನು ಕಂಡು ಹತ್ತಿರ ಬಂದು ಕುಳ್ಳಿರೆಂದು ನೆಲಬಡಿದು ಸನ್ನೆ ಮಾಡಿದನು. ಮಗಳು ತಾನು ಕೇಳಿ ತಿಳಿದಿರುವುದೆಲ್ಲವನ್ನೂ ಹೇಳಲು ನಿಟ್ಟುಸಿರು ಬಿಟ್ಟು ಮುಖತಗ್ಗಿಸಿ ಸುಮ್ಮನಾದನು.

ಇಂದು ಜೂನ್ ತಿಂಗಳ ೨೭ನೆಯ ತಾರೀಖು. ಸೂರ್ಯೋದಯವಾಯಿತು; ಅತ್ಯಂತ ಕ್ರೂರವಾದ ಕಪಟಾಚರಣೆಯನ್ನು ಕಾಣಬೇಕಾಗಿದೆಯೆಂದು ಸಂತಪ್ತನಾಗಿ ಕೆಂಗಣ್ಣಿನ ಕಿಡಿಗಳನ್ನುಕಾರುತ್ತಿರುವನೋ ಎಂಬಂತೆ ಆತನು ಅತ್ಯುಗ್ರನಾಗಿದ್ದನು. ಬ್ರಿಟಿಷರು ತಮ್ಮ ಸೇನಾನಿವಾಸದಿಂದ ಹೊರಡುವ ಸಿದ್ಧತೆಯಲ್ಲಿ ತೊಡಗಿದ್ದರು. ಹೆಂಗುಸರೂ ಹುಡುಗರೂ ಬೇನೆಬಿದ್ದವರೂ ಆಳಿದುಳಿದ ಸೈನಿಕ ಸೇನಾಧಿಕಾರಿಗಳೂ ತಮ್ಮ ತಮ್ಮ ಸಾಮಗ್ರಿಗಳನ್ನು ಸರಿಪಡಿಸಿಕೊಂಡು ಹೊರಡುವುದಕ್ಕೆ ಸಿದ್ಧರಾದರು. ಬ್ರಿಟಿಷರ ಆಶ್ರಯಸ್ಥಾನದೊಳಗೆ ಬಂದಿದ್ದ ದಂಗೆಗಾರರು ಅವರ ಮಣ್ಣಿನ ಕೋಟೆಯನ್ನೂ ತೀರ ಅಲ್ಪಸಂಖ್ಯಾಕರಾದ ಸೈನಿಕರನ್ನೂ ನೋಡಿ ಆಶ್ಚರ್ಯದಿಂದ ಮೂಗಿನ ಮೇಲೆ ಬೆರಳಿಟ್ಟುಕೊಂಡರು. ಇಷ್ಟು ಸ್ವಲ್ಪ ಜನರು ಇಂತಹ ಆಶ್ರಯಸ್ಥಾನದಲ್ಲಿದ್ದುಕೊಂಡು ಇಂತಹ ಪ್ರಬಲವಾದ ಅರಿಬಲದೊಡನೆ ಇಪ್ಪತ್ತೊಂದು ದಿನಗಳವರೆಗೆ ಕಾದಾಡಿದುದನ್ನು ಕಂಡು ಅವರು ವಿಸ್ಮಿತರಾಗಿ ಬ್ರಿಟಿಷರ ಧೈರ್ಯ ಶೌರ್ಯ ರಣಕೌಶಲ್ಯಗಳನ್ನು ಕೊಂಡಾಡಿದರು.

ಬ್ರಿಟಿಷರು ತಮ್ಮ ಆಶ್ರಯಸ್ಥಾನವನ್ನು ಬಿಟ್ಟು ಹೊರಗೆ ಬಂದರು.

ಬಹುಜನ ನಗರವಾಸಿಗಳು ಅವರ ಪ್ರಯಾಣವನ್ನು ನೋಡಲು ರಾಜ ಮಾರ್ಗದ ಎಡಬಲಗಳಲ್ಲಿ ತಂಡತಂಡವಾಗಿ ನೆರೆದಿದ್ದರು. ಅವರು ಹಿಂದುಸ್ತಾನದಲ್ಲಿ ಬ್ರಿಟಿಷರ ಅಧಿಕಾರವು ಸಂಪೂರ್ಣ ನಷ್ಟವಾದುದು ನಿಜವೆಂದು ನಂಬಿದರು. ಬ್ರಿಟಿಷರಲ್ಲಿ ಬಹುಜನರು ಬರಿಗಾಲಿನಿಂದ ನಡೆದಿದ್ದರು. ಹಲವರಿಗೆ ಬೂಟಿನೊಳಗೆ ಕಾಲುಚೀಲವಿರಲಿಲ್ಲ. ಒಬ್ಬರಿಗೂ ಒಳ ಅಂಗಿ (Shirt) ಗಳೇ ಇರಲಿಲ್ಲ. ಗುಂಡುತಾಗಿದವರ ಗಾಯಗಳನ್ನು ಕಟ್ಟುವುದಕ್ಕೆ ತೆಳ್ಳನೆಯ ಅರುವೆ ಬೇಕಾಗುವುದರಿಂದ ಎಲ್ಲರೂ ತಮ್ಮ ಒಳ ಅಂಗಿಗಳನ್ನು ಹರಿದು ಕೊಟ್ಟಿದ್ದರು. ಎಲ್ಲರ ಹೊರ ಅಂಗಿ( Coat )ಗಳು ಗುಂಡು ಬಡಿದು ಇಲ್ಲವೆ ಬೆಂಕೆಯು ಕಿಡಿತಾಗಿ ಛಿದ್ರಮಯವಾಗಿದ್ದುವು. ಹೊಗೆಯಿಂದಲೂ ಧೂಳಿಯಿಂದಲೂ ಮಲಿನವಾದ ಹರಕುಬಟ್ಟೆಗಳಿಂದ ಅವರು ತಮ್ಮ ಮೈಕೈಗಳನ್ನು ಮರೆಮಾಡಿಕೊಂಡಿದ್ದರು.

ಎಲ್ಲರೂ ಸತೀಚೌರಾ ಗ್ರಾಮದ ದಿಣ್ಣೆಯನ್ನು ದಾಟಿ ನದಿಯ ಗಟ್ಟಕ್ಕೆ ಮುಟ್ಟಿದರು. ನದಿಯಲ್ಲಿ ೪೦ ನಾವೆಗಳು ಸಿದ್ಧವಾಗಿ ನಿಂತಿದ್ದುವು. ದೇಶೀಯ ಸೈನಿಕರಲ್ಲಿ ಹಲವರು ತಮ್ಮ ಮೊದಲಿನ ಅಧಿಕಾರಿಗಳನ್ನು ಕಂಡು ಮಾತಾಡಿ ಅವರಿಗೊದಗಿದ ಕಷ್ಟದಿಂದ ಅನುತಾಪಪಟ್ಟರು. ಬೇಸಗೆಯಾಗಿದ್ದುದರಿಂದ ನದಿಯಲ್ಲಿ ನೀರು ಕಡಮೆಯಾಗಿ ನಾವೆಗಳು ಗಟ್ಟಕ್ಕೆ ಹೊಂದಿ ನಿಲ್ಲಲು ಅನುಕೂಲವಿರಲಿಲ್ಲ. ಎಲ್ಲರೂ ಮೊಳಕಾಲುದ್ದ ನೀರಿನಲ್ಲಿಳಿದು ನಾವೆಗಳನ್ನು ಏರಬೇಕಾಗಿದ್ದಿತು. ಮೊದಲು ಹೆಂಗುಸರು ಗಾಯವಡೆದವರು ಬೇನೆಯವರು ಇವರನ್ನು ಒಯ್ದು ನಾವೆಯಲ್ಲಿ ಕುಳ್ಳಿರಿಸಿದರು; ತರುವಾಯ ಸೈನಿಕ ಸೇನಾಧಿಕಾರಿಗಳು ಕುಳಿತರು. ಒಂಬತ್ತು ಗಂಟೆಯಾಯಿತು. ಬ್ರಿಟಿಷ ಸೇನಾಧಿಕಾರಿ ಮೇಜರ ವಿಬರ್ಟಸಾಹೇಬನು ತನ್ನ ನಾವೆಯಲ್ಲಿ ಎದ್ದು ನಿಂತು ಹೋಗಿಬರುವೆವೆಂದು ದಂಡೆಯಮೇಲೆ ನಿಂತವರಿಗೆ ಟೊಪ್ಪಿಗೆಯನ್ನು ತೂಗಿ ಸಲಾಮು ಮಾಡಿದನು. ದಂಡೆಯಮೇಲೆ ಆಕಸ್ಮಾತ್ ರಣಭೇರಿಯು ಭೋರ್ಗರೆದು ಮೊಳಗಿತು. ತೋಫು ತುಬಾಕಿಗಳ ಘನಗರ್ಜನೆಯಿಂದ ಭೂದೇವಿ ನಡುಗಿದಳು. ನದಿಯಲ್ಲಿದ್ದ ನಾವೆಗಳಿಂದ ನಾವಾಡಿಗಳು ನೀರಿನಲ್ಲಿ ಧಡಧಡನೆ ಹಾರಿ ದಂಡೆಗೆ ಬಂದು ಸೇರಿದರು. ಶಸ್ತ್ರಗಳನ್ನು ಕೆಳಗಿಟ್ಟು ಶರಣುಬಂದವರ ಮೇಲೆ ಕಪಟಜಾಲವನ್ನು ಬೀಸಿ ಗುಂಡಿನ ಮಳೆಗರೆಯು

ವಂತಹ ನೀಚ ಕೃತ್ಯವನ್ನು ನೋಡಲಾರದೆ ಸೂರ್ಯನಾರಾಯಣನು ಕಣ್ಣು ಮುಚ್ಚಿದನೋ ಎಂಬಂತೆ ಮೋಡಮುಸುಕಿತು. ಸೃಷ್ಟಿದೇವತೆಯು ನಿಟ್ಟುಸಿರೋ ಎಂಬಂತೆ ಬಿರುಗಾಳಿ ಬೀಸಿತು. ದೇವತೆಗಳು ಸುರಿಸುವ ಅಶ್ರುಧಾರೆಗಳಂತೆ ಮಳೆಗರೆಯಿತು. ಬಹುಜನ ಬ್ರಿಟಿಷರು ಹತರಾದರು. ಅವರು ಕುಳಿತಿದ್ದ ನಾವೆಗಳಿಗೆ ಬೆಂಕಿ ಹೊತ್ತಿತು. ಹೆಂಗುಸರೂ ಹುಡುಗರೂ ನದಿಯಲ್ಲಿ ದುಮ್ಮಿಕ್ಕಿದರು.

ನಾನಾಸಾಹೇಬಪೇಶವೆಯು ತನ್ನ ನಿವಾಸದಲ್ಲಿದ್ದು ಈ ಆಕಸ್ಮಿಕವಾದ ತೋಫು ತುಬಾಕಿಗಳ ಗರ್ಜನೆಯನ್ನು ಕೇಳಿ ಸಮಾಚಾರವೇನೆಂಬುದನ್ನು ತಿಳಿದುಕೊಳ್ಳಲು ಹೊರಗೆ ಬರುವಷ್ಟರಲ್ಲಿ ಅಶ್ವಾರೋಹಿಯೊಬ್ಬನು ಧಾವಿಸಿ ಬಂದು ಸೈನಿಕರ ಅತ್ಯಾಚಾರವನ್ನು ವಿವರಿಸಿದನು. ನಾನಾಸಾಹೇಬನು ಹೆಂಗುಸರಿಗೂ ಹುಡುಗರಿಗೂ ಯಾವ ರೀತಿಯಿಂದಲೂ ಅಪಾಯವುಂಟಾಗದಂತೆ ನೋಡಿಕೊಳ್ಳಬೇಕೆಂದೂ. ಇದಕ್ಕೆ ವಿರುದ್ಧವಾಗಿ ವರ್ತಿಸಿದರೆ ನನ್ನನ್ನೇ ಕೊಲೆಮಾಡಿದಂತಾಗುವುದೆಂದೂ ಅಜೀಮುಲ್ಲಾಖಾನರಿಗೂ ಜ್ವಾಲಾಪ್ರಸಾದ ಮೊದಲಾದವರಿಗೂ ತಿಳುಹೆಂದು ಆತನನ್ನು ತಿರುಗಿ ಕಳುಹಿದನು.

ಅಶ್ವಾರೋಹಿಯು ಧಾವಿಸಿ ಬಂದು ಪೇಶವೆಯ ಆಜ್ಞೆಯನ್ನು ನಿರೂಪಿಸಿದನು. ಕೊಲೆಯ ಕಾರ್ಯವು ನಿಂತಿತು. ೧೨೨ ಜನ ಹೆಂಗುಸರೂ ಹುಡುಗರೂ ನದಿಯಿಂದ ಮೇಲೆ ಬಂದರು. ಅವರೆಲ್ಲರನ್ನು ಬೀಬಿಗೃಹವೆಂಬ ಚಿಕ್ಕ ಮನೆಯಲ್ಲಿ ಒಯ್ದು ಸೆರೆಯಲ್ಲಿಟ್ಟರು. ಗಾಳಿ ಮಳೆಗಳ ಭರದಲ್ಲಿ ಮೂರು ನಾವೆಗಳು ತೇಲಿ ಹೋದುವು. ನದಿಯ ಎರಡನೆಯ ದಂಡೆಯ ಮೇಲಿದ್ದ ದಂಗೆಗಾರರ ತೋಫಿನ ಹೊಡೆತದಿಂದ ಅವುಗಳಲ್ಲಿ ಎರಡು ನಾವೆಗಳು ಮುಳುಗಿದುವು. ಮೂರನೆಯದರ ಪಟಸ್ತಂಭವು ಮುರಿದು ಚುಕ್ಕಾಣಿಯು ಸಿಡಿದು ಬಿದ್ದಿತು. ಆದರೂ ಅದು ಹಗುರಾಗಿದ್ದು ನದಿಯ ಮುಖ್ಯ ಪ್ರವಾಹದಲ್ಲಿ ಸಿಕ್ಕಿದ್ದುದರಿಂದ ಮುಂದೆ ಸಾಗಿ ಹಗೆಗಳ ತೋಫುಗಳ ಅಳವನ್ನು ದಾಟಿತು. ಮುಳುಗಿ ಹೋದ ಎರಡು ನಾವೆಗಳಲ್ಲಿದ್ದವರಲ್ಲಿ ಹಲವರು ಈಸುತ್ತ ಆದನ್ನು ಅನುಸರಿಸಿದರು. ಅವರಲ್ಲಿ ಕ್ಯಾಪ್ಟನ್ ಥಾಮ್‌ಸನ್‌ನೆಂಬವನು ತನ್ನ ತಾಯಿಯ ಪ್ರತಿಮೆಯೊಂದನ್ನು ಎದೆಗೆ ಅವಚಿಕೊಂಡು ಒಂದೇ ಕೈಯಿಂದ ಈಸುತ್ತಿದ್ದಾಗ ಕೈಸೋತು ಪ್ರತಿಮೆಯ ಭಾರದಿಂದ ನೀರೊಳಗೆ

ಮುಳುಗಲಾದನು. ಕೊನೆಗೆ ದೇಹದ ಮೋಹದಿಂದ ಮಾತೆಯ ಮಮತೆಯನ್ನು ಮರೆತು ಪ್ರತಿಮೆಯನ್ನು ಜಲದೇವತೆಗರ್ಪಿಸಿ ಈಸಿ ಪಾರಾಗಿ ನಾವೆಗೆ ಮುಟ್ಟಿದನು.

ನಾವೆಯು ಬಹು ಕಷ್ಟದಿಂದ ಮುಂದೆ ಸಾಗಿತು. ಹಗೆಗಳು ದಂಡೆಗುಂಟ ಅದನ್ನು ಬೆನ್ನಟ್ಟಿದ್ದರು. ಸಾಯಂಕಾಲವಾಯಿತು; ಸೂರ್ಯಾಸ್ತವಾಯಿತು; ಕತ್ತಲೆ ಕವಿಯಿತು. ನಾವೆಯಲ್ಲಿ ಕುಳಿತವರಿಗೂ ಒಬ್ಬರಿಗೊಬ್ಬರು ಕಾಣಿಸದಂತಾದರು. ದಂಡೆಯ ಮೇಲಿದ್ದ ಹಗೆಗಳ ಸದ್ದಡಗಿತು. ನಾವೆಯೊಳಗಿನವರು ತಾವಿನ್ನು ಸುರಕ್ಷಿತವಾಗಿ ಮುಂದೆ ಸಾಗಬಹುದೆಂದು ತಿಳಿದಿದ್ದರು. ಮರುದಿನ ಬೆಳಗಾಯಿತು. ಮತ್ತೆ ಹಗೆಗಳು ಬೆನ್ನಟ್ಟಿಬಂದರು. ಆಗ ಕ್ಯಾಪ್ಟನ್ ಥಾಮ್‌ಸನ್, ಮೇಜರ್ ವಿಬರ್ಟ, ಲೆಫ್ಟಿನೆಂಟ್ ಡೆಲಾಫೋಸ್ ಎಂಬ ಮೂವರು ಸೇನಾಧಿಕಾರಿಗಳೂ ೧೧ ಜನ ಯುರೋಪಿಯನ್ ಸೈನಿಕರೂ ಜೀವದ ಹಂಗುದೊರೆದು, ನಾವೆಯಿಂದ ಇಳಿದು ದಂಡೆಗೆ ಬಂದು ಯುದ್ಧವನ್ನು ಆರಂಭಿಸಿಸಿರು. ನದಿಯ ಪ್ರವಾಹದಲ್ಲಿ ನಾವೆ ತೇಲಿಹೋಗುತ್ತಿರುವಂತೆ ಹಗೆಗಳ ಪ್ರವಾಹದಲ್ಲಿ ಈ ಹದಿನಾಲ್ಕು ಜನರು ತೇಲಿಹೋಗುತ್ತ ನದಿಯ ಮರಳಿನಲ್ಲಿ ೩ ಮೈಲು ಮುಂದೆ ಸಾಗಿದರು; ಒಬ್ಬೊಬ್ಬರಾಗಿ ಹತ್ತು ಜನರು ರಣಭೂಮಿಯಲ್ಲಿ ಮಡಿದರು. ಮಿಕ್ಕ ನಾಲ್ವರು ಹಗೆಗಳ ಕಣ್ಣುತಪ್ಪಿಸಿ ನದಿಯಲ್ಲಿ ದುಮ್ಮಿಕ್ಕಿ ಈಸುತ್ತ ಮುಂದೆ ಸಾಗಿದರು. ಈಗೆರಡು ದಿನಗಳಿಂದಲೂ ಅವರಿಗೆ ಗಂಗಾಜಲದ ಹೊರತು ಬೇರೆ ಅನ್ನಪಾನಗಳು ದೊರೆದಿರಲಿಲ್ಲ; ಹಗಲಿರುಳು ಹಗೆಗಳೊಡನೆ ಕಾದಾಡಿ ದಣಿದು ನಿಸ್ಸತ್ವರಾಗಿದ್ದರು. ಇಂತಹ ಸ್ಥಿತಿಯಲ್ಲಿ ಅವರು ಹೆಚ್ಚು ಹೊತ್ತು ಈಸುವುದು ಸಾಧ್ಯವಿರಲಿಲ್ಲ. ಆದುದರಿಂದ ಅವರು ದಂಡೆಯನ್ನು ಸೇರಿ ಕುತ್ತಿಗೆಯ ವರೆಗೆ ನೀರು ಬರುವಂತೆ ದೇಹವನ್ನು ನೀರಲ್ಲಿ ಮುಳುಗಿಸಿ ವಿಶ್ರಾಂತಿಗಾಗಿ ಕುಳಿತಿದ್ದರು. ಅಷ್ಟರಲ್ಲಿ ದಂಡೆಯ ಮೇಲೆ ಜನರ ಗದ್ದಲವು ಕೇಳಿಸಿತು. ಕೂಡಲೆ ಅವರು ಮತ್ತೆ ಗಾಬರಿಯಾಗಿ ನಡುನೀರಿಗೆ ದುಮ್ಮಿಕ್ಕಿದರು. ದಂಡೆಯ ಮೇಲಿದ್ದವರು "ಸಾಹೇಬರೇ, ಹೆದರಬೇಡಿರಿ. ನಾವು ನಿಮ್ಮ ಶತ್ರುಗಳಲ್ಲ; ಮಿತ್ರರು. ದಂಡೆಗೆ ಬನ್ನಿರಿ. ನಿಮ್ಮನ್ನು ಸುರಕ್ಷಿತವಾದ ಸ್ಥಳಕ್ಕೆ ಒಯ್ದು ಮುಟ್ಟಿಸುವೆವು." ಎಂದು ಕೂಗುತ್ತಿದ್ದರು. ಹಿಂದೆ ಹಲವು ಸಾರೆ ಮೋಸಹೊಂದಿದ ಥಾಮ್‌ಸನ್

ಮೊದಲಾದ ನಾಲ್ವರಿಗೆ ಈ ಮಾತಿನಲ್ಲಿ ನಂಬುಗೆ ತೋರಲಿಲ್ಲ. ಕೊನೆಗೆ ಬಹುಪರಿಯಿಂದ ಹೇಳಿದ ತರುವಾಯ ಅವರು ಸಾವಕಾಶವಾಗಿ ದಂಡೆಗೆ ಬಂದರು. ಅವರೆಲ್ಲರು ಒಹುತರ ಬತ್ತಲೆಯಾಗಿದ್ದರು ; ಅವರ ಪಾದಗಳು ಬೆಂದುಹೋಗಿದ್ದುವು ; ಮೈಮೇಲೆ ಅಲ್ಲಲ್ಲಿಗೆ ಅಂಗೈಯುಗಲದ ಗುಳ್ಳೆಗಳಿದ್ದಿದ್ದುವು. ದಂಡೆಯು ಮೇಲಿದ್ದವರು ನದಿಯೊಳಗಿನವರನ್ನು ಕೈಹಿಡಿದು ಮೇಲೆ ಎತ್ತಿಕೊಂಡು, ತಮ್ಮ ತಲೆಯು ಮೇಲಿನ ಮುಂಡಾಸಗಳಿಂದ ಅವರ ಮರ್ಯಾದೆಯನ್ನು ಮರೆಮಾಡಿದರು. ಅವರು ಅಯೋಧ್ಯಾಪ್ರಾಂತದಲ್ಲಿ ಪ್ರಸಿದ್ಧ ಜಮೀನುದಾರನಾದ ದಿಗ್ವಿಜಯಸಿಂಹನ ಪ್ರಜೆಗಳಾಗಿದ ರು. ಮರುದಿನ ಅವರೆಲ್ಲರೂ ದಿಗ್ವಿಜಯಸಿಂಹನ ಅರಮನೆಗೆ ಹೋದರು. ಅಲ್ಲಿ ಆದರೋಪಚಾರಗಳನ್ನು ಹೊಂದಿ ಸೇನಾಪತಿ ಹ್ಯಾವಲಾಕ್ ಸಾಹೇಬನೊಡನೆ ಮರಳಿ ಕಾನಪುರಕ್ಕೆ ಬಂದರು. ಕೊನೆಗೆ ಅವರ ಧೈರ್ಯ ಸಾಹಸಗಳಿಗೆ ಭಗವಂತನು ತಕ್ಕ ಪ್ರತಿಫಲವನ್ನು ದಯಪಾಲಿಸಿದನು.

ಥಾಮ್‌ಸನ್ ಮೊದಲಾದ ೧೪ ಜನರು ನಾವೆಯಿಂದ ಇಳಿದು ಹೋದ ಬಳಿಕ ಅದು ಹಗುರಾಗಿ ಮುಂದೆ ಸಾಗಿತು. ಆಗ ಒಳಗಿನವರಿಗೆ ಸ್ವಲ್ಪ ಸಮಾಧಾನವಾಯಿತು; ಆದರೆ ಮುಂದೆ ಒಂದೇತಾಸಿನಲ್ಲಿ ಆ ಸಮಾಧಾನವು ಬಹುದುಃಖಕ್ಕೆ ಕಾರಣವಾಯಿತು. ಸಶಸ್ತ್ರ ಸೈನಿಕರಿಂದ ತುಂಬಿದ ಎರಡು ನಾವೆಗಳು ಅವರ ಬೆನ್ನಟ್ಟಿ ಬಂದುವು. ಕಡುತರದಕಾಳಗವಾಯಿತು. ಮೂರು ದಿನಗಳಿಂದಲೂ ಕೇವಲ ಗಂಗಾಜಲದ ಬಲದಿಂದಲೇ ಜೀವಧಾರಣೆ ಮಾಡಿಕೊಂಡಿದ್ದು ಹಗಲಿರುಳು ಹಗೆಗಳೊಡನೆ ಕಾದಾಡುತ್ತಿದ್ದ ಆ ಬ್ರಿಟಿಷ ಸೈನಿಕರು ಹೆಚ್ಚು ಕಾಲ ಹಗೆಗಳನ್ನು ಎದುರಿಸಲಾಗಲಿಲ್ಲ. ಮುಮೂರ್ಷುದಶೆಗೆ ಬಂದಿದ್ದ ಅವರ ಕೈ ಸೋತಿತು. ಸೈನಿಕರೂ ಹೆಂಗುಸರೂ ಕೂಡಿ ಲ೦ ಜನರನ್ನು ಹಗೆಗಳು ಸೆರೆಹಿಡಿದರು ; ಅವರೆಲ್ಲರನ್ನು ಎಂಟು ಹತ್ತು ಬಂಡಿಗಳ ಮೇಲೆ ಹೇರಿಕೊಂಡು ಕಾನಪುರಕ್ಕೆ ಹೊರಟರು. ಬಹುಜನ ಪದಾತಿದಳದವರೂ ಅಶ್ವಾರೋಹಿಗಳೂ ಅವರನ್ನು ಸುತ್ತುಗಟ್ಟಿ ನಡೆದಿದ್ದರು.

ಸಾಯಂಕಾಲವಾಗುತ್ತ ಬಂದಿತು. ಉಗ್ರವಾದ ಸೂರ್ಯನಾರಾಯಣನು ಶಾಂತನಾಗುತ್ತಲಿದ್ದನು. ಹೂಬಿಸಿಲಿನಿಂದ ಪ್ರಕೃತಿದೇವಿಯು ನಗುತ್ತಿರುವಂತೆ ತೋರಿತು. ಕಲಕತ್ತೆಯಿಂದ ಪೇಶಾವರಕ್ಕೆ ಹೋಗಿರುವ ಪ್ರಸಿದ್ಧ

ವಾದ ರಾಜಮಾರ್ಗದಲ್ಲಿ ಬಂಡಿಗಳು ಸಾವಕಾಶ ನಡೆದಿದ್ದುವು. ರಾಜ ಮಾರ್ಗಕ್ಕೆ ಹೊಂದಿದ ಹಳ್ಳಿಗಳಿಂದ ಬಹುಜನರು ಗುಂಪುಗೂಡಿ ಇವರನ್ನು ನೋಡುವುದಕ್ಕೆ ಬಂದಿದ್ದರು. ಮುಂದೆ ಪದಾತಿದಳದವರು, ಅವರ ಹಿಂದೆ ಬಂಡಿಗಳು, ಅವುಗಳ ಹಿಂದೆ ಅಶ್ವಾರೋಹಿಗಳು ಹೀಗೆ ಸಾಗಿದ್ದರು. ಎಲ್ಲರ ಹಿಂದೆ ಒಬ್ಬ ಅಶ್ವಾರೋಹಿಯು ತನ್ನ ಕುದುರೆಯನ್ನು ಸಾವಕಾಶವಾಗಿ ಡೆಯಿಸಿದ್ದನು. ಆತನ ದೃಷ್ಟಿಯು ಹಳ್ಳಿಗಳಿಂದ ಬಂದ ಜನರ ವಿಶೇಷವಾಗಿ ಹೆಂಗುಸರ ಗುಂಪಿನೊಳಗಿನ ಒಬ್ಬೊಬ್ಬರನ್ನೂ ನೋಡುತ್ತಿದ್ದಂತೆ ತೋರಿತು. ಬಳಿಕ ಕಣ್ಣು ಮೂಗುಗಳ ಬಳಿಯಲ್ಲಿ ಜಾಳಿಗೆಯಿರುವ ಘೋಷೆಯ ಬಟ್ಟೆ ಯಲ್ಲಿ ಮುಳುಗಿ ಹೋಗಿ ರಾಜಮಾರ್ಗದ ಅಂಚಿನಲ್ಲಿದ್ದ ಸಾಲುಮರಗಳ ನೆಳಲಿನಲ್ಲಿ ನಿಂತಿರುವ ಒಂದು ವ್ಯಕ್ತಿಯನ್ನು ಆತನು ನೋಡಿದನು. ಅವುದೋ ಒಂದು ಆಂತರಿಕ ಪ್ರೇರಣೆಯಿಂದ ಆತನು ತನ್ನ ಕುದುರೆಯನ್ನು ಆ ವ್ಯಕ್ತಿಗೆ ಸಮೀಪವಾಗಿ ಬಿಟ್ಟನು. ಕುದುರೆಯು ತನಗೆ ಸಮೀಪಿಸಿದಾಗ ಆ ವ್ಯಕ್ತಿಯು ಬತ್ತಿ ಹೋದ ಕಿರುದನಿಯಲ್ಲಿ "ಅಲ್ಲೀಖಾನ, ಸಾವಕಾಶವಾಗಿ ನಡೆ" ಎಂದಿತು. ಅಲ್ಲಿಖಾನನು ದನಿಯನ್ನು ಗುರುತಿಸಿದನು. ಆತನ ಕುದುರೆ ಸಾವಕಾಶವಾಗಿ ಸಾಗಿತು. ಆ ವ್ಯಕ್ತಿಯೂ ಅದನ್ನು ಅನುಸರಿತು. ರಾತ್ರಿಯಾಗಿ ಕತ್ತಲೆ ಕವಿಯಿತು. ಹಿಂದಣವರು ಹಿಂದೆ ಉಳಿದರು. ಮುಂದಣವರು ಮುಂದೆ ಸಾಗಿ ಹೋದರು. ಅಲ್ಲೀಖಾನನು ಒಂದು ಗಿಡದ ಕೆಳಗೆ ಹೋಗಿ ಕುದುರೆ ಯಿಂದಿಳಿದು ಅದರ ಬೆನ್ನಹೊದಿಕೆಯನ್ನು ತೆಗೆದು ನೆಲದ ಮೇಲೆ ಹಾಸಿ ದನು. ರೋಷನೆಯು ಘೋಷೆಯ ಬಟ್ಟೆಯನ್ನು ತೆಗೆದು ಬಳಿಯಲ್ಲಿಟ್ಟು ಕೊಂಡು ಕುಳಿತಳು.

"ರೋಷನ್, ಅಂದು ನಾನು ತಿಳುಹಿದುದನ್ನೆಲ್ಲ ನಿಮ್ಮ ತಂದೆಗೆ ಹೇಳ ಲಿಲ್ಲವೇನು ?"

"ಎಲ್ಲವನ್ನೂ ಹೇಳಿದೆನು. ತಂದೆಯು ಮರುಮಾತಾಡದೆ ನಿಟ್ಟುಸಿರು ಬಿಟ್ಟು ಮುಖ ತಗ್ಗಿಸಿದನು. ಬೇರೆ ಯಾವ ಉಪಾಯವೂ ತೋರದುದರಿಂದ ಆತನು ದೇವರಮೇಲೆ ಭಾರಹಾಕಿ ಸುಮ್ಮನಾದನೆಂದು ನಾನು ತರ್ಕಿಸಿದೆನು."

"ರೋಷನ್, ನೀನು ಈ ವೇಷದಲ್ಲಿ ಇಲ್ಲಿಗೆ ಬಂದುದು ಹೇಗೆ ?"

"ಸತೀ ಚೌರಾದಲ್ಲಿ ಪಾತಕಿಗಳು ಕೊಲೆಗೆ ಆರಂಭಿಸಿದಾಗ ನನ್ನ

ತಂದೆಯು ಗುಂಡುತಾಗಿ ನದಿಯಲ್ಲಿ ಉರುಳಿದನು. ಆತನ ಶವವು ತೇಲಿ ಹೋಗುವುದನ್ನು ಕಂಡು ನಾನೂ ನದಿಯಲ್ಲಿ ದುಮ್ಮಿಕ್ಕಿದೆನು. ಗಂಗಾ ಜಲಕ್ಕೆ ನನ್ನಲ್ಲಿ ಕರುಣೆಯುಂಟಾಗಿ ನನ್ನನ್ನು ತೇಲಿಸುತ್ತ ಮೂರು ಮೈಲು ಕೆಳಗೆ ಒಯ್ದು ಒಂದು ಗಿಡಗಳ ಜಿಡುಪಿನಲ್ಲಿ ದಂಡೆಗೆ ಹಚ್ಚಿತು. ಆಗ ನನ್ನ ತೆಳುವಾದ ರೇಶಿಮೆಯ ಬಟ್ಟೆಯೆಲ್ಲ ತೊಯ್ದು ಮೈಗೆ ಅಂಟಿಕೊಂಡುದರಿಂದ ಎದ್ದು ನಿಲ್ಲಲು ನಾಚಿಕೆಯಾಗುತ್ತಿತ್ತು. ದೈವಯೋಗದಿಂದ ಮುಹಮ್ಮದೀಯ ತರುಣಿಯೊಬ್ಬಳು ದೇಹಶುದ್ಧಿಗಾಗಿ ನದಿಗೆ ಬಂದವಳು ನನ್ನನ್ನು ಆ ಅವಸ್ಥೆಯಲ್ಲಿ ಕಂಡು ಕಳವಳಗೊಂಡಳು. ಆದರೆ ತನ್ನ ಪತಿಯ ತಾರುಣ್ಯ ವನ್ನೂ ನನ್ನ ಅತುಲವಾದ ರೂಪರಾಶಿಯನ್ನೂ ನೆನೆದು ನನ್ನನ್ನು ತನ್ನ ಮನೆಗೆ ಕರೆದೊಯ್ಯಲು ಧೈರ್ಯಗೊಳ್ಳಲಿಲ್ಲವೆಂಬುದನ್ನು ಆಕೆಯ ಮಾತಿ ನಿಂದ ತಿಳಿದುಕೊಂಡೆನು. ನಾರೀ ಹೃದಯವು ಅತ್ಯಂತ ಕೋಮಲವಾಗಿ ದ್ದರೂ ಈ ವಿಷಯದಲ್ಲಿ ಅದು ತುಂಬ ಸ್ವಾರ್ಥಮಯವಾದುದು. ಆಕೆ ಮನೆಗೆ ಹೋಗಿ ನನಗೊಂದು ಘೋಷೆಯ ಬಟ್ಟೆಯನ್ನೂ ಮೂರು ದಿನಗಳ ವರೆಗೆ ಸಾಕಾಗುವಷ್ಟು ರೊಟ್ಟಿ ಬೆಣ್ಣೆಗಳನ್ನೂ ತಂದುಕೊಟ್ಟಳು.''

"ರೋಷನ್, ದೇವರು ದೊಡ್ಡವನು. ನಾನು ಕೊಡಬೇಕಾದ ಘೋಷೆಯ ಬಟ್ಟೆಯನ್ನು ನನ್ನ ಸಹೋದರಿಯೊಬ್ಬಳು ನಿನಗೆ ಕೊಟ್ಟಳು. ಲಕನೌವಿನಲ್ಲಿ ನನ್ನ ಮನೆಯಿದೆ. ನಾವು ಅಲ್ಲಿಗೆ ಹೋಗಿ ಸುಖವಾಗಿರೋಣ. ಘೋಷೆಯಲ್ಲಿದ್ದ ನಿನ್ನನ್ನು ಇನ್ನಾರೂ ಗುರುತಿಸಲಾರರು.''

ಪ್ರಣಯ ಪಾಶಬದ್ಧೆಯಾದ ರೋಷನೆಯು ಅಲ್ಲೀಖಾನನ ಮಾತನ್ನು ಒಪ್ಪಿಕೊಂಡಳು.

ಇತ್ತ ಬಂಡಿಗಳು ಕಾನಪುರಕ್ಕೆ ಮುಟ್ಟಿದುವು. ದಂಗೆಗಾರರ ನಾಯ ಕರು ಹೆಂಗುಸರು ಹುಡುಗರು ಇವರನ್ನು ಹಿಂದೆ ಹೇಳಿದ ಬೀಬೀ ಗೃಹಕ್ಕೆ ಕಳುಹಿ ಸೆರೆಯಲ್ಲಿಟ್ಟರು. ಗಂಡುಸರನ್ನೆಲ್ಲ ಗುಂಡುಹೊಡೆದು ಕೊಂದು ಬಿಟ್ಟರು. ಬೀಬೀ ಗೃಹದಲ್ಲಿದ್ದ ಹೆಂಗುಸರು ಹುಡುಗರಿಗೆ ಗೋದಿಯ ರೊಟ್ಟಿ ಬೇಯಿಸಿದ ಬೇಳೆ ಕಾಯಿಪಲ್ಲೆ ಹಾಲುಗಳನ್ನು ಕೊಡುತ್ತಿದ್ದರು. ಹುಸೇನೀ ಬೇಗಮ್ ಎಂಬ ಮುಹಮ್ಮದೀಯ ವೇಶ್ಯೆಯು ಆ ಸೆರೆಮನೆಯ ಮೇಲ್ವಿಚಾರಕಳಾಗಿ ನಿಯಮಿಸಲ್ಪಟ್ಟಳು.

ಇಂದು ಜುಲೈತಿಂಗಳ ಮೊದಲನೆಯ ತಾರೀಖು. ಬ್ರಹ್ಮಾವರ್ತದಲ್ಲಿ ಅತುಲ ಆನಂದೋತ್ಸವಗಳು ನಡೆದಿವೆ. ಶ್ರೀಮಂತ ನಾನಾಸಾಹೇಬ ಪೇಶವೆಯ ಪಟ್ಟಾಭಿಷೇಕ ಮಹೋತ್ಸವವು ಬಹು ವಿಜೃಂಭಣೆಯಿಂದ ನಡೆಯಿತು. ನೂರಾರು ತೋಫುಗಳ ಗರ್ಜನೆಯಿಂದ ಪೇಶವೆಯ ಸಿಂಹಾಸನಾರೋಹಣ ಸಮಾರಂಭದವಾರ್ತೆಯು ದಿಗಂತದಲ್ಲಿಯೂ ಮಾರ್ದನಿಗೊಂಡಿತು. ಸೂರ್ಯಾಸ್ತವಾಯಿತು. ನಗರದಲ್ಲೆಲ್ಲ ಸಾಲು ದೀಪಗಳು ಉರಿದು ಇರುಳೇ ಹಗಲೆನ್ನುವಂತೆ ಬೆಳಗುತ್ತಿದ್ದುವು. ಶ್ರೀಮಂತನು ತನ್ನ ಅರಮನೆಯ ಬಳಿಯಲ್ಲಿದ್ದ ಶಿವಾಲಯದ ಹೊಸ್ತಿಲಿನ ಮೇಲೆ ನಿಂತಿದ್ದನು. ಅಕಸ್ಮಾತ್ "ಜಯ ಶಂಕರ!" ಎನ್ನುತ್ತ ಭವ್ಯಾಕಾರದ ಸಂನ್ಯಾಸಿಯೊಬ್ಬನು ಅಲ್ಲಿಗೆ ಬಂದನು. ಶ್ರೀಮಂತನು ತನ್ನ ಗುರುವರ ಆನಂದಮಿಶ್ರನನ್ನು ಗುರುತಿಸಿ ಸಾಷ್ಟಾಂಗ ನಮಸ್ಕಾರಮಾಡಿದನು. ಆತನು ಎಂದಿನಂತೆ ಆಶೀರ್ವಾದ ಮಾಡಲಿಲ್ಲ. ನಿಟ್ಟುಸಿರು ಬಿಟ್ಟು ನೆಲದಮೇಲೆ ಕುಳಿತುಬಿಟ್ಟನು.

"ಗುರು ದೇವಾ" ಶ್ರೀಮಂತನು ನಡಗುವ ದನಿಯಲ್ಲಿ ಕರೆದನು.

"ಎಲ್ಲವನ್ನೂ ಕೇಳಿ ತಿಳಿದೆನು. ಭಗವಾನ್ ತ್ರ್ಯಂಬಕೇಶ್ವರನು ಸಂತಪ್ತನಾಗಿದ್ದಾನೆ. ಪುಣ್ಯಸಲಿಲೆ ಗಂಗಾಮಾತೆಯು ಸ್ತ್ರೀಯರ, ಬಾಲಕರ ಮತ್ತು ನಿಶ್ಶಸ್ತ್ರರಾಗಿ ಶರಣು ಬಂದವರ ರಕ್ತದಿಂದ ದೂಷಿತಳಾದಳು. ವಜೀರ ಅಜೀಮುಲ್ಲಾಖಾನನೂ ಸೇನಾಪತಿ ಜ್ವಾಲಾಪ್ರಸಾದನೂ ಸ್ತ್ರೀಹತ್ಯೆ ಶಿಶುಹತ್ಯೆಗಳಿಂದ ಅಪವಿತ್ರರಾಗಿ ಶರಣಾಗತರ ರಕ್ತದಿಂದ ದೂಷಿತವಾದ ಕೈಗಳಿಂದ ನಿನ್ನ ತಲೆಯ ಮೇಲೆ ಪೇಶವೆಯ ಕಿರೀಟವನ್ನು ಎತ್ತಿ ಇಟ್ಟಿರುವರು. ಇದೆಷ್ಟುದಿನ ಸ್ಥಿರವಾಗಿ ನಿಲ್ಲಬಹುದೋ ಹೇಳಲಾರೆ. ಸತ್ಯವನ್ನು ರಕ್ಷಿಸಲಿಲ್ಲ. ಧರ್ಮವನ್ನು ಕಾಪಾಡಲಿಲ್ಲ. ನಿಷ್ಕಾಮಿಯಾಗಿ ಕೆಲಸಮಾಡಲಿಲ್ಲ."

ಈ ಮಾತು ನಡೆದಿರುವಾಗಲೇ ಪರಿಚಾರಕನೊಬ್ಬನು ಬಂದು, ಅಶ್ವಾರೋಹಿಯೊಬ್ಬನು ಕಾನಪುರದಿಂದ ಧಾವಿಸಿ ಬಂದಿರುವನೆಂದೂ ಅತಿಶಯ ಮಹತ್ವದ ವಾರ್ತೆಯನ್ನು ತಂದಿರುವನೆಂದೂ ಅರಿಕೆ ಮಾಡಿಕೊಂಡನು. ನಾನಾಸಾಹೇಬನು ನಿರ್ವಿಣ್ಣನಾದನು.

---

# ಆರನೆಯ ಪರಿಚ್ಛೇದ

## ಝಾಂಸಿಯಲ್ಲಿ ಕ್ರಾಂತಿ

"After the mutinous troops had quitted Jhansi, she certainly took possession of her country.."

—*Martin*.



ದಿಲ್ಲಿ ಲಕನೌ ಕಾನಪುರಗಳ ತರುವಾಯ ಉತ್ತರ ಹಿಂದುಸ್ತಾನದಲ್ಲಿ ರಾಜ್ಯಕ್ರಾಂತಿಯಾದುದು ಝಾಂಸಿಯಲ್ಲಿ. ಝಾಂಸಿಯ ಸಂಗ್ರಾಮದ ಅಧಿದೇವತೆ ಮಹಾರಾಣಿ ಲಕ್ಷ್ಮೀಬಾಯಿ. ಇತಿಹಾಸ ಪ್ರಸಿದ್ಧವಾದ ಥರ್ಮಾಪಿಲಿಯ ಕಾಳೆಗದೊಡನೆ ಲಿಯೋನಿಡಸನ ಹೆಸರೂ ಹಳದೀ ಘಟ್ಟದ ಘೋರ ಸಂಗ್ರಾಮದೊಡನೆ ಮಹಾರಾಣಾ ಪ್ರತಾಪಸಿಂಹನ ಹೆಸರೂ ಮುಂದೆ ಬರುವಂತೆ ಝಾಂಸಿಯ ಸಂಗ್ರಾಮವೆಂದೊಡನೆ ಮಹಾರಾಣಿ ಲಕ್ಷ್ಮೀಬಾಯಿಯ ಮೂರ್ತಿ ಕಣ್ಣಿಗೆ ಕಟ್ಟುವುದು. ಆದರೆ ಪ್ರಾರಂಭದಲ್ಲಿ ಝಾಂಸಿಯಲ್ಲಾದ ರಾಜ್ಯಕ್ರಾಂತಿಗೂ ಆಕೆಗೂ ಏನೂ ಸಂಬಂಧವಿರಲಿಲ್ಲ.

ಮಹಾರಾಣಿ ಲಕ್ಷ್ಮೀಬಾಯಿಯು ಬಾಲ್ಯದಲ್ಲಿ ಬ್ರಹ್ಮಾವರ್ತದಲ್ಲಿ ಬಾಜೀರಾಯನ ದತ್ತಪುತ್ರರಾದ ನಾನಾಸಾಹೇಬ, ಬಾಳಾಸಾಹೇಬ, ರಾವಸಾಹೇಬ ಮತ್ತು ತಾತ್ಯಾಟೋಪಿ ಇವರೊಡನೆ ಆಡಿ ಬೆಳೆದವಳು. ಬಾಜೀರಾಯನ ಪ್ರಯತ್ನದಿಂದಲೇ, ಬಡ ಬ್ರಾಹ್ಮಣನ ಮಗಳಾದ ಮನೂಬಾಯಿಯು, ಝಾಂಸಿಯ ಮಹಾರಾಜ ಗಂಗಾಧರರಾಯನನ್ನು ಮದುವೆಯಾಗಿ ಮಹಾರಾಣಿ ಲಕ್ಷ್ಮೀಬಾಯಿಯಾದಳು. ವಿಚಿತ್ರವಾದ ದೈವಲೀಲೆಗೆ ಒಳಗಾದ ಮಹಾರಾಣಿಯು ಮಗನನ್ನು ಕಳೆದುಕೊಂಡ ಕೆಲವು ತಿಂಗಳುಗಳಲ್ಲಿಯೇ ಪತಿಯನ್ನೂ ಕಳೆದುಕೊಂಡಳು. ಮಹಾರಾಜ ಗಂಗಾಧರರಾಯನು ಮರಣಸಮಯದಲ್ಲಿ ದಾಮೋದರರಾಯನೆಂಬ ಒಬ್ಬ ಹುಡುಗ

ನನ್ನು ದತ್ತಸ್ವೀಕಾರ ಮಾಡಿಕೊಂಡಿದ್ದನು. ಲಾರ್ಡ್ ಡಾಲಹೌಸಿಯು ಆ ದತ್ತ ಸ್ವೀಕಾರವನ್ನು ಸಮ್ಮತಿಸದೆ ಮಹಾರಾಣಿಗೆ ೫ ಸಾವಿರ ರೂಪಾಯಿಗಳ ಮಾಸಾಶನ ಕೊಡಬೇಕೆಂದು ಗೊತ್ತುಪಡಿಸಿದನು. ಝಾಂಸಿಯ ಸಂಸ್ಥಾನವು ಪೇಶವೆಯರ ಅಧೀನದಲ್ಲಿದ್ದಿತು. ಪೇಶ್ವಾಯಿಯ ಅಳಿಗಾಲದ ತರುವಾಯ ಪೇಶವೆಯ ಸ್ಥಾನಾಪನ್ನರಾದ ಬ್ರಿಟಿಷರು ಝಾಂಸಿಯ ಅಧಿಕಾರದ ಹೊರೆಯನ್ನು ಹೊತ್ತರು. ಈ ಅಧಿಕಾರದ ಬಲದಿಂದಲೇ ಲಾರ್ಡ್ ಡಾಲಹೌಸಿಯು ಅದು ಆಧೀನ ಸಂಸ್ಥಾನವೆಂದು ಮಹಾರಾಜ ಗಂಗಾಧರರಾಯನ ದತ್ತಸ್ವೀಕಾರವನ್ನು ನಿರಾಕರಿಸಿದನು.*

ಮಹಾರಾಣಿಯು ಒಬ್ಬ ಸಾಮಾನ್ಯ ಬ್ರಾಹ್ಮಣವಿಧವೆಯಂತೆ ಸಕಲ ದುಃಖಗಳನ್ನೂ ನುಂಗಿಕೊಂಡು ಸಂನ್ಯಾಸವೃತ್ತಿಯಿಂದ ಕಾಲ ಕಳೆಯ ತೊಡಗಿದಳು. ಮಹಾರಾಣಿ ಲಕ್ಷ್ಮೀಬಾಯಿಯ ಮುಂದಿನ ಮನೋಭಾವನೆಯ ವಿಷಯವಾಗಿ ಸುಪ್ರಸಿದ್ಧ ಇತಿಹಾಸಕಾರ 'ಕೇ' ಸಾಹೇಬನ ವಾಕ್ಯಗಳನ್ನೇ ಇಲ್ಲಿ ಅವತರಿಸುವುದು ಒಳ್ಳೆಯದು. "ಮಹಾರಾಣಿಯ ಮನಸ್ಸಿನಲ್ಲಿ ಒಂದೊಂದೇ ಕಾರಣಗಳಿಗಾಗಿ ಬ್ರಿಟಿಷರ ವಿಷಯವಾಗಿ ಕ್ರಮವಾಗಿ ಹೆಚ್ಚು ಹೆಚ್ಚು ವಿರಕ್ತಿಯುಂಟಾಗತೊಡಗಿತು. ಇವುಗಳಲ್ಲಿ ಝಾಂಸಿಯಲ್ಲಿ ಯುರೋಪಿಯನ್ ಅಧಿಕಾರಿಗಳು ನಡೆಯಿಸಿದ ಗೋವಧೆಯೂ ಒಂದು ಮುಖ್ಯ ಕಾರಣ. ರಾಣಿಯು ಗೋವಧೆಯನ್ನು ನಿಲ್ಲಿಸಬೇಕೆಂದು ಅವರನ್ನು ವಿನಯದಿಂದ ಕೇಳಿಕೊಂಡಳು. ಝಾಂಸಿಯ ನಿವಾಸಿಗಳಲ್ಲಿ ಸನ್ಮಾನ್ಯರಾದ ಹಲವರೂ ಗೋವಧೆ ಮಾಡಕೂಡದೆಂದು ಬೇಡಿಕೊಂಡರು. ಆದರೆ ಅಧಿಕಾರಿಗಳು ಯಾರಿಗೂ ಸಮರ್ಪಕವಾದ ಉತ್ತರ ಕೊಡಲೇ ಇಲ್ಲ. ಝಾಂಸಿಯ ರಾಜ್ಯಾಪಹಾರದಲ್ಲಿಯೂ ಮಹಾರಾಣಿಯ ವಿಷಯದಲ್ಲಿಯೂ ಅಧಿಕಾರಿಗಳು ತೋರಿಸಿದ ಆಚರಣೆ ಸ್ವಲ್ಪ ದೂರದೃಷ್ಟಿಯಿಂದ ವಿಚಾರಮಾಡಿದರೆ ಅವರಿಗೇ ಆಶ್ಚರ್ಯವೆನಿಸುವಂತಹದಿದ್ದಿತು. ಪುರುಷೋಚಿತವಾದ ಧೈರ್ಯ ಶೌರ್ಯಾದಿ ಸದ್ಗುಣಗಳಂತೆಯೇ ಸ್ತ್ರೀಜನೋಚಿತವಾದ ಪ್ರತಿಹಿಂಸಾ ಪ್ರವೃತ್ತಿಯೂ ಮಹಾರಾಣಿಯಲ್ಲಿ ಇದ್ದಿತು; ಆಕೆಯು ಅನುಕೂಲವಾದ ಕಾಲವನ್ನು ನಿರೀಕ್ಷಿಸುತ್ತಲೇ

* "ಮಹಾರಾಣಿ ಲಕ್ಷ್ಮೀಬಾಯಿ" ಗ್ರಂಥದಲ್ಲಿ ಹೆಚ್ಚಿನ ವಿವರಣೆಯನ್ನು ಓದಬಹುದು.

ಇದ್ದಳು. ಇಂತಹದೊಂದು ಸಮಯವು ಬಂದೇಬರುವುದೆಂದು ಆಕೆ ನಿಶ್ಚಿತ ವಾಗಿ ನಂಬಿದ್ದಳು. ೧೮೫೭ನೆಯ ಇಸವಿಯಲ್ಲಿ ಆಕೆಗೆ ಇಪ್ಪತ್ತೆರಡು ವರುಷಗಳಾಗಿದ್ದುವು. ಅತ್ಯಂತ ತೀಕ್ಷ್ಣಬುದ್ಧಿಯುಳ್ಳ ಆಕೆಯು ಅಷ್ಟೇ ವಾಕ್ಚತುರಳೂ ಯುಕ್ತಿವಂತಳೂ ಆಗಿದ್ದಳು. ಗವರ್ನರ್ ಕಮಿಷನರ್ ಮುಂತಾದ ಬ್ರಿಟಿಷ ಅಧಿಕಾರಿಗಳ ಮುಂದೆ ನಿಂತು ಮಾತಾಡಿ ತನ್ನ ಮನೋಭಿ ಪ್ರಾಯವನ್ನು ಸುಸ್ಪಷ್ಟವಾಗಿ ತಿಳಿಸುವಷ್ಟು ಬುದ್ಧಿ ಕೌಶಲ್ಯವು ಆಕೆಯಲ್ಲಿ ದ್ದಿತು. ಇಂತಹರೊಡನೆ ಮಾತಾಡುವಾಗ ಆಕೆಯು ತನ್ನ ಅಂತರಂಗದೊಳ ಗಿನ ಕೋಪವನ್ನಾಗಲಿ ದ್ವೇಷಬುದ್ಧಿಯನ್ನಾಗಲಿ ಎಷ್ಟು ಮಾತ್ರವೂ ತೋರ ಗೊಡುತ್ತಿದ್ದಿಲ್ಲ; ಆಕೆಯ ವಿರುದ್ಧವಾಗಿ ಹಲವು ದುರ್ವಾರ್ತೆಗಳನ್ನು ನಮ್ಮವರು ಆಡಿಕೊಳ್ಳುತ್ತಿದ್ದರು. ಮಹಾರಾಣಿಯು ಈಗ ಇನ್ನೊಬ್ಬನ ತಂತ್ರದಿಂದ ನಡೆಯುವ ಚಿಕ್ಕ ಮಗುವಾಗಿರುವಳು; ಆಕೆಯ ಆಚಾರವು ಪರಿಶುದ್ಧವಾಗಿಲ್ಲ; ಎಂದು ಹೇಳುವುದುಂಟು. ಆದರೆ ಆಕೆಯು ಅಂತಹ ಅಪ್ರಬುದ್ಧಳಲ್ಲವೆಂಬುದನ್ನು ಆಕೆಯ ಮಾತುಕತೆಗಳಿಂದ ಸಹಜವಾಗಿ ತಿಳಿದುಕೊಳ್ಳಬಹುದಾಗಿದ್ದಿತು. ಆಕೆಯ ಅಪರಿಶುದ್ಧವಾದ ಆಚಾರದ ವಿಷಯವು ಕೇವಲ ಕಾಲ್ಪನಿಕವಾದುದಲ್ಲದೆ ಆದರಲ್ಲಿ ತಥ್ಯಾಂಶವಿಲ್ಲ " ‡

೧೮೫೭ನೆಯ ಇಸವಿಯಲ್ಲಿ ಝಾಂಸಿಯಲ್ಲಿದ್ದ ಬ್ರಿಟಿಷ ಸೇನಾನಿವಾಸ ದಲ್ಲಿ ಒಂದು ಪದಾತಿದಳವೂ ಅಶ್ವಬಲದ ಒಂದು ವಿಭಾಗವೂ ಕೆಲವು ಜನ ಗೋಲಂದಾಜರೂ ತೋಫುಗಳೂ ಇದ್ದುವು. ದೇಶೀಯ ಸೈನಿಕ ಸೇನಾಧಿ ಕಾರಿಗಳಲ್ಲಿ ಮಹಮ್ಮದೀಯರೇ ಹೆಚ್ಚಾಗಿದ್ದರು. ಕ್ಯಾಪ್ಟನ್ ಡನ್‌ಲಾಪನು ಈ ಎಲ್ಲ ಸೈನ್ಯಕ್ಕೆ ಮುಖ್ಯಾಧಿಕಾರಿ. ಜೂನ್ ತಿಂಗಳ ೫ನೆಯ ತಾರೀಖಿನ ದಿನ ರಾತ್ರಿ ಅಕಸ್ಮಾತ್ ಯುರೋಪಿಯನರ ಎರಡು ಬಂಗಲೆಗಳಿಗೆ ಬೆಂಕಿ ಹೊತ್ತಿತು. ಮರುದಿನವೇ ಎಲ್ಲ ಸೈನಿಕರು ಪ್ರತ್ಯಕ್ಷ ದಂಗೆಯನ್ನು ಆರಂಭಿ ಸಿದರು. ಆರನೆಯ ತಾರೀಖಿನ ದಿನ ಮುಂಜಾನೆ ಎಲ್ಲ ದೇಶೀಯ ಸೈನಿಕರೂ ಸೇನಾಧಿಕಾರಿಗಳೂ ಡ್ರಿಲ್ಲಿನ ಬಯಲಿನಲ್ಲಿ ನೆರೆದರು. ವರ್ಷಾಕಾಲದಲ್ಲಿ ಮೋಡ ಮುಸುಕಿದ ಆಕಾಶವು ಪ್ರಶಾಂತವಾಗಿದ್ದು ಪರಕ್ಷಣದಲ್ಲಿ ಮಹಾ ವೃಷ್ಟಿಗೆ ಆರಂಭವಾಗುವಂತೆ ಡ್ರಿಲ್ಲಿನ ಬಯಲಿನಲ್ಲಿ ಶಾಂತವಾಗಿರುವ ಸೈನ್ಯವು

‡ Kayee's Sepoy War Vol, III P. 562-563

ರಿಸಾಲದಾರ ಕಾಲಾಖಾನನ ಒಂದೇ ಒಂದು ಶಬ್ದದಿಂದ ಪ್ರಕ್ಷುಬ್ಧವಾಗಿ ಸಂಗ್ರಾಮವನ್ನು ಆರಂಭಿಸಿತು. ಎಲ್ಲ ಯುರೋಪಿಯನ್ ಸೇನಾಧಿಕಾರಿಗಳು ಹತರಾದರು. ಕ್ಯಾಪ್ಟನ್ ಡನ್‌ಲಾಪ ಸಾಹೇಬನು ಗುಂಡು ತಾಗಿ ಗಾಯವಡೆದರೂ ಕುದುರೆಯನ್ನೇರಿ ಓಡುತ್ತಹೋಗಿ ದುರ್ಗವನ್ನು ಸೇರಿಕೊಂಡನು. ದಂಗೆಗಾರರು ಜೈಲುಖಾನೆಯನ್ನು ತೆರೆದು ಅಪರಾಧಿಗಳನ್ನು ಬಿಟ್ಟುಬಿಟ್ಟರು. ಕೊನೆಗೆ ದಂಗೆಗಾರರೂ ಜೈಲಿನೊಳಗಿನ ಅಪರಾಧಿಗಳೂ ಸೇರಿ ದುರ್ಗವನ್ನು ಮುತ್ತಿದರು. ಒಳಗೆ ಸಿಕ್ಕಿದ್ದ ಯುರೋಪಿಯನರು ಓಡಿ ಪಾರಾಗುವುದು ಸಾಧ್ಯವಾಗಲಿಲ್ಲ. ಕೊನೆಗೆ ಅವರು ಮಹಾರಾಣಿ ಲಕ್ಷ್ಮೀಬಾಯಿಯ ಮರೆಹೊಕ್ಕರು.

ಎಲ್ಲ ಹೆಂಗುಸರೂ ಹುಡುಗರೂ ಮಹಾರಾಣಿಯ ಅರಮನೆಯಲ್ಲಿ ಆಶ್ರಯಹೊಂದಿದರು. ಮಹಾರಾಣಿಯು ಬಂಡುಗಾರರಿಗೆ ತಿಳಿಯದಂತೆ ದುರ್ಗದಲ್ಲಿರುವ ಯುರೋಪಿಯನರಿಗೆ ಪ್ರತಿದಿನ ಎಲ್ಲ ಸಾಮಗ್ರಿಗಳನ್ನು ಒದಗಿಸಿಕೊಡುತ್ತಿದ್ದಳು. ಕ್ಯಾಪ್ಟನ್ ಸ್ಕೀನ್ ಸಾಹೇಬನು ೪೦–೫೦ ಜನ ಯುರೋಪಿಯನ್ ಮತ್ತು ಯುರೇಶಿಯನ್ ಜನರನ್ನು ಕಲೆಹಾಕಿ ಅವರೆಲ್ಲರಿಗೂ ಯುದ್ಧ ಸಾಮಗ್ರಿಗಳನ್ನು ಒದಗಿಸಿಕೊಟ್ಟು ದಂಗೆಗಾರರ ಹಾವಳಿಯನ್ನು ತಡೆಯುವ ಸಿದ್ಧತೆ ಮಾಡಿಕೊಂಡನು. ಆದರೆ ಜೂನ್ ತಿಂಗಳ ೮ನೆಯ ತಾರೀಖಿನ ದಿನ ಪ್ರಾತಃಕಾಲ ೮ ಗಂಟೆಗೆ ದಂಗೆಗಾರರಲ್ಲಿ ಪ್ರಮುಖರೆನಿಸಿಕೊಂಡವರೊಡನೆ ಮಾತಾಡಿ, ನಿಮ್ಮನ್ನು ಸುರಕ್ಷಿತವಾಗಿ ಸಾಗರಕ್ಕೆ ಮುಟ್ಟಿಸುವೆವೆಂದು ವಚನ ಪಡೆದು, ಯುರೋಪಿಯನ್ನರೆಲ್ಲರೂ ಶಸ್ತ್ರಗಳನ್ನು ಕೆಳಗಿಟ್ಟು ಶರಣುಹೋದರು. ಎಲ್ಲರೂ ದುರ್ಗದ ಮಹಾದ್ವಾರವನ್ನು ದಾಟಿ ಹೊರಗೆ ಬಂದೊಡನೆ ವಚನಕೊಟ್ಟ ಮುಂದಾಳುಗಳನ್ನು ಕೇಳುವವರೇ ಇಲ್ಲದಂತಾಗಿ ದಂಗೆಗಾರರು ನಿಶ್ಯಸ್ತ್ರರಾದ ಎಲ್ಲ ಯುರೋಪಿಯನ್ನರನ್ನು ಸೆರೆಹಿಡಿದು ಕ್ಯಾಪ್ಟನ್ ಸ್ಕೀನ್ ಸಾಹೇಬನನ್ನು ಮೊದಲುಗೊಂಡು ಎಲ್ಲರನ್ನೂ ಕೊಂದುಬಿಟ್ಟರು.

ರಾತ್ರಿ ಬಹಳವಾಗಿದೆ. ಝಾಂಸಿಯ ನಗರವೆಲ್ಲ ನಿಶ್ಯಬ್ದವಾಗಿದೆ. ದಂಗೆಗಾರರು ಸೆರೆ ಕುಡಿದು ದುಂದಾಗಿ ಮನಬಂದಲ್ಲಿ ಹೋಗಿಬಿಟ್ಟಿದ್ದರು. ಮಹಾರಾಣಿ ಲಕ್ಷ್ಮೀಬಾಯಿಯು ಅರಮನೆಯಲ್ಲಿ ಪರಿಚಾರಿಕೆಯರಾದ

ಕಾಶಿ ಮುಂದರೆಯರೊಡನೆ ಅಂದಿನ ವಿಶ್ವಾಸಘಾತ, ಕೊಲೆ, ಮುಂದೆ ಒದಗಬಹುದಾದ ಅನರ್ಥ ಪರಂಪರೆ ಇವನ್ನು ಕುರಿತು ಬಹುದುಃಖದಿಂದ ಮಾತಾಡುತ್ತ ಕುಳಿತಿದ್ದಳು. ದಾಸಿಯೊಬ್ಬಳು ಬಂದು "ತಮ್ಮನ್ನು ಕಾಣುವುದಕ್ಕೆ ಯಾರೋ ಬಂದಿರುವರು" ಎಂದಳು. ಮಹಾರಾಣಿಯು ಆ ಕಾಲದ ಪರಿಸ್ಥಿತಿಯನ್ನು ಆಲೋಚಿಸಿ ಮಧ್ಯರಾತ್ರಿಯಾಗಿದ್ದರೂ ಅಡ್ಡಿಯಿಲ್ಲವೆಂದು ಅವರನ್ನು ತನ್ನೆಡೆಗೆ ಕರೆಯಿಸಿದಳು.

ಮಹಾರಾಣಿಯ ಅಪ್ಪಣೆಯಾದೊಡನೆ ಮೂವರು ಒಳಗೆ ಬಂದರು. ಅವರಲ್ಲಿ ಇಬ್ಬರು ಗಂಡುಸರು; ಒಬ್ಬಳು ಹೆಂಗುಸು. ಮೂವರೂ ಹಿಂದುಗಳಂತೆ ಉಡುಗೆತೊಡುಗೆಗಳನ್ನು ಧರಿಸಿದ್ದರು. ಆದರೆ ಅನಭ್ಯಾಸದ ಮೂಲಕ ಅವೆಲ್ಲ ತುಂಬ ಅಸ್ತವ್ಯಸ್ತವಾಗಿದ್ದುವು. ಮುಖಚರ್ಯೆಯನ್ನು ನೋಡಿದರಂತೂ ಅವರು ಯುರೋಪಿಯನರೆಂಬುದು ಸಹಜವಾಗಿ ತಿಳಿಯುವಂತಿದ್ದಿತು. ಮಹಾರಾಣಿಯು ನಿಜವಾದ ಸಂಗತಿಯನ್ನು ತರ್ಕಿಸಿದಳು; ಮತ್ತು ಅವರಿಗೆ ಆವಶ್ಯಕ ಸಹಾಯವನ್ನು ಒದಗಿಸುವೆನೆಂದು ಅಭಯವನ್ನಿತ್ತಳು. ಮಹಾರಾಣಿಯ ಆಶ್ರಯದಲ್ಲಿ ಅವರು ಕೆಲವುದಿನ ಉಳಿದ ಬಳಿಕ ಆಕೆಯ ಸಹಾಯದಿಂದ ಸುರಕ್ಷಿತವಾಗಿ ಆಗ್ರಾಕ್ಕೆ ಮುಟ್ಟಿದರು. ಈ ಮೂವರಲ್ಲೊಬ್ಬನಾದ ಮಾರ್ಟಿನ್ ಸಾಹೇಬನು ಮಹಾರಾಣಿಯ ದತ್ತಪುತ್ರ ದಾಮೋದರರಾಯನಿಗೆ ಬರೆದ ಪತ್ರವನ್ನು ಓದಿದರೆ ಅನೇಕರು ಇತಿಹಾಸ ಲೇಖಕರು ಝಾಂಸಿಯ ದಂಗೆಯ ಮತ್ತು ಅಲ್ಲಿಯ ಯುರೋಪಿಯನರ ಕೊಲೆಯ ವಿಷಯವಾಗಿ ಮಹಾರಾಣಿಯ ಮೇಲೆ ಹೊರಿಸಿದ ಆರೋಪಗಳು ತೀರ ನಿರಾಧಾರವಾಗಿರುವುವೆಂಬುದು ಸಿದ್ಧವಾಗುವುದು. *

ಮರುದಿನ ಪ್ರಾತಃಕಾಲದಲ್ಲಿ ಕೊಲೆಯ ಪಾತಕದಿಂದ ಉನ್ಮತ್ತರಾದ

---

* Your poor mother was very unjustly and cruelly dealt with, and no one knows her true case as I do The poor thing took no part whatever in the massacre of the European residents of Jhansi in June 1857. On the contrary she supplied them with food for 2 days after they had gone into the Fort............and finally they were all massacred by our own t roops.

—*Martin.*

ದಂಗೆಗಾರರು ಮಹಾರಾಣಿಯ ಅರಮನೆಗೆ ಬಂದು, "ನಾವು ದಿಲ್ಲಿಗೆ ಹೊರಡುವೆವು; ನೀವು ನಮಗೆ ಮೂರು ಲಕ್ಷ ರೂ. ಗಳನ್ನು ಕೊಡಬೇಕು. ಮತ್ತು ಝಾಂಸಿಯ ಸಂಸ್ಥಾನದ ಮಹಾರಾಣಿಯಾಗಿ ರಾಜ್ಯಭಾರವನ್ನು ಕೈಕೊಳ್ಳಬೇಕು. ಇಲ್ಲವಾದರೆ ಸಂಸ್ಥಾನವನ್ನು ನಿಮ್ಮ ವಿರೋಧಿ ಸದಾಶಿವ ನಾರಾಯಣನಿಗೆ ಒಪ್ಪಿಸುವೆವು." ಎಂದು ಬಹು ನಿಷ್ಠುರವಾಗಿ ನುಡಿದರು. ಮಹಾರಾಣಿಯು ನಿರುಪಾಯದಿಂದ ತನ್ನ ಅಲಂಕಾರ ಮುಂತಾದವುಗಳನ್ನು ಕೂಡಿಸಿ ಸುಮಾರು ೧ ಲಕ್ಷ ಬೆಲೆಬಾಳುವ ಸಾಮಗ್ರಿಗಳನ್ನು ಅವರಿಗೆ ಒಪ್ಪಿಸಿದಳು. ದಂಗೆಗಾರರು "ಖುಲಕ ಖುದಾಕಾ ಮುಲುಖ ಬಾದಷಾಹಾಕಾ ಅಮ್ಮಲ ರಾಣೀ ಲಕ್ಷ್ಮೀಬಾಯೀಕಾ" ಎಂದು ಸಾರುತ್ತ ದಿಲ್ಲಿಗೆ ಹೊರಟರು.

ದಂಗೆಗಾರರು ಹೊರಟು ಹೋದಬಳಿಕ ಝಾಂಸಿಯಲ್ಲಿ ಅರಾಜಕವಾಗಿ ಅತ್ಯಾಚಾರಗಳಿಗೆ ಎಡೆಯುಂಟಾಗಬಾರದೆಂದು ಮಹಾರಾಣಿಯು ರಾಜ್ಯ ಸೂತ್ರಗಳನ್ನು ಕೈಕೊಂಡಳು. ಅಲ್ಲಿಯ ಎಲ್ಲ ಯುರೋಪಿಯನ್ ಅಧಿಕಾರಿಗಳನ್ನು ದಂಗೆಗಾರರು ಕೊಲೆಮಾಡಿದ್ದರು; ಆದುದರಿಂದ ಅವರ ಶಿರಸ್ತೇದಾರರನ್ನು ಕರೆಯಿಸಿ ಅವರ ಅನುಮತಿಯಿಂದ ಕಾರ್ಯಕಲಾಪಗಳನ್ನು ನಡೆಯಿಸತೊಡಗಿದಳು. ಮತ್ತು ಈ ಎಲ್ಲ ಸಂಗತಿಗಳನ್ನು ಜಬಲಪುರದ ಕಮಿಷನರ್ ಕರ್ನಲ್ ಎರ್ಸಕಿನನಿಗೂ ಆಗ್ರಾದ ಚೀಫ್ ಕಮಿಷನರ್ ಕರ್ನಲ್ ಫ್ರೇಜರನಿಗೂ ತಿಳುಹಿದಳು. ಈ ಪತ್ರಗಳನ್ನು ಹಿಂದೆ ಹೇಳಿದ ಮಾರ್ಟಿನ್ ಸಾಹೇಬನು ತಾನೇ ತನ್ನ ಕೈಗಳಿಂದ ಒಯ್ದು ಕೊಟ್ಟಿರುವೆನೆಂದು ಹೇಳಿರುವನು.‡ ಆದರೆ ಅದರ ಪರಿಣಾಮವೇನಾಯಿತು? ಮಹಾರಾಣಿಯು ಪೇಶವೆ ಮುಂತಾದ ಬಂಡುಗಾರರ ತಂಡಕ್ಕೆ ಸೇರಿದವಳೆಂಬ ಅಪವಾದ ತಪ್ಪಲಿಲ್ಲ; ಝಾಂಸಿಯು ಉಳಿಯಲಿಲ್ಲ; ಇದಕ್ಕೇ ವಿಚಿತ್ರ ದೈವಗತಿಯೆನ್ನುವುದು.

---

‡ She sent Khareetas to Col. Erskine at Jabbalpore, to Col. Fraser Chief Commissioner of Agra which I handed over to him with my own hand, to hear her explanation, but No! Jhansi had been a byword and was condemned unheard

—*Martin.*



# ಮೂರನೆಯ ಖಂಡ

## ಪುನಃ ಶಾಂತಿ

" Show these rascally mutineers that with God's help Englishmen will still be masters of India "

—*Lord Robarts.*

# ಮೊದಲನೆಯ ಪರಿಚ್ಛೇದ

## ಬಾಳಾಸಾಹೇಬನ ಪರಾಜಯ

" Maude dismounted, laid the gun....and the first shot, striking the poor beast in the rear, came out at the chest, and the Nana's general's fighting was suddenly all done. "

—*Forrest*,

ಸನ್ ೧೮೫೭ ನೆಯ ಇಸವಿಯ ಮೇ ತಿಂಗಳ ಮಧ್ಯದಲ್ಲಿ ಬಂಡಾಯವು ವ್ಯಕ್ತ ಸ್ವರೂಪವನ್ನು ತಾಳಿತು. ಕೂಡಲೆ ಲಾರ್ಡ್ ಕ್ಯಾನಿಂಗ್ ಸಾಹೇಬನು ಎಚ್ಚತ್ತು ಮುಂದಿನ ಸಿದ್ಧತೆಯನ್ನು ಆರಂಭಿಸಿದನು. ರಂಗೂನ್ ಮುಂಬಯಿ ಮದ್ರಾಸಗಳಿಂದ ಸಾಧ್ಯವಾದಷ್ಟು ಸೈನ್ಯವು ಕಲಕತ್ತೆಗೆ ಹೊರಟಿತು. ಇದೇ ಸಮಯಕ್ಕೆ ಇರಾಣದ ಯುದ್ಧವು ಕೊನೆಗಾಣಲು ಅಲ್ಲಿ ತೊಡಗಿದ್ದ ಸೈನ್ಯವೂ ಮುಂಬಯಿಯ ಮಾರ್ಗದಿಂದ ಉತ್ತರ ಹಿಂದುಸ್ಥಾನದ ಬಂಡುಗಾರರ ಪಾರುಪತ್ಯಕ್ಕೆ ಹೊರಡಬೇಕೆಂದೂ ಸಾಧ್ಯವಿದ್ದ ಮಟ್ಟಿಗೆ ದೇಶೀಯ ಸಂಸ್ಥಾನಿಕರ ನೆರವನ್ನು ಪಡೆಯಬೇಕೆಂದೂ ಸಿಂಹಳದ್ವೀಪದಿಂದಲೂ ಮಾರಿಷಸದಿಂದಲೂ ಸೇನಾಸಹಾಯವನ್ನು ಪಡೆಯಬೇಕೆಂದೂ ನಿರ್ಣಯವಾಯಿತು. ಮತ್ತು ಇಂಗ್ಲಂಡದಿಂದಲೂ ಆದಷ್ಟು ಬೇಗನೆ ಸೇನಾಸಹಾಯವು ದೊರೆಯುವಂತೆ ವ್ಯವಸ್ಥೆಯಾಯಿತು.

ಈ ರೀತಿ ಸೈನ್ಯದ ಸಿದ್ಧತೆಯಾದೊಡನೆ ಮೇ ತಿಂಗಳ ಕೊನೆಗೆ ಗವರ್ನರ್ ಜನರಲನ ಕೌನ್ಸಿಲಿನಲ್ಲಿ ಒಂದು ಕಾಯದೆಯನ್ನು ಮಾಡಿ ಇಡೀ ಉತ್ತರ ಹಿಂದುಸ್ಥಾನದಲ್ಲಿ ಸೇನಾಧಿಕಾರಿಗಳಿಗೆ ಆವಶ್ಯಕವೆನಿಸಿದಲ್ಲೆಲ್ಲ ಲಷ್ಕರೀ ಕಾಯದೆಯನ್ನು ಸಾರುವುದಕ್ಕೆ ಅನುಕೂಲ ಮಾಡಿಕೊಟ್ಟರು. ಐದು ಜನ ಯುರೋಪಿಯನ್ ಅಥವಾ ದೇಶೀಯ ಅಧಿಕಾರಿಗಳ ಒಂದು

ಸಮಿತಿಗೆ ಅಪರಾಧಿಗಳೆಂದು ಹೇಳುವ ಜನರ ವಿಚಾರಣೆಗೆ ಅಧಿಕಾರ ದೊರೆಯಿತು. ಅವರ ನಿರ್ಣಯವೇ ಕೊನೆಯದು; ವಿಚಾರಣೆಯ ಕಾಲದಲ್ಲಿ ವಕೀಲರಾಗಲಿ ಅಸೇಸರರೆಂಬ ಪಂಚರಾಗಲಿ ಇರಬೇಕೆಂಬ ನಿರ್ಬಂಧವಿಲ್ಲ. ಇದರಿಂದ ದೇಶೀಯರ ವಿತ್ತಜೀವಿತಗಳು ಯುರೋಪಿಯನ್ ಸೇನಾಧಿಕಾರಿಗಳ ಕೈಯಲ್ಲಿ ಅರ್ಪಿಸಲ್ಪಟ್ಟುವೆಂದು ಹೇಳಲು ಅಡ್ಡಿಯಿಲ್ಲ. ಮಹಾರಾಣಿ ಸರಕಾರದ ವಿರುದ್ಧ ಯುದ್ಧವನ್ನು ಹೂಡಿದ, ಯುದ್ಧ ಮಾಡಲು ಯತ್ನ ಮಾಡುವ ಇಲ್ಲವೆ ಯಾವುದೇ ತೆರದ ಸಂಚಿನಲ್ಲಿ ಸೇರುವ ಜನರಿಗೆ ಮರಣ ದಂಡನೆ ಕಾರಾಗೃಹವಾಸ ಇಲ್ಲವೆ ದೇಶತ್ಯಾಗದ ಶಿಕ್ಷೆ ವಿಧಿಸಲ್ಪಡುವುದೆಂದು ದೇಶದಲ್ಲೆಲ್ಲ ಸಾರಿದರು.

ಸೇನಾಸಿದ್ಧತೆಯನ್ನು ಮಾಡಿಕೊಂಡು ಅದರ ಅನಿಯಂತ್ರಿತ ಅಧಿಕಾರ ಚಾಲನೆಗೆ ಆವಶ್ಯಕವಾದ ಎಲ್ಲ ಸಂಗತಿಗಳಿಗೆ ಕಾಯದೆಯ ಆಧಾರವನ್ನು ರಚಿಸಿಕೊಂಡ ತರುವಾಯ ಬಂಡುಗಾರರ ದಂಡನೆಯ ಕಾರ್ಯವು ಆರಂಭವಾಯಿತು. ಹಿಂದುಸ್ಥಾನದ ಮುಖ್ಯ ಸೇನಾಪತಿಯು ಅಂಬಾಲಾದಲ್ಲಿ ಸೈನ್ಯವನ್ನು ಒಟ್ಟುಗೂಡಿಸಿಕೊಂಡು ದಿಲ್ಲಿಯನ್ನು ವಶಮಾಡಿಕೊಳ್ಳಲು ಹೊರಟನು. ದಿಲ್ಲಿಯು ಬಂಡುಗಾರರ ಮುಖ್ಯಕೇಂದ್ರವಾಗಿದ್ದುದರಿಂದಲೂ ದಂಗೆಗಾರರು ಮೊಗಲ್ ಬಾದಷಾಹಿಯ ಶವಕ್ಕೆ ತುಂಬಿದ ಜೀವಕಳೆಯನ್ನು ನಷ್ಟಗೊಳಿಸುವುದು ಪ್ರತಿಪಕ್ಷದವರ ಪ್ರಥಮ ಕರ್ತವ್ಯವೆನಿಸಿದುದರಿಂದಲೂ ಮೊತ್ತಮೊದಲು ಆ ಕಾರ್ಯವು ಆರಂಭವಾಯಿತು. ಇತ್ತ ಕ್ಯಾನಿಂಗ್ ಸಾಹೇಬನು ಸಾಧ್ಯವಾದಷ್ಟು ಸೈನ್ಯವನ್ನು ಕೂಡಿಸಿ ಕಲಕತ್ತೆಯಿಂದ ಕಾಶಿ ಅಲಹಾಬಾದಗಳ ಮಾರ್ಗವಾಗಿ ಕಾನಪುರ ಲಕನೌಗಳಿಗೆ ಸಹಾಯವನ್ನು ಒದಗಿಸುವ ಪ್ರಯತ್ನ ನಡೆಯಿಸಿದನು. ಬ್ರಿಟಿಷ ಅಧಿಕಾರಿಗಳ ದೃಷ್ಟಿಯಲ್ಲಿ ಕಾಶಿಯು ಅತ್ಯಂತ ಮಹತ್ವದ ಸ್ಥಾನವಾಗಿತ್ತು. ಇದು ಬ್ರಾಹ್ಮಣ ಧರ್ಮದ ಆತ್ಮಸ್ಥಾನವಾಗಿದ್ದುದಲ್ಲದೆ ಬ್ರಿಟಿಷರು ಸ್ವಾಧೀನಪಡಿಸಿಕೊಂಡ ಅನೇಕ ದೇಶೀಯ ರಾಜ್ಯಗಳ ರಾಜಕುಟುಂಬಗಳು ಅಲ್ಲಿ ಹೋಗಿ ವಾಸವಾಗಿದ್ದುವು. ಅಲ್ಲದೆ ಅದು ಕಲಕತ್ತೆ ಅಲಹಾಬಾದಗಳ ನಡುವಿನ ಮಹತ್ವದ ಸ್ಥಳವಾಗಿತ್ತು.

ಮದ್ರಾಸದಿಂದ ಬಂದ ಸೇನಾಪತಿ ನೀಲಸಾಹೇಬನು ಜೂನ್ ತಿಂಗಳ ಮೂರನೆಯ ತಾರೀಖಿಗೆ ಕಾಶಿಗೆ ಬಂದು ಮುಟ್ಟಿದನು. ಮರುದಿನವೇ

ಕಾನಪುರಕ್ಕೆ ಹೊರಡುವ ಸಿದ್ಧತೆಯಲ್ಲಿದ್ದನು. ಆದರೆ ಅಂದೇ ಅಜೀಮಗಡದಲ್ಲಿ ದಂಗೆ ಸಂಭವಿಸಿತು. ಕಾಶಿಯ ಸೇನಾನಿವಾಸದಲ್ಲಿಯೂ ಅಸಮಾಧಾನವು ತಲೆದೋರಿತು. ಬ್ರಿಟಿಷ ಅಧಿಕಾರಿಗಳು ದೇಶೀಯ ಸೈನಿಕರ ಸರ್ವನಾಶದ ಕಾರ್ಯದಲ್ಲಿ ತೊಡಗಿರುವರೆಂದೂ ಒಂದೊಂದೇ ಸೇನಾವಿಭಾಗವು ಕಲಕತ್ತೆಯಿಂದ ಹೊರಟು ದೇಶದಲ್ಲೆಲ್ಲ ವ್ಯಾಪಿಸಿ ದೇಶೀಯ ಸೈನಿಕರನ್ನು ನಿರ್ಮೂಲನಗೊಳಿಸುವುದೆಂದೂ ಸೇನಾನಿವಾಸದಲ್ಲೆಲ್ಲ ಸುದ್ದಿಯೆದ್ದಿತು. ದೇಶೀಯ ಸೈನಿಕರಲ್ಲುಂಟಾದ ಅಸಮಾಧಾನದ ಚಿಹ್ನೆಗಳನ್ನು ಕಂಡು ಬ್ರಿಟಿಷ ಅಧಿಕಾರಿಗಳು ಅವರ ಶಸ್ತ್ರಗಳನ್ನು ಸೆಳೆದುಕೊಂಡು ದಂಡಿನಿಂದ ಹೊರದೂಡುವ ಮತ್ತು ಮುಖ್ಯ ಅಪರಾಧಿಗಳಿಗೆ ಕಡುತರವಾದ ಶಿಕ್ಷೆಯನ್ನು ವಿಧಿಸುವ ಕಾರ್ಯವನ್ನು ಕೈಕೊಂಡುದನ್ನು ಕಂಡು ಈ ಮಾತಿಗೆ ಬೇರೆ ಆಧಾರಗಳು ಬೇಕಾಗಲಿಲ್ಲ. ಹೀಗೆ ಹುಟ್ಟಿದ ಪರಸ್ಪರ ಅವಿಶ್ವಾಸದಿಂದಲೇ ಕಾಶಿಯ ಸೇನಾನಿವಾಸವು ರಣಭೂಮಿಯಾಗಿ ಪರಿಣಮಿಸಿತು. ದೇಶೀಯ ಸೈನಿಕರೆಲ್ಲರೂ ತಿರುಗಿ ಬಿದ್ದರು. ಆದರೆ ಶೀಖ ಸೈನಿಕರು ದಂಗೆಗಾರರನ್ನು ಕೂಡಿರಲಿಲ್ಲ. ಕರ್ನಲ್ ಗಾರ್ಡನ್ ಸಾಹೇಬನಿಗೆ ಗುರಿಯಿಟ್ಟ ತುಬಾಕಿಯ ಗುಂಡಿಗೆ ಶೀಖ ಸೈನಿಕನೊಬ್ಬನು ತನ್ನ ಎದೆಯನ್ನು ಒಡ್ಡಿ ತನ್ನ ಅಧಿಕಾರಿಯನ್ನು ಬದುಕಿಸಿದನು. ಸೇನಾಪತಿಗೆ ತುಬಾಕಿಯ ಗುರಿಯಿಟ್ಟ ಇನ್ನೊಬ್ಬ ಬಂಡುಗಾರ ಸಿಪಾಯಿಯನ್ನು ಇಬ್ಬರು ಶೀಖ ಸೈನಿಕರು ಕಡಿದು ಒಗೆದರು. ನಿಜವಾದ ಸ್ಥಿತಿಯು ಇಂತಿದ್ದರೂ ಅಧಿಕಾರಿಗಳು ಮಾತ್ರ ಶೀಖ ಸೈನಿಕರೂ ದಂಗೆಗಾರರೇ ಎಂಬ ತಪ್ಪು ಭಾವನೆಯಿಂದ ಅವರನ್ನೂ ಶಸ್ತ್ರಗಳನ್ನು ಸೆಳೆದುಕೊಂಡು ಸೈನ್ಯದಿಂದ ಹೊರದೂಡಿದರು.

ಪರಸ್ಪರ ಸಂಶಯಗ್ರಸ್ತರಾಗಿ ಕಾಶಿಯ ಸೇವಾನಿವಾಸದಲ್ಲಿ ದಂಗೆ ಪ್ರಾರಂಭವಾದರೂ ಹಿಂದೆ ಹೇಳಿದಂತೆ ಬ್ರಿಟಿಷರ ಸಂಶಯಕ್ಕೆ ಕಾರಣರಾದ ಬ್ರಾಹ್ಮಣರೇ ಮೊದಲಾದ ನಗರವಾಸಿಗಳೂ ವಿಷಗ್ರಸ್ತರಾಗಿದ್ದ ರಾಜಕುಟುಂಬಗಳೂ ತುಂಬ ಶಾಂತರಾಗಿಯೇ ಇದ್ದರು. ಶೀಖರ ಎರಡನೆಯ ಯುದ್ಧದ ತರುವಾಯ ಬ್ರಿಟಿಷರು ಪಂಜಾಬ ಪ್ರಾಂತವನ್ನು ವಶಮಾಡಿಕೊಂಡ ಬಳಿಕ ಶೀಖರ ಪ್ರಮುಖ ಸರದಾರ ಸುರತಸಿಂಹನನ್ನು ಕಾಶಿಯಲ್ಲಿ ತಂದು ಸೆರೆಯಲ್ಲಿಟ್ಟಿದ್ದರು. ಆ ಸುರತಸಿಂಹನ ಸಹಾಯದಿಂದಲೇ ಶೀಖ

ಸೈನಿಕರ ರಕ್ಷಣೆಯಲ್ಲಿದ್ದ ಕಾಶಿಯ ಧನಾಗಾರವು ಸುರಕ್ಷಿತವಾಯಿತು. ಗೋಕುಲಚಂದನೆಂಬ ರಾಜಪುತ್ರವೀರನು ತನ್ನ ಅರಮನೆಯಲ್ಲಿ ವಿಪದ್ಗ್ರಸ್ತರಾದ ಹಲವರು ಯುರೋಪಿಯನರಿಗೆ ಆಶ್ರಯಕೊಟ್ಟನು.

ಜನತೆಯಲ್ಲಿ ಭೀತಿಯನ್ನು ಹುಟ್ಟಿಸಿ ತಮ್ಮ ದರ್ಪವನ್ನು ಕಾಯ್ದುಕೊಳ್ಳುವುದು ನೀಲ ಸಾಹೇಬನ ಮುಖ್ಯ ವಿಚಾರವಾಗಿದ್ದಿತು. ಆದುದರಿಂದ ಕಾಶಿಯ ನಗರದಲ್ಲಿ ಲಷ್ಕರೀ ಕಾಯಿದೆಯನ್ನು ಸಾರಿದರು. ದಂಗೆಗಾರರೆಂಬ ಸಂಶಯದಿಂದ ಕೈಗೆ ಸಿಕ್ಕಿದವರನ್ನು ಹಿಡಿದು ತಂದು ದೇಹಾಂತ ಶಿಕ್ಷೆಯನ್ನು ವಿಧಿಸುವ ಕ್ರಮವು ಆರಂಭವಾಯಿತು. ಒಂದು ದಿನ ಹತ್ತಿಪ್ಪತ್ತು ಚಿಕ್ಕಬಾಲಕರು ಆಟವಾಡುವಾಗ ನಿಶಾನೆಗಳನ್ನು ಹಿಡಿದು ದಂಗೆಯನ್ನು ಹೂಡುವವರಂತೆ ಆಟವನ್ನು ಹೂಡಿದ್ದರು. ಬ್ರಿಟಿಷರ ವಿರುದ್ಧ ವಿಚಾರ ಮಾಡುತ್ತಿರುವರೆಂಬ ಆರೋಪದಿಂದ ಅವರೆಲ್ಲರನ್ನು ಹಿಡಿದು ತಂದು ಮರಣ ದಂಡನೆಯನ್ನು ವಿಧಿಸಿದರು. ಬಾಲಕರ ವಿಚಾರಣೆಗೆ ನಿಯಮಿಸಲ್ಪಟ್ಟ ಐದು ಜನರ ಸಮಿತಿಯೊಳಗಿನ ಒಬ್ಬ ಸಭಾಸದನು ಆ ಬಾಲಕರನ್ನು ಕಂಡು ದುಃಖಿತನಾಗಿ ಕಣ್ಣೀರು ಸುರಿಸುತ್ತ ಇಂತಹ ಹಸುಗೂಸುಗಳಿಗೆ ಇಂತಹ ಕ್ರೂರ ಶಿಕ್ಷೆಯನ್ನು ವಿಧಿಸಬೇಡಿರೆಂದು ಬೇಡಿಕೊಂಡನು. ಆದರೆ ಮಿಕ್ಕವರು ಅದನ್ನು ಲೆಕ್ಕಿಸಲಿಲ್ಲ. ಬಹುಮತದ ಬಲದಿಂದ ಅವರೆಲ್ಲರಿಗೂ ದೇಹಾಂತಶಿಕ್ಷೆ ವಿಧಿಸಲ್ಪಟ್ಟಿತು. ಇದೊಂದೇ ಸಂಗತಿಯಿಂದ ನೀಲಸಾಹೇಬನ ದರ್ಪಸ್ಥಾಪನೆಯ ಮಾರ್ಗದ ಉಗ್ರಸ್ವರೂಪವನ್ನು ಕಲ್ಪಿಸಿಕೊಳ್ಳಬಹುದು.

ಕಾಶಿಯ ದಂಗೆಯ ವಾರ್ತೆಯು ಜೂನ್ ತಿಂಗಳ ೫ನೆಯ ತಾರೀಖಿಗೆ ಅಲಹಾಬಾದಕ್ಕೆ ಮುಟ್ಟಿತು. ಮರುದಿನವೇ ಅಲ್ಲಿಯ ಎಲ್ಲ ಸೈನಿಕರೂ ತಿರುಗಿಬಿದ್ದು ದಂಗೆಯನ್ನು ಸಾರಿದರು. ಆದರೆ ಕಾಶಿ ಅಲಹಾಬಾದಗಳ ದಂಗೆಗೆ ದಿಲ್ಲಿ ಲಕನೌ ಕಾನಪುರಗಳಂತೆ ಅಂತಸ್ಥ ಹೇತುವೇನೂ ಇರಲಿಲ್ಲ.

ಸೇನಾಪತಿ ನೀಲ ಸಾಹೇಬನು ಜೂನ್ ತಿಂಗಳ ೧೧ನೆಯ ತಾರೀಖಿಗೆ ಅಲಹಾಬಾದಕ್ಕೆ ಮುಟ್ಟಿದನು. ದುರ್ಗವು ಇನ್ನೂ ಬ್ರಿಟಿಷರ ಆಧೀನದಲ್ಲಿರುವುದನ್ನು ಕಂಡು ಆತನಿಗಾದ ಆನಂದವನ್ನು ವರ್ಣಿಸಲಳವಲ್ಲ. ಆತನು ದುರ್ಗವನ್ನು ಭದ್ರಪಡಿಸಿ ದಾರಾಗಂಜದಲ್ಲಿದ್ದ ದಂಗೆಗಾರರನ್ನು ಹೊಡೆದೋಡಿಸಿ ಕಾಶಿಗೂ ಕಾನಪುರಕ್ಕೂ ಹೋಗುವ ಮಾರ್ಗಗಳನ್ನು ತಮ್ಮ

ಆಧೀನದಲ್ಲಿ ಸುರಕ್ಷಿತವಾಗಿರುವಂತೆ ಏರ್ಪಾಡು ಮಾಡಿಕೊಂಡನು. ಅಲಹಾಬಾದದಲ್ಲಿದ್ದ ಎಲ್ಲ ಯುರೋಪಿಯನ್ ಹೆಂಗುಸರನ್ನೂ ಹುಡುಗರನ್ನೂ ನಾವೆಯಿಂದ ಕಲಕತ್ತೆಗೆ ಕಳುಹಿದನು. ಎಲ್ಲೆಡೆಯಲ್ಲಿಯೂ ಲಷ್ಕರೀ ಕಾಯದೆಯನ್ನು ಸಾರಿ ಕೈಗೆ ಸಿಕ್ಕಿದ ಅಪರಾಧಿಗಳೆನ್ನುವವರಿಗೆಲ್ಲ ದೇಹಾಂತ ಶಿಕ್ಷೆ ವಿಧಿಸಲ್ಪಟ್ಟಿತು. ದಂಗೆಗಾರರನ್ನು ನದಿಯನ್ನು ದಾಟಿಸಿದರೆಂಬ ಅಪರಾಧಕ್ಕಾಗಿ ಆರುಜನ ನಾವಾಡಿಗರಿಗೂ ಇನ್ನೊಬ್ಬನ ಬಳಿಯಲ್ಲಿ ಹೊಸ ನಾಣ್ಯಗಳು ದೊರೆಯಲು ಧನಾಗಾರವನ್ನು ಸೂರೆ ಮಾಡಿದವನೆಂಬ ಅಪರಾಧದ ಆರೋಪಣೆಯಿಂದ ಆತನಿಗೂ ದೇಹಾಂತ ಶಿಕ್ಷೆಯನ್ನು ವಿಧಿಸಿದರು. ಯುರೋಪಿಯನ್ ಸೈನಿಕರು ಜನತೆಯ ಜೀವನ ಮರಣಗಳ ಕರ್ತರಾಗಿ ಪ್ರತಿ ಬ್ರಹ್ಮರಂತೆ ತೋರಿದರು. ಅವರು ಆಡಿದ್ದೇ ಆಟವಾಯಿತು. ನೀಲ ಸಾಹೇಬನು ಪ್ರವಾಸ ಮಾಡುತ್ತಿದ್ದಾಗ ಎಡಬಲದ ಹಳ್ಳಿಗಳನ್ನು ಸುಲಿದು ಸೂರೆಮಾಡಿ ಕೊಳ್ಳಿಯಿಟ್ಟು ವಿಧ್ವಂಸಮಾಡುತ್ತ ನಡೆದಿದ್ದನು. ರಾಜಮಾರ್ಗದ ಎಡಬಲದ ಸಾಲುಗಿಡಗಳಿಗೆ ಶವಗಳು ನೇತಾಡುವುದನ್ನು ಕಂಡು ಜನರು ಭಯಭ್ರಾಂತರಾದರು. ಆತನ ಹಿಂದೆ ಪ್ರವಾಸಮಾಡಿದ ಬ್ರಿಟಿಷ ಸೇನಾಧಿಕಾರಿಯೊಬ್ಬನು ದಾರಿಯಲ್ಲಿ ತನ್ನ ಸೈನಿಕರು ವಿಶ್ರಾಂತಿಗಾಗಿ ನಿಲ್ಲುವುದಕ್ಕೆಂದು ಒಂದು ಮಾವಿನ ತೋಪಿನಲ್ಲಿ ಸೇರಿದಾಗ ಅಲ್ಲಿಯ ಒಂದೊಂದು ಗಿಡಕ್ಕೂ ಹತ್ತೆಂಟು ಹೆಣಗಳು ನೇತಾಡುವುದನ್ನು ಕಂಡು ವಿಸ್ಮಿತನಾದನಂತೆ. ನೀಲಸಾಹೇಬನ ರಾಕ್ಷಸೋಪಮವಾದ ಸಂಹಾರ ಕಾರ್ಯವನ್ನು ಬಂಗಾಲದ ಲೆಫ್ಟಿನೆಂಟ್ ಗವರ್ನರ್ ಗ್ರ್ಯಾಂಟ್ ಸಾಹೇಬನು ಬಲವಾಗಿ ನಿಷೇಧಿಸಿದನು. ಕಲಕತ್ತೆಯ ಹಿಂದೂ ಪೆಟ್ರಿಯಾಟ್ ಪತ್ರಿಕೆಯ ಸಂಪಾದಕ ಹರಿಶ್ಚಂದ್ರ ಮುಖ್ಯೋಪಾಧ್ಯಾಯನೂ ಇದನ್ನು ಕಟುಶಬ್ದಗಳಿಂದ ಟೀಕಿಸಿದನು.

ನೀಲಸಾಹೇಬನು ಕಾನಪುರದಲ್ಲಿ ನಿರಾಶ್ರಿತರಾಗಿ ಸೆರೆ ಸಿಕ್ಕಿದವರಿಗೆ ಸಹಾಯವೊದಗಿಸಲು ಕಲಕತ್ತೆಯಿಂದ ಹೊರಟಿದ್ದನು. ಆದರೆ ದಾರಿಯಲ್ಲಿ ಪ್ರತಿಹಿಂಸಾಪ್ರವೃತ್ತಿಯಿಂದ ತನ್ನ ಮುಖ್ಯಕಾರ್ಯವನ್ನು ಮರೆತು ಬಿಡಲು ಸಕಾಲದಲ್ಲಿ ಕಾನಪುರಕ್ಕೆ ಸಹಾಯವೊದಗದೆ ಅಲ್ಲಿ ಅನರ್ಥ ಪರಂಪರೆಗಳುಂಟಾಗಲು ಕಾರಣವಾಯಿತೆಂದು ಹೇಳುವುದುಂಟು. ಆತನು ಜೂನ್ ತಿಂಗಳ ೩೦ನೆಯ ತಾರೀಖಿನ ದಿನ ಒಂದು ಸೇನಾ ವಿಭಾಗವನ್ನು ಅಲಹಾ

ಬಾದದಿಂದ ಕರ್ನಲ್ ರೇನಾಡ್ ಸಾಹೇಬನೊಡನೆ ಕಾನಪುರಕ್ಕೆ ಕಳುಹಿದನು. ಮತ್ತು ಹ್ಯಾವಲಾಕ್ ಸಾಹೇಬನು ಇನ್ನೊಂದು ಸೇನಾವಿಭಾಗದೊಡನೆ ಅಂದೇ ಅಲಹಾಬಾದಕ್ಕೆ ಬಂದು ಮುಟ್ಟಿದನು.

ಹ್ಯಾವಲಾಕ್ ಸಾಹೇಬನು ಜುಲೈತಿಂಗಳ ೭ನೆಯ ತಾರೀಖಿನ ದಿನ ಒಂದುಸಾವಿರ ಯುರೋಪಿಯನರು ೧೩೦ ಜನ ಸೀಖರು ೫ ತೋಫುಗಳು ಇವನ್ನು ಕೂಡಿಕೊಂಡು ಕಾನಪುರಕ್ಕೆ ಹೊರಟನು. ನೀಲಸಾಹೇಬನು ಕಲಕತ್ತೆಯ ಸೈನ್ಯದ ನಿರೀಕ್ಷಣೆಯಲ್ಲಿ ಅಲಹಾಬಾದದಲ್ಲಿಯೇಉಳಿದಿದ್ದನು.

ಬ್ರಹ್ಮಾವರ್ತದಲ್ಲಿ ಪಟ್ಟಾಭಿಷೇಕ ಮಾಡಿಸಿಕೊಂಡು ಆನಂದಮಗ್ನನಾದ ನೂತನ ಪೇಶವೆ ನಾನಾಸಾಹೇಬನು ಬ್ರಿಟಿಷಸೈನ್ಯವು ಏರಿಬರುವ ವಾರ್ತೆಯನ್ನು ಕೇಳಿ ಚಿಂತಾತುರನಾಗಿ ಕಾನಪುರಕ್ಕೆ ಬಂದನು. ಅವಸರದಿಂದ ಯುದ್ಧದ ಸಿದ್ಧತೆ ನಡೆಯಿತು. ಸೇನಾಪತಿ ಜ್ವಾಲಾಪ್ರಸಾದನು ೩೫೦೦ ಜನ ಸೈನಿಕರನ್ನೂ ೧೨ ತೋಫುಗಳನ್ನೂ ತೆಗೆದುಕೊಂಡು ಅಲಹಾಬಾದದ ಮಾರ್ಗದಲ್ಲಿ ಹೊರಟು ಫತ್ತೇಪುರಕ್ಕೆ ಬಂದು ಮುಟ್ಟಿದನು. ಮತ್ತು ಅಲಹಾಬಾದದಿಂದ ಹೊರಟ ರೇನಾಡ್ ಸಾಹೇಬನು ಅಲ್ಪಬಲದೊಡನೆ ಬರುವನೆಂದೂ ಆತನ ಸೇನೆಯನ್ನು ಕ್ಷಣಾರ್ಧದಲ್ಲಿ ಸೋಲಿಸಿ ನುಚ್ಚುನೂರಾಗಿ ಕಡಿದು ಬಿಸುಡುವೆನೆಂದೂ ತಿಳಿದುಕೊಂಡಿದ್ದನು. ಹ್ಯಾವಲಾಕ್ ಸಾಹೇಬನ ಬಲವು ಅತಿತ್ವರೆಯಿಂದ ಧಾವಿಸಿ ಬಂದು ರೇನಾಡನ ಬಲವನ್ನು ಕೂಡಿಕೊಂಡು ಜ್ವಾಲಾಪ್ರಸಾದನಿಗೆ ಎದುರಾಗಿ ಬಂದಿತು. ಅತ್ತಬ್ರಿಟಿಷರು ಕೂಡ ಫತ್ತೇಪುರದಲ್ಲಿ ತೀರ ಸ್ವಲ್ಪ ಜನ ದಂಗೆಗಾರರಿರುವರೆಂದು ತಿಳಿದುಕೊಂಡಿದ್ದರು. ಬ್ರಿಟಿಷ ಸೈನಿಕರು ಬಹುದೂರ ಮಾರ್ಗಕ್ರಮಣಮಾಡಿ ದಣಿದು ಬಂದು ಮಧ್ಯಾಹ್ನ ೧ ಗಂಟೆಯ ವೇಳೆಯಲ್ಲಿ ಅಡುಗೆ ಊಟಗಳಲ್ಲಿ ತೊಡಗಿದ್ದರು. ಅಕಸ್ಮಾತ್ ಅವರ ಶಿಬಿರದಲ್ಲಿ ಹಗೆಗಳ ತೋಫಿನ ಗುಂಡುಗಳು ಬೀಳ ತೊಡಗಿದುವು. ಸೈನಿಕರು ಉಣ್ಣುವುದಕ್ಕೆ ಎತ್ತಿದ ತುತ್ತನ್ನು ನೆಲಕ್ಕೆ ಬಿಸುಟು ರಣರಂಗಕ್ಕೆಹೊರಟರು. ರೇನಾಡ್ ಸಾಹೇಬನು ಅಲ್ಪಬಲದೊಡನೆ ಬಂದಿರುವನೆಂದು ಬಗೆದಿದ್ದ ಪೇಶವೆಯ ಸೈನಿಕರು ಪ್ರಬಲವಾದ ಸಂಯುಕ್ತ ಸೇನೆಯನ್ನು ಕಂಡು ಎದೆಗುಂದಿದರು. ಮೊದಲೇ ಅವಲಕ್ಷಣವಾಯಿತು. ಎರಡು ತಾಸು ಕಡುತರದ ಕಾಳೆಗವಾಯಿತು. ಬ್ರಿಟಿಷ

ಸೈನ್ಯದ ಹೊಸ ತುಬಾಕಿಯಿಂದ ಗುಂಡುಗಳು ೩೦೦ ಗಜ ದೂರ ಹಾರುತ್ತಿದ್ದುವು. ಪೇಶವೆಯ ಸೈನ್ಯದ ತುಬಾಕಿಗಳು ಹಳೆಯ ತೆರದವಾದುದರಿಂದ ಅವುಗಳಿಂದ ಗುಂಡುಗಳು ಅಷ್ಟುದೂರ ಹಾರುತ್ತಿರಲಿಲ್ಲ. ಕಂಪನಿಯ ಸೈನ್ಯದ ತೋಫುಗಳೂ ಮೇಲ್ತೆರದವಿದ್ದುವು. ಪೇಶವೆಯ ಸೈನ್ಯದಲ್ಲಿ ೧೫೦ ಜನರು ಮಡಿದರು. ಸೇನಾಪತಿ ಟೀಕಾಸಿಂಹನು ಪರಾಜಿತನಾದೆನೆಂದು ತಿಳಿದು ಹಿಂದಿರುಗಿ ಹೊರಟನು.

ಟೀಕಾಸಿಂಹನು ಪರಾಜಿತನಾದ ವಾರ್ತೆ ಕಾನಪುರಕ್ಕೆ ತಲುಪಿತು. ಕೂಡಲೆ ಬಾಳಾಸಾಹೇಬ ಪೇಶವೆಯು ತಾನೇ ಸೇನಾನಾಯಕನಾಗಿ ಕಾನಪುರದಿಂದ ಎರಡು ಮೈಲು ದೂರದಲ್ಲಿದ್ದ ಆಸಂದವೆಂಬಲ್ಲಿಗೆ ಬಂದು ಬೀಡು ಬಿಟ್ಟನು. ವಿಜಯಶ್ರೀಯಿಂದ ಉತ್ಸಾಹಿತನಾದ ಹ್ಯಾವಲಾಕ್ ಸಾಹೇಬನೂ ಆತನ ಸೈನ್ಯವೂ ತುಂಬ ಉತ್ಸಾಹದಿಂದ ಮುಂದುವರಿದು ಬಂದುವು. ಜುಲೈ ತಿಂಗಳ ೧೫ನೆಯ ತಾರೀಖಿನ ದಿನ ಪ್ರಾತಃಕಾಲಕ್ಕೆ ಮತ್ತೆ ಯುದ್ಧಾರಂಭವಾಯಿತು. ಬ್ರಿಟಿಷರ ತೋಫು ತುಬಾಕಿಗಳ ಹೊಡೆತದಿಂದ ಪೇಶವೆಯ ಸೈನ್ಯವು ಕ್ಷತ ವಿಕ್ಷತವಾಗಿ ಹೋಯಿತು. ಅವರು ಅಲ್ಲಿಯೂ ಹಿಮ್ಮೆಟ್ಟಿದರು.

ಬಾಳಾ ಸಾಹೇಬನು ತನ್ನ ಸೇನೆಯೊಡನೆ ಪಾಂಡುನದಿಯ ತೀರಕ್ಕೆ ಬಂದು ನೌಕೆಗಳ ಸೇತುವೆಯನ್ನು ದಾಟಿಕೊಂಡು ತೋಫುಗಳ ಹೊಡೆತದಿಂದ ಆ ಸೇತುವೆಯನ್ನು ಮುರಿದುಬಿಡಬೇಕೆಂದು ಯತ್ನಿಸಿದನು. ಆ ಕಾರ್ಯವನ್ನಾದರೂ ಸಕಾಲದಲ್ಲಿ ಪೂರೈಸಿದ್ದರೆ ಎಷ್ಟೋ ಪ್ರಯೋಜನವಾಗುತ್ತಿದ್ದಿತು. ಆದರೆ ಈ ಸಂಗತಿಯು ಹ್ಯಾವಲಾಕ್ ಸಾಹೇಬನಿಗೆ ತಿಳಿದಕೂಡಲೆ ಆತನು ಸೈನ್ಯದೊಡನೆ ಧಾವಿಸಿ ಬಂದನು. ಬ್ರಿಟಿಷ ಸೈನ್ಯವು ಬಿಸಿಲಿನ ಸಂತಾಪದಿಂದ ಹುರಿದುಬೀಳುತ್ತಿದ್ದಿತು, ಬಹುದಿನಗಳ ಪ್ರವಾಸದ ಶ್ರಮದಿಂದಲೂ ಬೇನೆಬೇಸರಿಕೆಗಳಿಂದಲೂ ಯುರೋಪಿಯನ್ ಸೈನಿಕರು ಬಹು ಕಷ್ಟಕ್ಕೆ ಒಳಗಾಗಿದ್ದರು. ಆದರೂ ಅವರು ತಮ್ಮ ಕರ್ತವ್ಯವನ್ನು ಸ್ಮರಿಸಿ ಕಾನಪುರದಲ್ಲಿ ಸೆರೆಯಲ್ಲಿ ಸಿಕ್ಕಿದ್ದ ಹೆಂಗುಸರು ಹುಡುಗರಿಗಾಗಿ ಕಳವಳಗೊಂಡು ರಣಾವೇಶದಿಂದ ಉನ್ಮತ್ತರಾಗಿ ಯುದ್ಧಮಾಡುತ್ತಿದ್ದರು. ಪಾಂಡುನದಿಯ ತೀರದಲ್ಲಿ ಮತ್ತೆ ಕಡುಕಾಳಗವೆಸಗಿತು. ಸೇತುವೆಗೆ ಇದಿರಾಗಿ ಹೂಡಿದ

ಪೇಶವೆಯ ತೋಫಿನ ಮೇಲೆ ಶತ್ರುಗಳು ಏರಿಬಂದರು. ಕೊನೆಗೆ ಮದ್ದು ತುಂಬುವ ಹಾರೆಯು ಮುರಿದು ಹೋಗಿ ಆ ತೋಫು ನಿಂತರೂ ಪೇಶವೆಯ ಸೈನ್ಯವು ತಟ್ಟನೆ ಹಿಮ್ಮೆಟ್ಟದೆ ತುಂಬ ಕಲಿತನದಿಂದ ಕಾದಿತು. ಆದರೆ ದುರ್ದೈವವು ಅಲ್ಲಿಯೂ ಅವರ ಬೆನ್ನಟ್ಟಿ ಬಂದಿತು. ಸೇನಾಪತಿ ಬಾಳಾಸಾಹೇಬನು ಆನೆಯ ಮೇಲೆ ಕುಳಿತು ತನ್ನ ಸೇನಾಚಾಲನೆ ನಡೆಯಿಸಿದ್ದನು. ಆತನ ಆನೆಯು ಆಳವಿನೊಳಗೆ ಬಂದುದನ್ನು ನೋಡಿ ಮ್ಯೂಡನೆಂಬ ಅಶ್ವಾರೋಹಿಯು ತಟ್ಟನೆ ಕುದುರೆಯಿಂದಿಳಿದು ಆ ಆನೆಗೆ ಗುರಿಯಿಟ್ಟು ಒಂದು ತೋಫನ್ನು ಹಾರಿಸಿದನು. ಪ್ರಬಲವಾದ ತೋಫಿನ ಗುಂಡು ಆನೆಯ ಹಿಂಭಾಗದಲ್ಲಿ ಸೇರಿ ಎದೆಯಲ್ಲಿ ಪಾರಾಯಿತು. ಬಾಳಾಸಾಹೇಬನು ಗಾಯ ಪಡೆದು ನೆಲಕ್ಕೆ ಉರುಳಿದನು. ಪೇಶವೆಯ ಸೈನ್ಯವು ಸೇನಾಪತಿಯ ಅವಸ್ಥೆಯನ್ನು ಕಂಡು ಎದೆಗೆಟ್ಟಿತು. ದೇಶೀಯ ಸೈನ್ಯಕ್ಕೂ ಯುರೋಪಿಯನ್ ಸೈನ್ಯಕ್ಕೂ ಇದ್ದ ಮಹದಂತರವು ಇದೇ. ಹತ್ತುಜನ ಸೇನಾನಾಯಕರು ಒಬ್ಬರ ಹಿಂದೊಬ್ಬರು ರಣರಂಗದಲ್ಲಿ ಮಡಿದರೂ ಯುರೋಪಿಯನ್ ಸೈನಿಕರು ಎದೆಗೆಡುವುದಿಲ್ಲ; ತಾವು ಪರಾಜಿತರಾದೆವೆಂದು ಭಾವಿಸುವುದಿಲ್ಲ. ಹನ್ನೊಂದನೆಯವನೊಬ್ಬನು ತತ್ಕಾಲಕ್ಕೆ ಮುಂದೆ ಬಂದು ಸೇನಾಚಾಲನೆಯ ಕಾರ್ಯವನ್ನು ನಡೆಯಿಸುವನು. ಆದರೆ ದೇಶೀಯರಲ್ಲಿ ಇಂತಹ ಸ್ವಯಂಸ್ಫೂರ್ತಿಯಿರಲಿಲ್ಲ. ಅಲ್ಲದೆ ರಣಭೂಮಿಯಲ್ಲಿ ಸೇನಾಚಾಲಕನಾದವನಿಗೆ ಆನೆಯ ಮೇಲೆ ಕುಳಿತಿರುವಂತಹ ಆಡಂಬರವೇಕೆ ಬೇಕಾಗಿದ್ದಿತು? ಒಟ್ಟಿಗೆ ಯೋಗ್ಯ ಚಾಲಕರಿಲ್ಲದಂತಾಗಲು ಬಹುಸಂಖ್ಯಾಕವಾದ ಪೇಶವೆಯ ಸೈನ್ಯವು ಅಲ್ಪ ಪ್ರಮಾಣದ ಯುರೋಪಿಯನ್ ಸೈನ್ಯವನ್ನು ತಡೆಯಲಾರದೆ ಕಾನಪುರಕ್ಕ ಹಿಂದಿರುಗಿ ಹೊರಟಿತು.

ದಂಗೆಗಾರ ಸೈನ್ಯವು ವ್ಯವಸ್ಥೆಯಿಂದ ಯುದ್ಧಾರಂಭಮಾಡಲಿಲ್ಲವೆಂದು ಹಿಂದೆಯೇ ಹೇಳಿದೆ. ಅವರು ಕಲಕತ್ತೆಯ ದಾರಿಯನ್ನು ಪ್ರತಿಬಂಧಿಸಲೇ ಇಲ್ಲ. ಅಲ್ಲದೆ ಕಾಶಿ ಅಲಹಾಬಾದಗಳ ದಂಗೆಗಾರ ಸೈನ್ಯವು ಕ್ರಾಂತಿಕಾರಕರ ತಂತ್ರಕ್ಕೆ ಒಳಗಾಗಿ ನಡೆಯಲಿಲ್ಲ. ಒಟ್ಟಿಗೆ ದಂಗೆಗಾರ ಸೈನ್ಯವು ಯೋಗ್ಯ ಚಾಲಕರಿಲ್ಲದ ಪುಂಡುಗಾರರ ತಂಡದಂತಾಗಿತ್ತೆಂದರೆ ತಪ್ಪಾಗದು.

---

# ಎರಡನೆಯ ಪರಿಚ್ಛೇದ

## ನಾನಾಸಾಹೇಬನ ಪರಾಜಯ

"Nana Saheb's force at Bithoor is entirely dispersed. We have brought from the place sixteen guns and a quantity of animals, set fire to his palace, and blown up his magazine.."

—*Forrest.*



ಇಂದು ಜುಲೈ ತಿಂಗಳ ೧೫ನೆಯ ತಾರೀಖು. ಅಭಿನವ ಪೇಶವೆ ಶ್ರೀಮಂತ ನಾನಾಸಾಹೇಬನು ಕಾನಪುರದ ಸೇನಾನಿವಾಸದ ಬಳಿಯಲ್ಲಿ ಸುವಿಶಾಲವಾದ ಗೂಡಾರದಲ್ಲಿ ಸಿಂಹಾಸನಾರೂಢ ನಾಗಿದ್ದನು. ಬಲಗಡೆಗೆ ಮಂತ್ರಿಶ್ರೇಷ್ಠ ಅಜೀಮುಲ್ಲಾ ಖಾನನೂ ಎಡಗಡೆಗೆ ಕಾನಪುರದ ನೂತನ ಸುಭೇದಾರ ನನೀ ನಬಾಬನೂ ಕುಳಿತಿದ್ದರು. ಸೈನಿಕರಲ್ಲಿ ಮುಹಮ್ಮದೀಯರ ಪ್ರಾಬಲ್ಯವು ಹೆಚ್ಚಾಗಿದ್ದಿತೆಂದು ಹಿಂದೆಯೇ ಹೇಳಿದೆ. ಆ ಮುಹಮ್ಮದೀಯರ ಸಂತೋಷಕ್ಕಾಗಿ ಪೇಶವೆಯು ಬ್ರಹ್ಮಾವರ್ತದಲ್ಲಿ ಸಿಂಹಾಸನಾರೂಢನಾದ ದಿನವೇ ನನೀ ನಬಾಬನಿಗೆ ಕಾನಪುರದ ಸರ್ವಾಧಿಕಾರವು ಒಪ್ಪಿಸಲ್ಪಟ್ಟಿದ್ದಿತು.

ಕಾನಪುರದಲ್ಲಿ ಬ್ರಿಟಿಷರ ಅಧಿಕಾರವು ನಷ್ಟವಾದ ಬಳಿಕ ನಾನಾ ಸಾಹೇಬ ಪೇಶವೆಯ ಕಾರ್ಯಭಾರವು ಪ್ರಾರಂಭವಾದ್ದಿಗಿತೆಂದು ಹಲವರು ಇತಿಹಾಸ ಲೇಖಕರು ಪ್ರತಿಪಾದಿಸಿರುವರು. ನೂತನ ಪೇಶವೆಯ ಹೆಸರಿನಿಂದ ಪ್ರಕಟವಾದ ಹಲವು ಆಜ್ಞಾಪತ್ರಗಳೇ ಅವರ ಆಧಾರ. ಆದರೆ ದಿಲ್ಲಿಯಲ್ಲಿ ಬಾದಷಹನಾದ ಬಹದ್ದೂರಷಹನ ಹೆಸರಿನಿಂದ ಹೊರಟ ಆಜ್ಞಾಪತ್ರಗಳಿಗೂ ಆತನಿಗೂ ಎಷ್ಟು ಸಂಬಂಧವಿದ್ದಿತೋ ಅಷ್ಟೇ ಸಂಬಂಧವು ನಾನಾ ಸಾಹೇಬನಿಗೂ ಆತನ ಹೆಸರಿನ ಆಜ್ಞಾಪತ್ರಗಳಿಗೂ ಇದ್ದಿತೆಂದು ಹೇಳಬಹುದು. ಶ್ರೀಮಂತ ನಾನಾಸಾಹೇಬನು ಕಾನಪುರದ ನೂತನ ಶಾಸನಾಧಿಕಾರಿ ಮಹಿಮಾನ್ವಿತ ಪೇಶವೆಯೆನಿಸಿದ್ದರೂ ಮಾಗಿಯಕಾಲದ ಚಳಿಯಿಂದ ಮುರಿದು ಮುದ್ದೆಯಾದ ವೃದ್ಧನಹಾಗೆ ತನ್ನೊಳಗೆ ತಾನೇ

ಸಂಕುಚಿತನಾಗಿದ್ದನು. ಪೇಶವೆಯು ವಜೀರ ಅಜೀಮುಲ್ಲಾಖಾನನ ಕೈಯೊಳಗಿನ ಸೂತ್ರದ ಬೊಂಬೆಯಂತಿದ್ದನೆಂದರೆ ಅತಿಶಯೋಕ್ತಿಯಾಗದು. ಅಜೀಮುಲ್ಲಾಖಾನನೂ ಕಾನಪುರದ ಸರ್ವಾಧಿಕಾರಿ ಸನೀ ನಬಾಬನೂ ಪೇಶವೆಯ ಎಡಬಲಗಳಲ್ಲಿ ಕುಳಿತು ತಮ್ಮ ತಮ್ಮ ಮನೋರಾಜ್ಯದ ಭವಿಷ್ಯದ ಕಾರ್ಯಭಾರದ ಹಲವು ವಿಷಯಗಳನ್ನು ಆತನ ಕಿವಿಗೆ ಮುಟ್ಟಿಸಿ 'ಅಸ್ತು' ಅನ್ನಿಸಿಕೊಳ್ಳುವ ಕಾರ್ಯದಲ್ಲಿ ತೊಡಗಿದ್ದರು.

ಬಹು ವಿಜೃಂಭಣೆಯಿಂದ ನೆರೆದಿರುವ ಪೇಶವೆಯ ಓಲಗದಲ್ಲಿ ಅಕಸ್ಮಾತ್ ಸಿಡಿಲೆರಗಿದಂತಾಯಿತು. ಬಾಳಾಸಾಹೇಬನ ಸೈನ್ಯವು ಪಾಂಡು ನದಿಯ ತೀರದಲ್ಲಿ ಪರಾಜಿತವಾಗಿ ಸೇನಾಪತಿಯು ಗಾಯವಡೆದು ತಿರುಗಿ ಬಂದಿರುವನೆಂದೂ ವಿಜಯಶಾಲಿಯಾದ ಹ್ಯಾವಲಾಕ್ ಸಾಹೇಬನು ಪ್ರಬಲ ಸೇನೆಯೊಡನೆ ಕಾನಪುರಕ್ಕೆ ಹೊರಟಿರುವನೆಂದೂ ಗೊತ್ತಾಯಿತು. ಪೇಶವೆಯೂ ಸಭಿಕರೂ ವಿಸ್ಮಿತರಾದರು; ಚಿಂತಾಗ್ರಸ್ತರಾದರು; ಮುಂದೇನು ಗತಿಯೋ ಎಂದು ಭಯಭ್ರಾಂತರಾದರು. ಕೆಲವರು ಕಾನಪುರವನ್ನು ಬಿಟ್ಟು ಬ್ರಹ್ಮಾವರ್ತಕ್ಕೆ ಹೋಗಿ ಬಿಡಬೇಕೆಂದರು; ಮತ್ತೆ ಕೆಲವರು ಫತ್ತೇಗಡಕ್ಕೆ ಸಾಗಿಹೋಗಿ ಅಲ್ಲಿಯ ಬಂಡುಗಾರ ಸೇನೆಯೊಡನೆ ಕೂಡಿಕೊಳ್ಳಬೇಕೆಂದರು; ಹಲವರು ಇಲ್ಲಿಯೇ ಇದ್ದು ಬ್ರಿಟಿಷ ಸೇನೆಯನ್ನು ಎದುರಿಸಬೇಕೆಂದರು. ಹಲವು ಸಾರೆ 'ಭವತಿ–ನ ಭವತಿ'ಗಳಾದಮೇಲೆ ಕೊನೆಯ ವಿಚಾರವನ್ನೇ ಎಲ್ಲರೂ ಸಮ್ಮತಿಸಿದರು. ಎಲ್ಲರೂ ಒಮ್ಮನಸ್ಸಿನಿಂದ ಯುದ್ಧದ ಸಿದ್ಧತೆ ಮಾಡತೊಡಗಿದರು. ಈ ಸಾರೆ ನಾನಾಸಾಹೇಬನು ತಾನೇ ಸೇನಾವ್ಯೂಹ ರಚನೆಯಲ್ಲಿ ತೊಡಗಿ ರಣಭೂಮಿಗೆ ಹೊರಡಲು ಸಿದ್ಧನಾದನು.

ನಬಾಬಗಂಜದಲ್ಲಿದ್ದ ಪೇಶವೆಯ ನೂತನ ಪ್ರಾಸಾದದಲ್ಲಿ ಆತನ ತಾಯಿ ಶಾರದಾಬಾಯಿಯು ಚಿಂತಾಕುಲಳಾಗಿ ಮಲಗಿದ್ದಳು. ಸೊಸೆ ಸುಮಿತ್ರಾದೇವಿಯು ಆಕೆಯ ಪಾದದೇಶದಲ್ಲಿ ಕುಳಿತು ಅತ್ತೆಯ ಚರಣಸೇವೆಯಲ್ಲಿ ನಿರತಳಾಗಿದ್ದಳು. ಒಂದೆರಡು ಹನಿ ಬಿಸಿ ಕಣ್ಣೀರು ಕಾಲಮೇಲೆ ಬೀಳಲು ಅತ್ತೆಯು "ತಂಗೀ, ಸುಮಿತ್ರಾ, ಅಳುವುದೇಕೆ? ದೈವದಲ್ಲಿದ್ದಂತೆ ಆದೀತು. ರಣಭೂಮಿಗೆ ಹೋದಬಳಿಕ ಜಯಾಪಜಯಗಳ ವಿಷಯದಲ್ಲಿ ಚಿಂತೆಮಾಡಿ ಫಲವೇನು? ಶೂರರಾದವರಿಗೆ ಜಯವೂ ಅಪಜಯವೂ ಒಂದೇ" ಎಂದಳು.

" ಅಮ್ಮಾ, ನಾನು ರಣರಂಗದಲ್ಲಿ ಸಂಭವಿಸಬಹುದಾದ ಜಯಾಪಜ-ಯುಗಳ ವಿಷಯದಲ್ಲಿ ಅಷ್ಟು ಚಿಂತೆಮಾಡುವುದಿಲ್ಲ. ಭಗವಂತನ ಇಚ್ಛೆಯಿ-ದ್ದಂತಾದೀತು. ಆದರೆ ನಿರಾಶ್ರಿತರಾಗಿ ಕಷ್ಟಪಡುತ್ತಿರುವ ಅಬಲೆಯರಿಗಾ-ಗಿಯೂ ಶಿಶುಗಳಿಗಾಗಿಯೂ ನನ್ನ ಮನಸ್ಸು ಮರುಗುತ್ತಿದೆ. ಅಂದು ಆ ರೀತಿ ಸತೀ ಚೌರಾದಲ್ಲಿ ಪಾಪಾಚರಣೆ ನಡೆಯಿತು. ಈಗ ಮತ್ತೆ ಅಜೀಮುಲ್ಲಾ ಖಾನನು ಕಾರಾಗೃಹದ ಪರಿಚಾರಿಕೆ ಹುಸೇನಿ ಬೇಗಮಳ ತಂತ್ರಕ್ಕೆ ಒಳಗಾಗಿ ಬೀಬಿ ಗೃಹದಲ್ಲಿದ್ದ ಎರಡುನೂರಕ್ಕಿಂತ ಹೆಚ್ಚು ಸ್ತ್ರೀಹತ್ಯೆ ಶಿಶುಹತ್ಯೆಗಳಿಗೆ ಮನಸ್ಸು ಮಾಡಿರುವನೆಂದು ಕೇಳಿದಾಗಿನಿಂದಲೂ ನನ್ನ ಗಂಟಲಲ್ಲಿ ನೀರಿಳಿಯಲಿಲ್ಲ. ಈಗೆರಡು ದಿನಗಳಿಂದಲೂ ನಾನು ನಿರಾಹಾರದಿಂದಿರುವೆನು. "

" ಹೌದು, ತಂಗೀ, ನಾನೂ ಈ ಹೊತ್ತು ಪ್ರಾತಃಕಾಲದಿಂದಲೂ ಅದೇ ಚಿಂತೆಯಲ್ಲಿ ಹಾಸುಗೆ ಹಿಡಿದಿರುವೆನು. ನನ್ನನ್ನು ಕಂಡು ಮಾತಾಡಿ ಹೋಗಬೇಕೆಂದು ನಾನಾಸಾಹೇಬನಿಗೆ ಹೇಳಿಕಳುಹಿದ್ದೇನೆ. "

' ಅಮ್ಮಾ, ಅಮ್ಮಾ ' ಹೇಗೆನ್ನುತ್ತ ಯಾರೋ ಕೋಣೆಯ ಬಾಗಿಲನ್ನು ದೂಡಿದರು. ಸುಮಿತ್ರಾಬಾಯಿಯು ಎದ್ದು ಹೋಗಿ ಬಾಗಿಲು ತೆರೆದಳು. ನಾನಾಸಾಹೇಬನು ಒಳಗೆ ಬಂದು " ಅಮ್ಮಾ " ಎಂದನು.

" ನಾನಾಸಾಹೇಬ, ನಮಗಿನ್ನು ಬದುಕಿ ಉಳಿಯುವ ಆಸೆಯಿಲ್ಲ; "

" ಅಮ್ಮಾ, ಹೀಗೆ ಹೆದರಿದರೆ ಹೇಗೆ ? ನಾನು . . "

" ನಾನು ಅಂತಹ ಹೇಡಿಯಲ್ಲ; ಹಗೆಗಳ ಆಕ್ರಮಣಕ್ಕೆ ಹೆದರಿ ಹೀಗೆ ಮಾತಾಡಿದೆನೆಂದೆಯಾ ? "

" ಹಾಗಿಲ್ಲದಿದ್ದರೆ ಇನ್ನೇತರ ಚಿಂತೆ ನಿಮಗೆ ? "

" ಬ್ರಾಹ್ಮಣ ಕುಲದಲ್ಲಿ ಹುಟ್ಟಿದ್ದರೂ ಕ್ಷತ್ರಿಯ-ಕರ್ಮಾಚರಣೆಯನ್ನು ಕೈಕೊಂಡ ನೀವು ಹಗೆಗಳೊಡನೆ ಕಾದಾಡಿ ಸಹಸ್ರ ಸಹಸ್ರ ಅರಿಬಲದ ಚೆಂಡಾಡಿ ರಕ್ತದ ಕಾಲುವೆ ಹರಿಯಿಸಿದ್ದರೆ ನಾನು ಅದನ್ನು ಕೇಳಿ ಆನಂದಪಡುತ್ತಿದ್ದೆನು; ಕಣ್ಣಾರೆ ಕಂಡು ಧನ್ಯಳೆಂದುಕೊಳ್ಳುತ್ತಿದ್ದೆನು. ಆದರೆ ಇಂತಹ ಪಶ್ವಾಚರಣೆಯನ್ನು ಮಾತ್ರ ನಾನು ಸಹಿಸಲಾರೆನು. "

" ಅಂತಹದೇನಮ್ಮಾ? ನಾನು ಅಸತ್ಕಾರ್ಯದಲ್ಲಿ ಎಂದೂ ತೊಡಗಿಲ್ಲ "

" ಅಂದು ಸತೀ ಚೌರಾದಲ್ಲಿ. . . . . . "

"ದುರ್ಮಾರ್ಗಿಗಳಾದ ದುಷ್ಟರು ಆರಂಭಿಸಿದ ದುಷ್ಕಾರ್ಯವನ್ನು ನಾನೇ ತಡೆದು ನಿಲ್ಲಿಸಿದೆನು."

"ಇಂದು ಮತ್ತೆ ಬೀಬಿ ಗೃಹದಲ್ಲಿ ಸ್ತ್ರೀಹತ್ಯೆ ಶಿಶುಹತ್ಯೆಗಳು ನಡೆಯುವವಂತೆ. ಈ ಮಾತು ನಿಜವಾದರೆ ನಾವೆಲ್ಲರೂ ಇಲ್ಲಿಯೇ ಮೇಲುಪ್ಪರಿಗೆಯ ಕಿಡಿಕೆಯಿಂದ ಹಾರಿ ಪ್ರಾಣಬಿಡುವೆವು. ಸುಮಿತ್ರಾಬಾಯಿಯು ಈ ದುರ್ವಾರ್ತೆಯನ್ನು ಕೇಳಿ ಮೂರು ದಿನಗಳಿಂದಲೂ ಅನ್ನ ನೀರುಗಳನ್ನು ಮುಟ್ಟದೆ ಬಿದ್ದು ಬಿದ್ದು ಅಳುತ್ತಲಿದ್ದಾಳೆ. ಕಟುಕ ಅಜೀಮುಲ್ಲಾನು ಆ ಬಸವಿ ಹುಸೇನಿ ಬೇಗಮಳ ದುರುಪದೇಶದಿಂದ ಇಂತಹ ಪಶುವೃತ್ತಿಯನ್ನು ಅನುಮೋದಿಸುತ್ತಿರುವನಂತೆ."

"ಇಲ್ಲ; ಅಮ್ಮಾ, ಇಲ್ಲ. ಇಂತಹ ರಾಕ್ಷಸ ಕೃತ್ಯವನ್ನು ನಾನು ಎಂದಿಗೂ ಅನುಮೋದಿಸಲಾರೆ. ನೀವು ನಿಶ್ಚಿಂತರಾಗಿರಿ. ಆದರೆ ಇನ್ನೊಂದು ವಿಚಾರವಿದೆ. ನೀವೆಲ್ಲರೂ ಈಗಲೆ ಬ್ರಹ್ಮಾವರ್ತಕ್ಕೆ ಹೊರಡಬೇಕಾಗಿದೆ. ಶತ್ರುಗಳು ಕಾನಪುರದ ಮೇಲೆ ಏರಿಬರಲು ಹೊರಟಿದ್ದಾರಂತೆ. ಹೊರಗೆ ಪಲ್ಲಕ್ಕಿಗಳು ಪ್ರಯಾಣಕ್ಕೆ ಸಿದ್ಧವಾಗಿವೆ."

ಸ್ತ್ರೀಹತ್ಯೆ ಶಿಶುಹತ್ಯೆಗಳಂತಹ ಪಾಪಕೃತ್ಯಗಳು ನಡೆಯದಂತೆ ನೋಡಿಕೊಳ್ಳುವೆನೆಂದು ಮಗನಿಂದ ವಚನಪಡೆದು, ಯುದ್ಧದಲ್ಲಿ ವಿಜಯಶಾಲಿಯಾಗೆಂದು ಆತನನ್ನು ಆಶೀರ್ವದಿಸಿ, ಶಾರದಾಬಾಯಿಯು ಸಕಲ ಪರಿವಾರದೊಡನೆ ಬ್ರಹ್ಮಾವರ್ತಕ್ಕೆ ಹೊರಟು ಹೋದಳು.

ಇತ್ತ ನಾನಾಸಾಹೇಬನು ಬೀಬಿಗೃಹದ ಅವಸ್ಥೆ ಯೇನಾಗಿದೆಯೆಂದು ನೋಡಿ ಬಾರೆಂದು ತನ್ನ ಅನುಚರನೊಬ್ಬನನ್ನು ಕಳುಹಿದನು. ಅಷ್ಟರಲ್ಲಿ ಎಲ್ಲವೂ ಮುಗಿದು ಹೋಗಿತ್ತು. ಅನುಚರನು ಬಂದು ಈ ರೀತಿ ಅರುಹಿದನು—

"ಬೀಬಿ ಗೃಹದಲ್ಲಿದ್ದ ಸೆರೆಯಾಳುಗಳಲ್ಲಿ ನಾಲ್ಕೈದು ಜನ ಗಂಡಸರಿದ್ದರು. ದಂಗೆಗಾರರು ಮೊದಲು ಅವರನ್ನು ಹೊರಗೆ ತಂದು ಗುಂಡು ಹೊಡೆದು ಕೊಂದರು. ಈಗ ಅಲ್ಲಿ ಸ್ತ್ರೀಯರೂ ಬಾಲಕರೂ ಕೂಡಿ ೧೯೩ ಜನರಿದ್ದರು. ಅವರನ್ನು ಕೊಲ್ಲುವಂತಹ ಕ್ರೂರಕಾರ್ಯವನ್ನು ಸೈನಿಕರಲ್ಲಿ ಯಾರೂ ಒಪ್ಪಿಕೊಳ್ಳಲಿಲ್ಲ. ಕೊನೆಗೆ ಕಾರಾಗೃಹದ ರಕ್ಷಕರಿಗೆ ಅಜೀಮುಲ್ಲಾಖಾನರ ಅಪ್ಪಣೆ ಹೋಗಲು ಅವರು ಸೆರೆಮನೆಯ ಕಿಡಿಕಿಯೊಳಗಿಂದ

ಒಳಗೆ ಗುಂಡು ಹಾರಿಸತೊಡಗಿದರು. ಒಳಗಿನ ನಿರಾಶ್ರಿತರ ಕರುಣಾಜನಕ ವಾದ ಆರ್ತಧ್ವನಿಯನ್ನು ಕೇಳಿ ಅವರೂ ಹಿಂದೆಗೆದರು. ಆಗ ನಿಮ್ಮನ್ನು ತೋಫಿನ ಬಾಯಿಗೆ ಕೊಟ್ಟು ಹಾರಿಸಿಬಿಡುವೆವೆಂದು ಬೆದರಿಸಿದರೂ ತಾವು ಇಂತಹ ಕ್ರೂರಾಚರಣೆಯನ್ನು ಮಾಡಲಾರವೆಂದು ಅವರು ಸ್ಪಷ್ಟವಾಗಿ ಹೇಳಿ ಬಿಟ್ಟರು. ಅಷ್ಟರಲ್ಲಿ ಕಾರಾಗೃಹದ ಪರಿಚಾರಿಕೆ ಹುಸೇನಿ ಬೇಗಮಳು ಕೆಲವು ಜನ ಕಟುಕರೊಡನೆ ಅಲ್ಲಿಗೆ ಬಂದಳು. ಅವರು ಎಲ್ಲ ಸ್ತ್ರೀಯರನ್ನೂ ಬಾಲಕ ಬಾಲಿಕೆಯರನ್ನೂ ನಿಷ್ಕರುಣೆಯಿಂದ ಕಡಿದು ಹಾಕಿದರು. ಅವರೆಲ್ಲರ ಶವ ಗಳನ್ನು ಅಲ್ಲಿಯೇ ಇರುವ ಒಂದು ಬಾವಿಯಲ್ಲಿ ಹಾಕಿದರಂತೆ." §

ನಾನಾಸಾಹೇಬನು ಸಿಂತಿದ್ದವನು ತಲೆಯಮೇಲೆ ಕೈಯಿಟ್ಟು ಕುಳಿತು ಬಿಟ್ಟನು. ಆತನ ಕಣ್ಣುಗಳಿಂದ ದಳ ದಳ ನೀರು ಸುರಿಯಿತು; ಎಡದ ಕಣ್ಣು ತಟತಟನೆ ಹಾರಿತು; ಮಿತಿಮೀರಿದ ದುಃಖಸಂತಾಪಗಳಿಂದಲೂ ಭವಿಷ್ಯದ ಕಷ್ಟಸೂಚನೆಯಿಂದಲೂ ಆತನ ಅಂತಃಕರಣವು ಬತ್ತಿ ಹೋಯಿತು. ಆನಂದಮಿಶ್ರ ಸ್ವಾಮಿಯ ಉಪದೇಶವಾಕ್ಯಗಳು ನೆನಪಾಗಲು ಆತನು ಕುಳ್ಳಿರಲಾರದೆ ಅಲ್ಲಿಯೇ ಮಲಗಿಬಿಟ್ಟನು. ಸ್ವಲ್ಪ ಹೊತ್ತಿನ ಮೇಲೆ ಎದ್ದು ಕುಳಿತು "ಎಂತಹ ಕಟುಕರವರು! ಹುಸೇನಿ ಬೇಗಮಳಿಗೆ ಆ ಸ್ತ್ರೀಯರ ಮತ್ತು ಬಾಲಕರ ಮೇಲೆ ಅಂತಹ ಹಗೆಯೇನಿದ್ದೀತು?" ಎಂದನು.

ಅನುಯಾಯಿ:— ಇದರ ರಹಸ್ಯವು ಇನ್ನೂ ಸರಿಯಾಗಿ ತಿಳಿದಿಲ್ಲ. ಬೀಬಿ ಗೃಹವು ಹಿಂದೊಬ್ಬ ಸಾಹೇಬನು ತನ್ನ ಮಹಮ್ಮದೀಯ ವೇಶ್ಯೆಗಾಗಿ ಕಟ್ಟಿಸಿದ ಮನೆಯಂತೆ. ಆ ವೇಶ್ಯೆಗೂ ಬೇಗಮಳಿಗೂ ಸಂಬಂಧವಿದ್ದಿತೆಂದೂ ಸಾಹೇಬನು ಆ ತನ್ನ ವೇಶ್ಯೆಯನ್ನು ಬಹುಕ್ರೂರತನದಿಂದ ಕೊಲೆಮಾಡಿಸಿದ ಹಗೆಯನ್ನು ತೀರಿಸಿಕೊಳ್ಳಲು ಬೇಗಮಳು ಇಂತಹ ಕ್ರೂರಾಚರಣೆಗೆ ಯತ್ನಿಸಿದಳೆಂದೂ ಹೇಳುವುದುಂಟು

"ಅಯ್ಯೋ ಪಾಪಿಯೇ! ಇಂತಹ ನರರಾಕ್ಷಸಿಯ ಮಾತಿನಂತೆ

---

§ ಕಾನಪುರದ ಕೊಲೆಯ ಸ್ಮಾರಕವೆಂದು ಲಾರ್ಡ ಕ್ಯಾನಿಂಗ್ ಸಾಹೇಬನು ಈ ಬಾವಿಯ ಮೇಲೊಂದು ಸುಂದರವಾದ ಕಟ್ಟಡವನ್ನು ಕಟ್ಟಿಸಿದನು. ಸುತ್ತಲೂ ೫೦ ಎಕರೆ ವಿಸ್ತಾರವಾದ ಬಹು ರಮ್ಯವಾದ ಉಪವನವನ್ನು ರಚಿಸಿರುವರು. ಈ ಉಪವನ ದೊಳಗೆ ಹಿಂದುಗಳಿಗೂ ಮಹಮ್ಮದೀಯರಿಗೂ ಈಗಲೂ ಪ್ರವೇಶವಿಲ್ಲ.



ಕಾನಪುರದ ಕೊಲೆಯ ಸ್ಮಾರಕ



ನಾನಾಸಾಹೇಬನ ಅರಮನೆಯ ಅವಶೇಷಗಳು (ಬ್ರಹ್ಮಾವರ್ತ)

ನಡೆಯುವ ಅಜೀಮುಲ್ಲಾಖಾನನೆಂತಹನಿವನು? ವಿನಾಶಕಾಲವೊದಗಿನುದ ರಿಂದಲೇ ಇಂತಹ ವಿಪರೀತ ಬುದ್ಧಿಯುಂಟಾಗಿರಬೇಕು." ಎನ್ನುತ್ತ ನಾನಾಸಾಹೇಬನು ಕಣ್ಣೀರು ಸುರಿಸಿದನು.

"ವಜೀರ ಅಜೀಮುಲ್ಲಾಖಾನರು ಕೇವಲ ಬೇಗಮಳ ಸಂತೋಷ ಕ್ಕಾಗಿಯೇ ಈ ಕಾರ್ಯವನ್ನು ಅನುಮೋದಿಸಲಿಲ್ಲವಂತೆ. ಯುರೋಪಿ ಯನರು ಸೆರೆಯಲ್ಲಿ ಸಿಕ್ಕಿದ್ದ ಹೆಂಗುಸರು ಬಾಲಕರು ಇವರನ್ನು ಬಿಡಿಸಿ ಕೊಳ್ಳುವುದಕ್ಕಾಗಿ ಕಾನಪುರದ ಮೇಲೆ ದಂಡೆತ್ತಿ ಬಂದಿರುವುದರಿಂದ ಸೆರೆ ಯಲ್ಲಿ ಸಿಕ್ಕಿದ್ದವರೆಲ್ಲರನ್ನೂ ಕೊಂದುಬಿಟ್ಟರೆ ಬ್ರಿಟಿಷ ಸೇನಾಪತಿಯು ಹತಾಶನಾಗಿ ಮರಳಿ ಹೋಗಿ ಬಿಡಬಹುದೆಂದು ಅವರು ತರ್ಕಿಸಿದರಂತೆ."

"ಅವಿವೇಕದ ಪರಮಾವಧಿಯಾಯಿತು. ಬ್ರಿಟಿಷರು ಇಷ್ಟು ಅಜ್ಞಾನಿ ಗಳೂ ಅದೂರದರ್ಶಿಗಳೂ ಆಗಿರುವರೇ? ಕಟುಕರು ಸ್ತ್ರೀಯರ ಮಾನ ಭಂಗದಂತಹ ದುರಾಚಾರಗಳಿಗಾದರೂ ಮನಸ್ಸು ಮಾಡಿಲ್ಲವಷ್ಟೇ?"

"ಇಲ್ಲ. ಅಂತಹ ಪಾಪಕಾರ್ಯಕ್ಕೆ ಅವರು ಮನಸ್ಸು ಮಾಡಲಿಲ್ಲ."*

ನಾನಾಸಾಹೇಬನು ನಿರುಪಾಯನಾಗಿ ಬಹು ದುಃಖದಿಂದ ಯುದ್ಧದ ಸಿದ್ಧತೆಗಾಗಿ ಹೊರಟು ಹೋದನು.

ಅತ್ತ ಹ್ಯಾವಲಾಕ್‌ಸಾಹೇಬನು ಹಗಲು ಹನ್ನೆರಡು ತಾಸು ನಿರಾಹಾರ ದಿಂದಿದ್ದು ಹಗೆಗಳೊಡನೆ ಕಾದಾಡಿ ವಿಜಯಶಾಲಿಗಳಾದ ತನ್ನ ಸೈನಿಕರ ವೀರಶ್ರೀಯನ್ನು ಪರಿಪರಿಯಿಂದ ಸ್ತುತಿಸಿ ಅವರನ್ನು ಹುರುಪುಗೊಳಿಸಿದನು. ರಾತ್ರಿ ಕಳೆಯಿತು. ಮರುದಿನ ಮುಂಜಾನೆ ಅರುಣೋದಯಕ್ಕಿಂತಲೂ ಮೊದಲೇ ಬ್ರಿಟಿಷರ ಶಿಬಿರದಲ್ಲಿ ರಣಭೇರಿಯು ಮೊಳಗತೊಡಗಿತು; ಎಲ್ಲರೂ ತಮ್ಮ ತಮ್ಮ ಶಸ್ತ್ರಾಸ್ತ್ರಗಳನ್ನು ಸಜ್ಜುಗೊಳಿಸಿಕೊಂಡು ಅತುಲ ಉತ್ಸಾಹ ದಿಂದ ಹೊರಟರು. ಅವರು ೧೫ ಮೈಲು ತಡೆಯಿಲ್ಲದೆ ಪ್ರವಾಸಮಾಡಿದ ಬಳಿಕ ಕಾನಪುರದ ನಗರವು ಕಾಣಿಸತೊಡಗಿತು. ರಾಜಮಾರ್ಗಕ್ಕೆ ಹೊಂದಿದ್ದ ಒಂದು ಮಾವಿನ ಬನದಲ್ಲಿ ಅವರು ಮಧ್ಯಾಹ್ನದ ಅಡುಗೆ ಊಟ ಗಳನ್ನು ಅವಸರದಿಂದ ಮುಗಿಸಿಕೊಂಡರು. ಅತ್ತ ಪೇಶವೆಯು ಹತ್ತು ಸಾವಿರ ಸೈನಿಕರೊಡನೆ ಕಲಕತ್ತೆಯಿಂದ ಪೇಶಾವರಕ್ಕೆ ಹೋಗುವ ರಾಜ

* Indian Mutiny Vol. I. P. 479.

ಮಾರ್ಗವು ಕಾನಪುರಕ್ಕೆ ಕವಲೊಡೆಯುವ ಸಂದಿನಲ್ಲಿ ಶಿಬಿರವನ್ನು ಸ್ಥಾಪಿಸಿ ಕೊಂಡು ವೈರಿಗಳ ನಿರೀಕ್ಷಣೆಯಲ್ಲಿದ್ದನು. ಹ್ಯಾವಲಾಕ್ ಸಾಹೇಬನ ಸಂಗಡ ಹನ್ನೊಂದು ನೂರು ಜನ ಯುರೋಪಿಯನರೂ ಮುನ್ನೂರು ಜನ ಶೀಖರೂ ಇದ್ದರು. ಇಷ್ಟು ಅಲ್ಪ ಸೇನೆಯ ಬಲದಿಂದ ಆತನು ಪೇಶವೆಯ ಮಹಾಸೈನ್ಯವನ್ನು ಎದುರಿಸಿ ಓಡಿಸಬೇಕಾಗಿದ್ದಿತು. ಆದುದರಿಂದ ಆತನು ಅಡ್ಡದಾರಿಯಿಂದ ಹಗೆಗಳ ಮೇಲೆ ಬೀಳಬೇಕೆಂದು ನಿಶ್ಚಯಿಸಿದನು.

ಬ್ರಿಟಿಷ ಸೈನಿಕರು ಮಾವಿನ ಬನದ ನಡುವೆ ಹಾಯ್ದು ಬಂದು ಉತ್ತು ಬಿತ್ತುವುದಕ್ಕೆ ಸಿದ್ಧವಾದ ಬತ್ತದ ಗದ್ದೆಗಳಲ್ಲಿ ತಮ್ಮ ತೋಫುಗಳನ್ನು ಬಹುಕಷ್ಟದಿಂದ ಮುಂದೆ ಸಾಗಿಸಿದರು. ಪೇಶವೆಯ ಸೈನ್ಯವು ಅವರ ಮೇಲೆ ಗುಂಡಿನ ಮಳೆಗರೆಯಿತು. ಬ್ರಿಟಿಷರು ಜೀವದ ಪರಿವೆಯಿಲ್ಲದೆ ಹಗೆಗಳ ಶಿಬಿರಕ್ಕೆ ತೀರ ಸಮೀಪಿಸಿದರು. ಕೊನೆಗೆ ಸೇನಾಪತಿ ಹ್ಯಾವಲಾಕ್ ಸಾಹೇಬನು, ತನ್ನ ೯೦೦ ಜನರ ಹಾಯ್‌ಲಂಡರ್ಸ್ ಸೇನೆಯು ಜೀವದ ಹಂಗು ದೊರೆದು ಹಗೆಗಳ ಮೇಲೆ ಏರಿಹೋಗಿ ಸಂಗೀನುಗಳಿಂದ ಯುದ್ಧಮಾಡಿ ಪೇಶವೆಯ ತೋಫುಗಳನ್ನು ವಶಮಾಡಿಕೊಳ್ಳಬೇಕೆಂದು ಆಜ್ಞಾಪಿಸಿದನು. ಕೇವಲ ಧೈರ್ಯವೊಂದರಿಂದಲೇ ಅವರು ವಿಜಯಿಗಳಾದರಲ್ಲದೆ ಇನ್ನಾವ ಕಾರಣದಿಂದಲೂ ಅವರು ಕೃತಕಾರ್ಯರಾಗುವ ಸಂಭವವೇ ಇರಲಿಲ್ಲ. ಹಗೆಗಳು ಕೂಡ ಇಷ್ಟೇ ಧೈರ್ಯದಿಂದಲೂ ಸೇನಾಚಾಲಕರ ಯೋಗ್ಯ ಅಪ್ಪಣೆಯಂತೆಯೂ ಯುದ್ಧ ಮಾಡಿದ್ದರೆ ಆ ೯೦೦ ಜನರಲ್ಲಿ ಒಬ್ಬನೂ ಉಳಿಯುವ ಸಂಭವವೇ ಇರಲಿಲ್ಲ. ಹಗೆಗಳಲ್ಲಿ ಇಂತಹ ಪರಿಸ್ಥಿತಿಯಿಲ್ಲವೆಂಬುದನ್ನು ಹಿಂದೆ ಅನೇಕ ಸಮಯಗಳ ಅನುಭವದಿಂದ ತಿಳಿದಿದ್ದನಾದುದರಿಂದಲೇ ಹ್ಯಾವಲಾಕ್ ಸಾಹೇಬನು ಇಂತಹ ಸಾಹಸದ ಅಪ್ಪಣೆ ಕೊಟ್ಟಿದ್ದನು. ಪರಿಣಾಮವು ಕೂಡ ಆತನು ಊಹಿಸಿದಂತೆಯೇ ಆಯಿತು. ಹಾಯ್‌ಲಂಡರ್ಸ ಸೇನೆಯು ಪೇಶವೆಯ ತೋಫುಗಳನ್ನು ವಶಮಾಡಿಕೊಂಡಿತು. ನಾಲ್ಕು ಕಡೆಗೂ ಹಾಹಾಕಾರವುಂಟಾಯಿತು. ಸೇನಾಚಾಲನೆಯಲ್ಲಿ ತೊಡಗಿದ್ದ ಪೇಶವೆಯು ಈ ತೆರದ ಆಕಸ್ಮಿತ ಘಟನೆಯಿಂದ ಕಂಗೆಟ್ಟು ರಣಭೂಮಿಯಿಂದ ಕಾಲ್ದೆಗೆದು ಹೋಗಿಬಿಟ್ಟನು. ಬ್ರಿಟಿಷರು ವಿಜಯಿಗಳಾದರು !

ಬ್ರಿಟಿಷ ಸೈನಿಕರು ಸ್ವಾಭಿಮಾನದಿಂದಲೂ ಆತ್ಮಸ್ಫೂರ್ತಿಯಿಂದಲೂ

ಪ್ರೇರಿತರಾಗಿ ಜೀವದ ಆಶೆಯಿಲ್ಲದೆ ಯುದ್ಧ ಮಾಡುತ್ತಿದ್ದರು. ಆದರೆ ದಂಗೆಗಾರ ಸೇನೆಯಲ್ಲಿ ಒಬ್ಬೊಬ್ಬನೂ ಆತ್ಮರಕ್ಷಣೆಯ ವಿಷಯದಲ್ಲಿ ಅತಿ ದಕ್ಷನಾಗಿದ್ದು ವಿಜಯವನ್ನೂ ಸುಲಿಗೆಯ ಸಂಪತ್ತನ್ನೂ ಕೋರುತ್ತಿದ್ದನು. ಈ ವೈಷಮ್ಯದ ಮೂಲಕವಾಗಿಯೇ ಅಲ್ಪ ಸಂಖ್ಯಾಕವಾದ ಬ್ರಿಟಿಷಸೇನೆಯು ಹಗೆಗಳನ್ನು ವಿಧ್ವಂಸ ಮಾಡುತ್ತ ವಿಜಯಶಾಲಿಯಾಗುತ್ತ ಸಾಗಿದ್ದಿತು. ಜಯಶಾಲಿಗಳಾದ ಬ್ರಿಟಿಷ ಸೈನಿಕರು ಅತ್ಯಂತ ಉತ್ಸಾಹದಿಂದ ಮುಂದೆ ಸಾಗಿದರು. ಅಕಸ್ಮಾತ್ ಪ್ರಳಯಕಾಲದ ಮೇಘಗರ್ಜನೆಯಂಥ ಗರ್ಜನೆಯೊಡನೆ ಕಾನಪುರ ನಗರವು ಭೂಗತವಾಗುವಂತೆ ನಡುಗಿತು. ಹೊಗೆಯಿಂದಲೂ ಧೂಳಿಯಿಂದಲೂ ಆಕಾಶವು ಮುಚ್ಚಿಹೋಯಿತು. ವಿಚಾರಾಂತ್ಯದಲ್ಲಿ ಪೇಶವೆಯು ರಣಭೂಮಿಯಿಂದ ಓಡಿಹೋಗುವಾಗ ಕಾನಪುರದಲ್ಲಿದ್ದ ಮದ್ದು ಗುಂಡುಗಳ ಸಂಗ್ರಹವು ಹಗೆಗಳ ವಶವಾಗಬಾರದೆಂದು ಅದಕ್ಕೆ ಕೊಳ್ಳಿ ಕೊಟ್ಟು ಹಾರಿಸಲು ಅಪ್ಪಣೆಮಾಡಿದ್ದನೆಂದು ಗೊತ್ತಾಯಿತು.

ವಿಜಯೋತ್ಸಾಹದಿಂದ ಉನ್ಮತ್ತರಾದ ಬ್ರಿಟಿಷರು ಕಾನಪುರವನ್ನು ಸೇರಿದರು. ಆದರೆ ಪರಕ್ಷಣದಲ್ಲಿಯೇ ಅವರ ಆನಂದವೆಲ್ಲ ಅಳಿದು ಹೋಯಿತು; ಅವರ ಶ್ರಮವೆಲ್ಲ ವ್ಯರ್ಥವಾಗಿ ಹೋಯಿತು. ಯಾರನ್ನು ಉಳಿಸಿಕೊಳ್ಳಲು ಇಷ್ಟು ಕಷ್ಟಸಹನೆಮಾಡಿ ಇಷ್ಟು ಪರಾಕ್ರಮದಿಂದ ಹೋರಾಡಿ ವಿಜಯಶಾಲಿಗಳಾಗಿ ಬಂದಿದ್ದರೋ ಅವರೆಲ್ಲರೂ ಈ ಮೊದಲೇ ಪರಲೋಕಕ್ಕೆ ಸಾಗಿಹೋಗಿದ್ದರು. ನೀಚತನದ ಕೊಲೆಯ ವಾರ್ತೆಯನ್ನು ತಿಳಿದು ಬ್ರಿಟಿಷರು ಹುಚ್ಚರಂತಾದರು. ಅವರು ಕಾನಪುರದಲ್ಲಿ ಹತ್ತುಸಾವಿರ ಜನರ ಕೊಲೆಮಾಡಿದರೆಂದು ಹೇಳುವರು. * ಮೂರು ದಿನಗಳವರೆಗೆ ಅವರು ನಡೆಯಿಸಿದ ಅತ್ಯಾಚಾರ ಕೊಲೆ ಸುಲಿಗೆಗಳನ್ನು ಕಂಡು ಹ್ಯಾವಲಾಕ್ ಸಾಹೇಬನು ಕಡುತರವಾದ ಶಾಸನಭಯವನ್ನು ಸಾರಬೇಕಾಯಿತು.

ಸ್ವಜನರ ಕೊಲೆಯಿಂದ ಚಿಂತಾಗ್ರಸ್ತನಾದ ಹ್ಯಾವಲಾಕ್ ಸಾಹೇಬನು ತನ್ನ ಶಿಬಿರದಲ್ಲಿ ಕುಳಿತಿದ್ದಾಗ ಒಬ್ಬ ವೃದ್ಧ ಸುಭೇದಾರನು ಅಲ್ಲಿಗೆ ಬಂದು ಗುಪ್ತ ಸಂದೇಶವೊಂದನ್ನು ಒಪ್ಪಿಸಿದನು. ಅದನ್ನು ಓದುವದರಿಂದ ಆತನು ಸುಭೇದಾರ ಅಂಗದನೆಂದೂ ಲಕನೌವಿನಲ್ಲಿ ಬ್ರಿಟಿಷರು ಕಡುತರ

* Martin Indian Empire Vo. II. P. 484.

ವಾದ ಮುತ್ತಿಗೆಯಲ್ಲಿ ಸಿಕ್ಕಿ ಕಷ್ಟಪಡುತ್ತಿರುವರೆಂದೂ ಸೇನಾಪತಿ ಲಾರೆನ್ಸ ಸಾಹೇಬನು ಗುಂಡುತಾಗಿ ಮರಣಹೊಂದಿದನೆಂದೂ ಪ್ರತಿದಿನ ಬಹುಜನ ಸೈನಿಕರು ರಣಭೂಮಿಯಲ್ಲಿಯೂ ಬೇನೆ ಬೇಸರಿಕೆಗಳಿಂದಲೂ ಮರಣಾ ಹೊಂದುತ್ತಲಿರುವರೆಂದೂ ತಿಳಿಯಿತು. ಬಹು ಧೀರ ಪ್ರಕೃತಿಯ ಹ್ಯಾವ ಲಾಕ್ ಸಾಹೇಬನು ಕೂಡ ಮರ್ಮಾಹತನಾಗಿ ಕುಳಿತನು. ಅದೇ ಸಮ ಯಕ್ಕೆ ಇನ್ನೊಬ್ಬ ದೂತನು ಬಂದು ನಾನಾಸಾಹೇಬನು ಬ್ರಹ್ಮಾವರ್ತದಲ್ಲಿ ಐದುಸಾವಿರ ಸೈನ್ಯವನ್ನೂ ೪೫ ತೋಫುಗಳನ್ನೂ ಸಂಗ್ರಹಿಸಿಕೊಂಡು ಹಗೆ ಗಳನ್ನು ಎದುರಿಸುವ ಸಿದ್ಧತೆಯಲ್ಲಿರುವನೆಂಬ ದುರ್ವಾರ್ತೆಯನ್ನು ತಂದನು. ಈ ರೀತಿ ಒಂದರ ಮೇಲೊಂದರಂತೆ ಅನೇಕ ಆಘಾತಗಳಿಂದ ಹ್ಯಾವಲಾಕ್ ಸಾಹೇಬನ ಅಂತಃಕರಣವು ಬತ್ತಿಹೋಯಿತು. ಮೇಘಗಳ ಆಘಾತದಿಂದ ವಿದ್ಯುಜ್ವಾಲೆಯು ಮಿಂಚಿ ಹೊಳೆಯುವಂತೆ ಬಾಹ್ಯದ ಆಘಾತಗಳಿಂದ ಜರ್ಜರಿತವಾದ ಆತನ ಹೃದ್ಗತ ವೀರವೃತ್ತಿಯು ತಟ್ಟನೆ ಝುಗಝುಗಿಸಿ ಬೆಳ ಗಿತು. "ವಿಪತ್ತಿನ ಸಂಗಡಲೇ ಇನ್ನಷ್ಟು ವಿಪತ್ತು ಒದಗಿ ಬರಲಿ. ನಾವು ಮಾತ್ರ ಕೈಯಲ್ಲಿ ಖಡ್ಗ ಹಿಡಿದುಕೊಂಡೇ ಪ್ರಾಣಬಿಡುವೆವು." ಎಂಬ ವೀರೋದ್ಗಾರವು ಆತನ ಮುಖದಿಂದ ಹೊರಹೊಮ್ಮಿತು.

ಚಂಚಲವಾದ ಈ ಸೃಷ್ಟಿಯಲ್ಲಿ ಯಾವುದೂ ಸ್ಥಿರವಲ್ಲ. ಮರುದಿನ ಬೆಳಗಾಗುವಷ್ಟರಲ್ಲಿ ರಾತ್ರಿಯ ಗಾಢಾಂಧಕಾರದೊಡನೆ ಹ್ಯಾವಲಾಕ್ ಸಾಹೇಬನ ಮನಸ್ಸಿನ ದುಃಖಾಂಧಕಾರವೂ ಹರಿದು ಹೋಯಿತು. ಆನಂದ ದಾಯಕವಾದ ಉಜ್ವಲ ಸೂರ್ಯನಾರಾಯಣನ ಆಗಮನದೊಡನೆ ಬ್ರಹ್ಮಾ ವರ್ತದಿಂದ ನಾನಾಸಾಹೇಬನ ಪಲಾಯನ ವಾರ್ತೆಯು ಬಂದಿತು.

ದಂಗೆಗಾರ ಸೈನಿಕರಲ್ಲಿಯೂ ಅವರ ಚಾಲಕರಲ್ಲಿಯೂ ಇನ್ನೊಂದು ಗುರುತರವಾದ ದೋಷವಿದ್ದಿತು. ಯಾವುದಾದರೊಂದು ಆಕಸ್ಮಿಕ ಘಟನೆ ಯಿಂದ ಒಮ್ಮೆ ಪರಾಜಯವಾದರೆ ಅದನ್ನು ಅಲ್ಲಿಯೇ ಮರೆತುಬಿಟ್ಟು ಮತ್ತೆ ಯುದ್ಧಕ್ಕೆ ಸಿದ್ಧರಾಗುವುದು ಹಲವು ಸಾರೆ ಅತ್ಯವಶ್ಯವೆನಿಸುವುದು. ಹ್ಯಾವಲಾಕ್ ಸಾಹೇಬನು ಆಲೋಚಿಸಿದ್ದಂತೆ ಮರುದಿನವೇ ಪೇಶವೆಯು ಮತ್ತೆ ಯುದ್ಧವನ್ನು ಹೂಡಿದ್ದರೆ ಅದರ ಪರಿಣಾಮವೇನಾಗುತ್ತಿದ್ದಿತೋ ಹೇಳಲಾಗುವುದಿಲ್ಲ. ಆದರೆ ಅಂತಹ ಹಿಡಿತವು ಅವನಲ್ಲಿದ್ದಿಲ್ಲ.

ಪೇಶವೆಯು ಬ್ರಹ್ಮಾವರ್ತದಿಂದ ಓಡಿಹೋದ ಸುದ್ದಿಯನ್ನು ಕೇಳಿ ಹ್ಯಾವಲಾಕ್ ಸಾಹೇಬನು ಮೇಜರ್ ಸ್ಟೀಫನ್ಸನ್ನನನ್ನು ಕೆಲವು ಸೈನ್ಯದೊಡನೆ ಅಲ್ಲಿಗೆ ಕಳುಹಿಸಿದನು. ನಗರವು ನಿರ್ಜನವಾಗಿದ್ದಿತು. ಸೈನಿಕರು ನಿರಾಪದವಾಗಿ ನಗರವನ್ನು ವಶಮಾಡಿಕೊಂಡರು. ಪೇಶವೆಯ ಅರಮನೆಯು ಕಲಶ ಕನ್ನಡಿಗಳಿಂದಲೂ ಬಹುವಿಧದ ಭೋಗ್ಯ ವಸ್ತುಗಳಿಂದಲೂ ಅಲಂಕೃತವಾಗಿದ್ದಿತು. ಆದರೆ ಅಲ್ಲಿ ಮನುಷ್ಯ ಸಂಚಾರವೇ ಇರಲಿಲ್ಲ. ಬೆಕ್ಕು ನಾಯಿಗಳೂ ಶುಕ ಸಾರಿಕೆಗಳೂ ಹಸಿದು ನೀರಡಿಸಿ ಆರ್ತನಾದ ಮಾಡುತ್ತಲಿದ್ದುವು. ಒಂದು ಆನೆಯು ಕಟ್ಟಿದ ಸರಪಳಿಯನ್ನು ಹರಿದುಕೊಂಡು ತನ್ನ ಆಹಾರವನ್ನು ಹುಡುಕುತ್ತ ಅಲೆದಾಡುತ್ತಿದ್ದಿತು ಅಶ್ವಾಲಯದಲ್ಲಿ ಕಟ್ಟಿದ ಸುಂದರವಾದ ಕುದುರೆಗಳು ಹಸಿವು ನೀರಡಿಕೆಗಳಿಂದ ಬಾಯ್ಬಿಡುತ್ತ ಖುರಗಳನ್ನು ದಡದಡ ಧ್ವನಿಮಾಡುತ್ತ ಹೇಕರಿಸುತ್ತ ನಿಂತಿದ್ದುವು. ಅವುಗಳ ಮುಂಗಡೆಯಲ್ಲಿ ತುಸ ದೂರದಲ್ಲಿ ಕಾಳಿನ ಚೀಲಗಳಿದ್ದುವು. ಆದರೆ ಅವನ್ನು ತಂದು ಕಟ್ಟಿದ್ದ ಕುದುರೆಗಳಿಗೆ ಕೊಡುವವರು ಯಾರೂ ಇರಲಿಲ್ಲವಾದುದರಿಂದ ಅವು ಆ ಚೀಲಗಳನ್ನು ಬಹು ಕಾತರ ದೃಷ್ಟಿಯಿಂದ ನೋಡುತ್ತ ನಿಂತಿದ್ದುವು. ಗೋಶಾಲೆಯಲ್ಲಿಯೂ ಇದೇ ಅವಸ್ಥೆ. ಕರುಗಳು ಹಸಿದು 'ಅಂಬಾ' ಎಂದು ಕೂಗುತ್ತಿದ್ದುವು. ಗೋವುಗಳು ಕೆಚ್ಚಲಲ್ಲಿ ಹಾಲು ತೊರೆದುದರಿಂದಲೂ ಕರುಗಳ ಸಂಕಟವನ್ನು ನೋಡಿಯೂ ಹಸಿವು ನೀರಡಿಕೆಗಳಿಂದಲೂ ಕಷ್ಟಪಡುತ್ತಿದ್ದುವು. ಸ್ಟೀಫನ್‌ಸನ್ ಸಾಹೇಬನು ಮೊದಲು ಈ ಎಲ್ಲ ಪ್ರಾಣಿಗಳಿಗೆ ಆಹಾರವನ್ನು ಪೂರೈಸಿ ಅವುಗಳ ಕಷ್ಟ ನಿವಾರಣೆ ಮಾಡಬೇಕೆಂದು ಆಜ್ಞಾಪಿಸಿದನು. ಬಳಿಕ ಅವನ್ನೆಲ್ಲ ಕಾನಪುರಕ್ಕೆ ಕಳುಹುವ ವಿಚಾರ ನಡೆಯಿತು. ಪೇಶವೆಯ ಅರಮನೆಯಲ್ಲಿಯ ಭೋಗ್ಯ ವಸ್ತುಗಳೆಲ್ಲವನ್ನೂ ಸೈನಿಕರು ಮನಸ್ಸಿಗೆ ಬಂದಂತೆ ಸೂರೆಮಾಡಿಕೊಂಡರು. ಆ ಬಳಿಕ ಎದುರಿಗೆ ತೋಪುಗಳನ್ನು ಹೂಡಿ ದಡದಡನೆ ಹಾರಿಸಿ ಅರಮನೆಯ ಬಹುಭಾಗವನ್ನು ವಿಧ್ವಂಸ ಮಾಡಿದರು. ತೋಪು ಮುಂತಾದ ತಮಗೆ ಬೇಕಾದ ಯುದ್ಧೋಪಕರಣಗಳನ್ನು ತೆಗೆದುಕೊಂಡು ಉಳಿದಿದ್ದ ಅಸ್ತ್ರಾಗಾರಕ್ಕೆ ಕೊಳ್ಳಿಕೊಟ್ಟು ಹಾರಿಸಿಬಿಟ್ಟರು.

---

# ಮೂರನೆಯ ಪರಿಚ್ಛೇದ

## ಹ್ಯಾವಲಾಕ್ ಸಾಹೇಬನ ವಿಜಯ

"Success was bought at a heavy sacrifice of life. But Havelock's veterans enjoyed something even greater than the glory of victory. —*Forrest.*



ಬ್ರಿಟಿಷ ಸೇನಾಪತಿ ಹ್ಯಾವಲಾಕ್ ಸಾಹೇಬನು ವಿಜಯಶಾಲಿಯಾದನು; ಕಾನಪುರದಲ್ಲಿ ಬ್ರಿಟಿಷರ ಧ್ವಜವು ಮೊದಲಿನಂತೆ ಮೆರೆಯುತೊಡಗಿತು. ಉನ್ಮತ್ತರಾಗಿ ಅತ್ಯಾಚಾರಗಳಲ್ಲಿ ತೊಡಗಿದ ಬ್ರಿಟಿಷ ಸೈನಿಕರು ಸೇನಾಪತಿಯ ಉಗ್ರವಾದ ಶಾಸನಭಯದಿಂದ ಮತ್ತೆ ಶಾಂತರಾದರು. ಕೊಲೆ ಸುಲಿಗೆಗಳು ನಿಂತುವು. ವಿರೋಧಿಗಳು ಪರಾಜಿತರಾಗಿ ದಾರಿಕಂಡಕಡೆಗೆ ಓಡಿಹೋದರು. ಆಬಳಿಕ ದೂರದೃಷ್ಟಿಯ ಹ್ಯಾವಲಾಕ್ ಸಾಹೇಬನು ಲಕನೌವಿಗೆ ಹೊರಡುವುದಕ್ಕಿಂತ ಮೊದಲು ಕಾನಪುರವನ್ನು ಭದ್ರಪಡಿಸಬೇಕೆಂದೂ ದಂಗೆಗಾರರು ಮರಳಿಬಂದು ಯುದ್ಧವನ್ನು ಹೂಡಿದರೆ ಒಂದು ಸುರಕ್ಷಿತವಾದ ಸ್ಥಳವು ಆವಶ್ಯಕವೆಂದೂ ಭಾವಿಸಿ ಅಲ್ಲೊಂದು ನೂತನ ದುರ್ಗನಿರ್ಮಾಣ ಕಾರ್ಯವನ್ನು ಪ್ರಾರಂಭಿಸಿದನು. ಒಂದು ಸಾವಿರ ಕೂಲಿಕಾರರು ಅಹರ್ನಿಶ ಕೆಲಸಮಾಡತೊಡಗಿದರು. ಏಳು ಅಡಿ ಎತ್ತರ, ಹದಿನೆಂಟು ಅಡಿ ಅಗಲ, ಅರ್ಧ ಮೈಲು ಪರಿಘವುಳ್ಳ ದುರ್ಗವು ಸಿದ್ಧವಾಯಿತು. ಅದರ ಮೇಲೆ ಅಲ್ಲಲ್ಲಿಗೆ ತೋಫುಗಳನ್ನು ಹೂಡಿ ಭದ್ರಪಡಿಸುವುದೂ ಆಯಿತು. ಬಳಿಕ ಹ್ಯಾವಲಾಕ್ ಸಾಹೇಬನು ಕಾನಪುರದ ರಕ್ಷಣೆಯ ಕಾರ್ಯವನ್ನು ನೀಲಸಾಹೇಬನಿಗೆ ಒಪ್ಪಿಸಿ ತನ್ನ ಮುಖ್ಯ ಕರ್ತವ್ಯವಾದ ಲಕನೌವಿನಲ್ಲಿ ಸೆರೆಸಿಕ್ಕಿದವರಿಗೆ ಸಹಾಯವನ್ನೊದಗಿಸಲು ಪ್ರಬಲವಾದ ಸೇನೆಯೊಡನೆ ಹೊರಟನು.

ಕಾನಪುರದ ರಕ್ಷಣೆಗಾಗಿ ಉಳಿದಿದ್ದ ನೀಲಸಾಹೇಬನು ಕೊಲೆಗೂ

ದಂಗೆಗೂ ಕಾರಣವಾದ ಅಪರಾಧಿಗಳನ್ನು ಕಂಡು ಹಿಡಿದು ಶಿಕ್ಷಿಸುವ ಕಾರ್ಯವನ್ನು ಕೈಕೊಂಡನು. ಮೊದಲೇ ಉಗ್ರಮನೋಭಾವನೆಯ ಆತನು ಸ್ವಜನರ ಕೊಲೆಯಿಂದ ಇನ್ನಷ್ಟು ಉಗ್ರನಾಗಿದ್ದನು. ಜನತೆಯಲ್ಲಿ ದಾರುಣ ವಾದ ಭೀತಿಯನ್ನು ಹುಟ್ಟಿಸಿ ಬ್ರಿಟಿಷರ ಅಧಿಕಾರದ ದರ್ಪವನ್ನು ಸ್ಥಾಪಿಸ ಬೇಕೆಂಬುದು ಆತನ ಮುಖ್ಯ ಉದ್ದೇಶ. ಅದಕ್ಕನುಗುಣವಾಗಿ ಆತನು ಕಾನ ಪುರದಲ್ಲಿಯೂ ಕಾರ್ಯವನ್ನಾರಂಭಿಸಿದನು. ಬೀಬಿಗೃಹದ ಬಳಿಯಲ್ಲಿದ್ದ ಬಾವಿಯಲ್ಲಿ ಕೊಲೆಗೀಡಾದ ಎಲ್ಲರ ಶವಗಳನ್ನು ಎಸೆದು ಮೇಲೆ ಮಣ್ಣು ಮುಚ್ಚಿದ್ದರು. ಆದರೆ ಆ ಮನೆಯನ್ನು ಇನ್ನೂ ತೊಳೆಸಿ ಉಡುಗಿಸಿರಲಿಲ್ಲ. ನೀಲಸಾಹೇಬನು ಕೊಲೆಗೆ ಕಾರಣರಾದವರೆಂದು ಹಿಡಿಸಿತಂದವರು ಈ ಕೆಲಸ ವನ್ನು ಮಾಡಬೇಕಾಯಿತು. ಮೊದಲು ಕಾನಪುರದ ಸೈನ್ಯದಲ್ಲಿ ಕೆಲಸಮಾಡು ತ್ತಿದ್ದ ಒಬ್ಬ ಬ್ರಾಹ್ಮಣ ಸುಭೇದಾರನು ದೈವಯೋಗದಿಂದ ನೀಲಸಾಹೇಬ ನಿಗೆ ಸಿಕ್ಕಿದನು. ಸುಭೇದಾರನು ತಾನು ನಿರಪರಾಧಿಯೆಂದೂ ದಂಗೆಗೆ ಆರಂಭವಾದೊಡನೆಯೇ ತಾನು ದಂಡುಬಿಟ್ಟು ಹೋದವನೆಂದೂ ಬಹುಪರಿ ಯಿಂದ ಹೇಳಿಕೊಂಡರೂ ಏನೂ ಪ್ರಯೋಜನವಾಗಲಿಲ್ಲ. ಆತನು ನಿರುಪಾಯನಾಗಿ ಸಾಹೇಬರು ಹೇಳಿದುದನ್ನೆಲ್ಲ ಮಾಡಬೇಕಾಯಿತು. ಆ ಮೇಲೆ ಆತನಿಗೆ ದೇಹಾಂತ ಶಿಕ್ಷೆಯನ್ನು ವಿಧಿಸಿದರು. ಆತನ ಶವವನ್ನು ರಾಜಮಾರ್ಗದಲ್ಲಿ ತೋರಣಕ್ಕೆ ತೂಗಿಬಿಟ್ಟರು.

ಮರುದಿನ ಇನ್ನೂ ಸೂರ್ಯೋದಯವಾಗಿರಲಿಲ್ಲ. ಮೂಡಣದಿಕ್ಕು ಕೆಂಪಾಗಿ ಕತ್ತಲೆ ಹರಿದು ಬೆಳಗಾಗುತ್ತಿದ್ದಿತು. ಕಾನಪುರದ ನೆರೆಯಲ್ಲಿದ್ದ ಒಂದು ಹಳ್ಳಿಯಲ್ಲಿ ಯುರೋಪಿಯನ್ ಸೈನಿಕರು ಬಂದುದನ್ನು ಕಂಡು ಹೆಂಗುಸರೂ ಹುಡುಗರೂ ಗಾಬರಿಯಾಗಿ ಓಡಿ ಮನೆಯನ್ನು ಸೇರಿ ದಡ ದಡನೆ ಬಾಗಿಲು ಮುಚ್ಚಿಕೊಂಡರು. ಕಾನಪುರದ ನೆರೆಹೊರೆಯ ಹಳ್ಳಿಗಳಲ್ಲಿ ಆ ಕಾಲದಲ್ಲಿ ಗಂಡುಸರೊಬ್ಬರೂ ಕಾಣಿಸುತ್ತಿರಲಿಲ್ಲ. ಸೈನಿಕರು ಒಬ್ಬ ಮಹ ಮ್ಮದೀಯನ ಮನೆಯಮುಂದೆ ನಿಂತರು. ಆತನು ಮೊದಲು ಕಾನಪುರದಲ್ಲಿ ಒಬ್ಬ ದಿವಾಣೀ ಅಧಿಕಾರಿಯಾಗಿದ್ದನಂತೆ. ಸೈನಿಕರು ಆ ಮನೆಯ ಬಾಗಿಲು ಮುರಿದು ಒಳಗೆ ಸೇರಿದರು. ಮನೆಯ ಯಜಮಾನನು ಗಾಬರಿಯಾಗಿ ಇದಿರಿಗೆ ಬಂದೊಡನೆ ಆತನನ್ನು ಹಿಡಿದು ಕೈಗೆ ಸಂಕೋಲೆಗಳನ್ನು ತೊಡಿಸಿ

ಅತಿನಿಷ್ಠುರವಾಗಿ ಬೈಯುತ್ತ ಹೊರಗೆ ಎಳದುತಂದರು. ಅವರು ತಿರುಗಿ ನೋಡಿದಾಗ ಬಾಗಿಲಮರೆಗೆ ಅತ್ಯಂತ ಸುಂದರಿಯಾದ ತರುಣಿಯೊಬ್ಬಳು ಕಣ್ಣುಗಳಲ್ಲಿ ಕಿಡಿಗಳನ್ನು ಕಾರುತ್ತ ತಮ್ಮನ್ನೇ ನೋಡುತ್ತ ನಿಂತಿರುವು ದನ್ನು ಕಂಡರು. ಆಕೆಯ ವೀರದರ್ಪವನ್ನೂ ಕೈಗೆ ಸಿಕ್ಕಿದರೆ ಹರಿದುತಿನ್ನುವೆ ನೆಂಬಂತಹ ಉಗ್ರವಾದ ಮುಖಲಕ್ಷಣಗಳನ್ನೂ ಕಂಡು, ಆಕೆಯ ಮೋಹಕ ವಾದ ರೂಪವನ್ನೂ ಲಾವಣ್ಯವನ್ನೂ ಕಂಡಾಗ ಹುಟ್ಟಿದ ಅವರ ಮನೋ ವಿಕಾರವು ಬಯಲಾಯಿತು. ಅವ್ರದೋ ಒಂದು ವಿಧವಾದ ಭಾವನೆಯಿಂದ ಅವರು ತಿರುತಿರುಗಿ ನೋಡುತ್ತ ಮುಂದೆಸಾಗಿದರು. ಹಳ್ಳಿಯು ಪ್ರಾಣಿ ಸಂಚಾರವಿಲ್ಲದ ನಿರ್ಜನಪ್ರದೇಶದಂತೆ ತೋರುತ್ತಿದ್ದಿತು.

ಸೈನಿಕರು ಅಪರಾಧಿಯೆನ್ನುವ ಆ ಖಾಜಾ ಹುಸೇನನ್ನು ನೀಲ ಸಾಹೇಬನ ಮುಂದೆ ತಂದು ನಿಲ್ಲಿಸಿದರು. ವಿಚಾರಣೆಯ ಕೆಲಸವೂ ಮುಗಿದು ಹೋಯಿತು. ಖಾಜಾಹುಸೇನನಲ್ಲಿ ಮಾತ್ಸರ್ಯವುಳ್ಳ ಮುಹಮ್ಮದೀಯ ನೊಬ್ಬನು ಸಾಕ್ಷಿಯಾಗಿದ್ದನು. ಆರೋಪಿತನು ಹೇಳುವುದನ್ನೆಲ್ಲ ಕೇಳಿ ಕೊಳ್ಳಲು ಸಾಹೇಬನಿಗೆ ಅವಕಾಶವಿರಲಿಲ್ಲ. ಈತನು ಮುಹಮ್ಮದೀಯನಾದು ದರಿಂದ ಬೀಬಿಗೃಹವನ್ನು ತೊಳೆದು ಉಡುಗಿದರೆ ಸಾಲದೆಂದೂ, ಆ ಸ್ಥಳವನ್ನು ನಾಲಿಗೆಯಿಂದ ನೆಕ್ಕಬೇಕೆಂದೂ ಸಾಹೇಬನ ಅಪ್ಪಣೆಯಾಯಿತು. ಖಾಜಾ ಹುಸೇನನು ಬಹು ಕಷ್ಟದಿಂದ ಶಿಕ್ಷೆಯನ್ನು ಅನುಭವಿಸಬೇಕಾಯಿತು. ನೀಲಸಾಹೇಬನು ಹೊರಗೆನಿಂತು ಇದನ್ನೆಲ್ಲ ನೋಡುತ್ತಿದ್ದನು. 'ದಢಂ' ಎಂದು ತುಬಾಕಿಹಾರಿದ ಧ್ವನಿಯಾಯಿತು. ಸುಯ್ಯೆನ್ನುತ್ತ ಒಂದು ಗುಂಡು ನೀಲಸಾಹೇಬನ ಬಲದ ಹೆಗಲ ಮೇಲೆ ಕಿವಿಯ ಸಮೀಪದಲ್ಲಿ ಹಾಯ್ದು ಹೋಗಿ ಬೀಬಿ ಗೃಹದ ಗೋಡೆಗೆ ಬಡಿಯಿತು. ಆತನು ತಿರುಗಿ ರಾಜಮಾರ್ಗದ ಕಡೆಗೆ ನೋಡಿದಾಗ ಅಶ್ವಾರೋಹಿಯೊಬ್ಬನು ಧಾವಿಸಿ ನಡೆದನು. "ಇಂದಿಲ್ಲ ನಾಳೆ ನಿನ್ನ ಪ್ರಾಣ ತೆಗೆದುಕೊಂಡರೇ ನನ್ನ ಹೆಸರು ಮೆಹೆರ್‌ಜಾನ್" ಎಂದು ಕೂಗಿ ಹೇಳಿದ ಶಬ್ದಗಳು ಮಂದಮಂದವಾಗಿ ನೀಲಸಾಹೇಬನಿಗೆ ಕೇಳಿಸಿ ದುವು. ಖಾಜಾ ಹುಸೇನನ್ನು ಹಿಡಿದು ತರುವುದಕ್ಕೆ ಹೋಗಿದ್ದ ಸೈನಿಕರು ಈ ಘಟನೆಯನ್ನು ಕೇಳಿದಾಗ ಆತನ ಮನೆಯಲ್ಲಿ ನಿಂತಿದ್ದ ವೀರರಮಣಿಯ ಚಿತ್ರವು ಅವರ ಕಣ್ಣಿಗೆ ಕಟ್ಟಿದಂತಾಯಿತು. ಆದರೆ ಈ ಅಶ್ವಾರೋಹಿಯು

ಗಂಡುಸೆಂಬುದರಿಂದ ಅವರ ಸಂಶಯದ ನಿವೃತ್ತಿಯಾಗಲಿಲ್ಲ. ಕೊನೆಗೆ ಖಾಜಾಹುಸೇನನಿಗೆ ಮರಣದಂಡನೆಯು ವಿಧಿಸಲ್ಪಟ್ಟಿತು. ಇದೇ ರೀತಿಯಾಗಿ ಬಹುಜನರು ನೀಲಸಾಹೇಬನ ಉಗ್ರಶಾಸನಕ್ಕೆ ಬಲಿಯಾಗಬೇಕಾಯಿತು.

ಒಂದು ಸಾವಿರ ಯುರೋಪಿಯನರು ಮೂರುನೂರು ಜನ ಶೀಖರು ಇವರೊಡನೆ ಲಕನೌವಿಗೆ ಹೊರಟ ಹ್ಯಾವಲಾಕ್ ಸಾಹೇಬನು ಗಂಗಾನದಿಯನ್ನು ದಾಟಿ ಅಯೋಧ್ಯಾಪ್ರಾಂತವನ್ನು ಸೇರಿದೊಡನೆ ದಾರಿಯನ್ನು ಅಡ್ಡಗಟ್ಟಿದ ಬಹುಸಂಖ್ಯಾಕರಾದ ದಂಗೆಗಾರ ಸೈನ್ಯದೊಡನೆ ಯುದ್ಧಮಾಡಬೇಕಾಯಿತು. ಕಾನಪುರದಿಂದ ೨೫ ಮೈಲು ದೂರದಲ್ಲಿದ್ದ ಮಂಗಳವಾರವೆಂಬಲ್ಲಿ ಮುಖ್ಯ ಶಿಬಿರವನ್ನಿಟ್ಟು ಹಗೆಗಳ ಸಂಗಡ ಕದನವಾಡುತ್ತ ಮುಂದಿನ ಲಕನೌವಿನ ಮಾರ್ಗವನ್ನು ಸುಗಮವಾಗಿ ಮಾಡಿಕೊಳ್ಳುವುದು ಆತನ ಉದ್ದೇಶವಾಗಿದ್ದಿತು. ನಸೀರಗಂಜದವರೆಗೆ ಹೋದೊಡನೆ ಹಗೆಗಳ ಕೂಡ ಕೈಗೆ ಕೈಹತ್ತಿ ಕಾದಬೇಕಾಯಿತು. ಆ ಯುದ್ಧದಲ್ಲಿ ಜಯಶಾಲಿಯಾದರೂ ಮುಂದೆ ಸಾಗುವುದು ಆತನಿಗೆ ಅಸಾಧ್ಯವೆನಿಸಿತು. ಆದುದರಿಂದ ತಿರುಗಿ ಮಂಗಳವಾರಕ್ಕೆ ಬಂದನು. ಇದೇರೀತಿ ಮೂರುಸಾರೆ ನಸೀರಗಂಜದವರೆಗೆ ಹೋಗಿ ಯುದ್ಧವಾಡಿ ಶತ್ರುಗಳನ್ನು ಜಯಿಸಿದರೂ ಮುಂದಿನ ಮಾರ್ಗವು ಸುಗಮವಾಗುವಂತೆ ತೋರಲಿಲ್ಲ. ಇಂತಿರುವಾಗ ಹಿಂಭಾಗದಲ್ಲಿ ನಾನಾಸಾಹೇಬನ ದಂಗೆಗಾರ ಸೈನ್ಯವು ಬ್ರಹ್ಮಾವರ್ತದಲ್ಲಿ ಯುದ್ಧದ ಸಿದ್ಧತೆ ಮಾಡಿಕೊಂಡ ಸುದ್ದಿ ಬಂದಿತು. ಅವರು ಮುಂದೆ ಬಂದುಬಿಟ್ಟರೆ ಹ್ಯಾವಲಾಕ್ ಸಾಹೇಬನಿಗೆ ಕಾನಪುರದ ಸಂಬಂಧವೂ ಕಡಿದುಹೋಗುತ್ತಿದ್ದಿತು. ಗ್ವಾಲ್ಹೇರಿಯಿಂದ ಹೊರಟ ಯುದ್ಧಕಲಾವಿಶಾರದವಾದ ಸೈನ್ಯವು ತಾತ್ಯಾಟೋಪಿಯ ಮೇಲ್ವಿಚಾರಣೆಯಲ್ಲಿ ಕಾಲ್ಪಿಯಲ್ಲಿ ಒಂದುಗೂಡಿ ಯುದ್ಧಕ್ಕೆ ಅಣಿಯಾಗಿ ಹೊರಟಿರುವುದೆಂದೂ ಗೊತ್ತಾಯಿತು. ಹ್ಯಾವಲಾಕ್ ಸಾಹೇಬನ ಸೈನ್ಯದಲ್ಲಿ ಮಾರಿಕಾ ಅತಿಸಾರ ಬೇನೆಗಳು ಆರಂಭವಾದುವು. ಅತಿವೃಷ್ಟಿಯಿಂದ ಸಣ್ಣಪುಟ್ಟ ಹಳ್ಳಗಳೂ ಮಹಾನದಿಗಳಂತಾಗಿ ಆತನ ದಾರಿಯನ್ನು ಅಡ್ಡಗಟ್ಟಿ ನಿಂತಿದ್ದುವು. ಇಂತಹ ಪರಿಸ್ಥಿತಿಯಲ್ಲಿ ಮುಂದೆ ಸಾಗುವುದು ಅನುಚಿತವೆಂದು ಆತನು ನಿಶ್ಚಯಿಸಿದನು. ಮುಂದಿಟ್ಟ ಹಜ್ಜೆ

ಯನ್ನು ಹಿಂದಿಡುವುದು ಯುದ್ಧಶಾಸ್ತ್ರದ ಸಾಮಾನ್ಯ ನಿಯಮಕ್ಕೆ ವಿರೋಧ ವಾಗಿದ್ದಿತು. ಅನುಭವಶಾಲಿಯಾದ ದೂರದೃಷ್ಟಿಯ ಹ್ಯಾವಲಾಕ್ ಸಾಹೇಬನು ಕೇವಲ ಕ್ಷಣಿಕ ಸ್ಫೂರ್ತಿಯಿಂದ ದುಡುಕಿ ಕೆಲಸಮಾಡುವ ಸ್ವಭಾವ ದವನಾಗಿರಲಿಲ್ಲ. ಆದುದರಿಂದ ಆತನು ಸಂಪೂರ್ಣ ಆಲೋಚನೆಮಾಡಿ ತಿರುಗಿ ಬಂದು ಬ್ರಹ್ಮಾವರ್ತದಲ್ಲಿ ಕೂಡಿದ ನಾನಾಸಾಹೇಬನ ಸೈನ್ಯವನ್ನು ಚೆದರಿಸುವ ಕಾರ್ಯದಲ್ಲಿ ತೊಡಗಿದನು.

ಅಗಸ್ಟ ತಿಂಗಳ ೧೬ನೆಯ ತಾರೀಖಿನ ದಿನ ಹ್ಯಾವಲಾಕ್‌ಸಾಹೇಬನು ೭೫೦ ಜನ ಯುರೋಪಿಯನರನ್ನೂ ೨೫೦ ಜನ ಶೀಖರನ್ನೂ ಕೂಡಿಕೊಂಡು ಬ್ರಹ್ಮಾವರ್ತದ ಮೇಲೆ ಸಾಗಿಹೋದನು. ಬಿಸಿಲಿನ ಸಂತಾಪದಿಂದಲೂ ಸಣ್ಣದೊಡ್ಡ ಜಲಪ್ರವಾಹಗಳಿಂದಲೂ ಆತನ ಮಾರ್ಗವು ದುರ್ಗಮವಾಗಿ ದ್ದಿತು. ಪ್ರಾತಃಕಾಲದಿಂದ ಎಂಟು ತಾಸು ತಡೆಯಿಲ್ಲದೆ ಪ್ರವಾಸಮಾಡಿದ ಬಳಿಕ ಬ್ರಿಟಿಷ ಸೈನ್ಯವು ವಿಶಾಲವಾದೊಂದು ಬಯಲನ್ನು ಮುಟ್ಟಿತು. ಇದಿರಿಗೆ ಬೆಳೆದು ನಿಂತ ಕಬ್ಬಿನ ತೋಟವು ಸುತ್ತಲೂ ಎತ್ತರವಾಗಿ ಬೆಳೆದ ಔಡಲಗಿಡಗಳಿಂದ ಮನೋಹರವಾಗಿ ತೋರುತ್ತಿದ್ದಿತು. ಎಡಬಲಗಳಲ್ಲಿ ಎರಡು ಹಳ್ಳಿಗಳು; ನಡುವೆ ವೇಗವಾಗಿ ಹರಿಯುತ್ತಿದ್ದ ದಾಟಲಾಗದ ಎರಡು ಹಳ್ಳಗಳು; ಆದುದರಿಂದ ಬ್ರಿಟಿಷ ಸೈನ್ಯವು ಆ ಹಳ್ಳಗಳ ಕಿರಿಯಗಲದ ಸೇತುವೆಗಳನ್ನು ದಾಟಿಯೇ ಮುಂದೆ ಸಾಗಬೇಕಾಗಿದ್ದಿತು.

ಬ್ರಿಟಿಷ ಸೈನ್ಯವನ್ನು ಕಂಡೊಡನೆ ದಂಗೆಗಾರರು ಯುದ್ಧವನ್ನು ಆರಂಭಿಸಿದರು. ಎರಡೂ ಪಕ್ಷದವರು ಅಷ್ಟೇ ಕಡುಗಲಿತನದಿಂದ ಕಾದಿ ದರು. ಕೊನೆಗೆ ಬ್ರಿಟಿಷ ಸೈನಿಕರು ಅಡ್ಡದಾರಿಯನ್ನು ಹಿಡಿದು ಕಬ್ಬಿನ ತೋಟವನ್ನು ಹೊಕ್ಕು ಅತಿಸಾಹಸದಿಂದ ಹಗೆಗಳ ಹಿಮ್ಮಗ್ಗಲಿಗೆ ಹೋದರು. ೧೦ ನಿಮಿಷಗಳವರೆಗೆ ಘನಘೋರ ಯುದ್ಧವು ನಡೆಯಿತು. ಬ್ರಿಟಿಷರು ಹಗೆಗಳ ಎರಡು ತೋಫುಗಳನ್ನು ಸೆಳೆದುಕೊಂಡ ತರುವಾಯ ಅವರು ಹಿಮ್ಮೆಟ್ಟಿ ಬ್ರಹ್ಮಾವರ್ತದ ಊರನ್ನು ಹೊಕ್ಕರು. ಬ್ರಿಟಿಷ ಸೈನ್ಯವು ಅವರನ್ನು ಬೆನ್ನಟ್ಟಿ ಹೋಗಿ ಕಂಡಲ್ಲಿ ಕಡಿದು ಬಿಸುಟಿತು. ಹ್ಯಾವಲಾಕ್ ಸಾಹೇಬನು ಜಯಶಾಲಿಯಾದರೂ ಹಗೆಗಳ ಯುದ್ಧಕೌಶಲ್ಯವನ್ನೂ ಧೈರ್ಯ ಶೌರ್ಯಗಳನ್ನೂ ಒಪ್ಪಿಕೊಳ್ಳಬೇಕಾಯಿತು.

ಹೊರಟು ಹಾದಿಯಲ್ಲಿ ಅತ್ಯವಸರದಿಂದ ಪ್ರಯಾಣಮಾಡಿ ಕಾನಪುರಕ್ಕೆ ಬಂದನು; ಸೂರ್ಯಾಸ್ತದ ಸಮಯಕ್ಕೆ ಭಾಗೀರಥಿಯ ತೀರಕ್ಕೆ ಮುಟ್ಟಿದಾಗ ಸೇತುವೆಯು ಸರಿಯಾಗಿರುವುದನ್ನೂ ದಂಗೆಗಾರರು ಆ ಭಾಗದಲ್ಲಿ ಪ್ರತಿಬಂಧ ಮಾಡದಿರುವುದನ್ನೂ ಕಂಡು ಆನಂದದಿಂದ ಉಬ್ಬಿದನು. ತನ್ನ ಕೆಲವು ಜನ ಅನುಚರರೊಡನೆ ನದಿಯನ್ನು ದಾಟಿ ನೂತನನಿರ್ಮಿತ ದುರ್ಗಕ್ಕೆ ಹೋಗಿ ಅಲ್ಲಿಯ ಸೇನಾಧಿಕಾರಿಗಳೊಡನೆ ಮಾತಾಡಿ ಮುಂದಿನ ಯುದ್ಧದ ಕ್ರಮವನ್ನು ನಿರ್ಣಯಿಸಿಕೊಂಡು ತಿರುಗಿ ಬಂದನು. ದಂಗೆಗಾರ ಸೈನಿಕರಿಗೆ ಇದಾವ ಸಂಗತಿಯೂ ತಿಳಿಯದು. ದುರ್ದೈವ!

ಮರು ದಿನ ಬೆಳಗಾಗುವಷ್ಟರಲ್ಲಿ ಭಾಗೀರಥಿಯ ತೀರದಲ್ಲಿ ಬಹು ಸಂಖ್ಯಾಕವಾದ ಬ್ರಿಟಿಷ ಸೈನ್ಯದ ಶಿಬಿರವು ಸ್ಥಾಪಿತವಾಗಿದ್ದುದನ್ನು ಕಂಡು ತಾತ್ಯಾಟೋಪಿಯು ಆಶ್ಚರ್ಯಚಕಿತನಾದನು. ಆಗ ಗಂಗಾನದಿಯ ಸೇತುವೆಯನ್ನು ಮುರಿದುಬಿಡಬೇಕೆಂದು ಅವಸರದಿಂದ ತೋಫುಗಳನ್ನು ತರಿಸಿದನು. ಆದರೆ ಅಷ್ಟರಲ್ಲಿ ಬ್ರಿಟಿಷ ಸೈನಿಕರು ಯುದ್ಧವನ್ನು ಆರಂಭಿಸಿ ಸೇತುವೆಯನ್ನು ದಾಟಿ ಬರತೊಡಗಿದರು. ಕ್ಯಾಂಬೆಲ್ ಸಾಹೇಬನ ಸುಧಾರಿಸಿದ ತೋಫುಗಳು ಗ್ವಾಲ್ಹೇರಿಯ ಸೈನ್ಯದ ತೋಫುಗಳನ್ನು ನಿಲ್ಲಿಸಿದುವು. ಬ್ರಿಟಿಷ ಸೇನೆಯು ಸುರಕ್ಷಿತವಾಗಿ ನದಿಯನ್ನು ದಾಟಿ ಕಾನಪುರದ ನೂತನ ನಿರ್ಮಿತ ದುರ್ಗದಲ್ಲಿ ಸೇರಿಕೊಂಡಿತು.

ಗಂಗಾನದಿಗೂ ಕಾನಪುರಕ್ಕೂ ನಡುವಿರುವ ಎತ್ತರವಾದ ಪ್ರದೇಶದಲ್ಲಿ ಪೇಶವೆಯ ಶಿಬಿರವು ಸ್ಥಾಪಿತವಾಗಿದ್ದಿತು. ಕಾಲ್ಪಿಯ ಕಡೆಯ ರಾಜಮಾರ್ಗವು ಅವರ ಅಧೀನದಲ್ಲಿದ್ದಿತು. ಸೇನಾಪತಿ ತಾತ್ಯಾಟೋಪಿಯು ಸೈನ್ಯದಲ್ಲಿ ಅನೇಕ ವಿಭಾಗಗಳನ್ನು ಮಾಡಿ ಬೇರೆ ಬೇರೆ ಆಯಕಟ್ಟಿನ ಸ್ಥಳಗಳಲ್ಲಿ ನಿಲ್ಲಿಸಿದ್ದನು. ಕ್ಯಾಂಬೆಲ್ ಸಾಹೇಬನು ಅಂದೇ ಯುದ್ಧವನ್ನು ಪ್ರಾರಂಭಿಸಲಿಲ್ಲ. ಲಕನೌವಿನಿಂದ ಕರೆದುಕೊಂಡು ಬಂದ ಹೆಂಗುಸರು ಹುಡುಗರನ್ನೂ ಗಾಯಹೊಂದಿದವರನ್ನೂ ಸುರಕ್ಷಿತವಾದ ಸ್ಥಳಕ್ಕೆ ಕಳುಹುವುದು ಆತನ ಆದ್ಯ ಕರ್ತವ್ಯವಾಗಿದ್ದಿತು. ಮರುದಿನ ಇರುಳಿನ ಕಗ್ಗತ್ತಲೆಯಲ್ಲಿ ಅವರನ್ನೆಲ್ಲ ಹಡಗುಗಳಿಂದ ಅಲಹಾಬಾದಕ್ಕೆ ಕಳುಹಿದನು. ಡಿಸೆಂಬರ್ ತಿಂಗಳ ೬ನೆಯ ತಾರೀಖಿಗೆ ಪ್ರತ್ಯಕ್ಷ ಯುದ್ಧವು ಪ್ರಾರಂಭವಾಯಿತು. ಬ್ರಿಟಿಷ

ಸೈನ್ಯದಲ್ಲಿ ೫ ಸಾವಿರ ಪದಾತಿದಳವೂ ಆರುನೂರು ಅಶ್ವಾರೋಹಿಗಳೂ ೩೫ ತೋಫುಗಳೂ ಇದ್ದುವು. ಪೇಶವೆಯ ಸೈನ್ಯದಲ್ಲಿ ೨೫ಸಾವಿರ ಸೈನಿಕರೂ ೪೦ ತೋಫುಗಳೂ ಇದ್ದುವು. ತಾತ್ಯಾಟೋಪಿಯು ಮುಖ್ಯ ಸೇನಾಪತಿ ಯಾಗಿದ್ದು ನಾನಾಸಾಹೇಬನೂ ಬಾಳಾಸಾಹೇಬನೂ ಒಂದೊಂದು ಭಾಗದ ಸೇನಾಚಾಲಕರಾಗಿದ್ದರು. ಪ್ರಾತಃಕಾಲದಿಂದ ಸಾಯಂಕಾಲದ ವರೆಗೂ ಘನಘೋರ ಯುದ್ಧವು ನಡೆಯಿತು. ಕೊನೆಗೆ ತಾತ್ಯಾಟೋಪಿಯ ಸೈನ್ಯವು ಪರಾಜಿತವಾಯಿತು. ಪೀಲಸಾಹೇಬನ ಮೇಲ್ತರಗತಿಯ ತೋಫುಗಳಮುಂದೆ ಗ್ವಾಲ್ಹೇರಿಯ ಸೈನ್ಯದ ಭಾರವಾದ ತೋಫುಗಳ ಆಟ ನಡೆಯದಾಯಿತು. ದಂಗೆಗಾರ ಸೈನ್ಯದಲ್ಲಿರುತ್ತಿದ್ದ ಸಾಮಾನ್ಯ ದೋಷಗಳೆಲ್ಲವೂ ಈ ಸೈನ್ಯ ದಲ್ಲಿಯೂ ಇದ್ದುವು. ಒಂದು ಭಾಗವು ಸೋತಿತೆಂದು ಗೊತ್ತಾದ ಕೂಡಲೆ ಇನ್ನೊಂದು ಭಾಗದ ಸೈನ್ಯವು ಮುಂದೆ ಬಂದು ಯುದ್ಧಮಾಡಲು ಸಾಹಸ ಪಡದೆ ಇದ್ದುದರಿಂದ ತಾತ್ಯಾಟೋಪಿಯು ನಿರುಪಾಯನಾದನು. ಆತನ ಯುದ್ಧಕೌಶಲ್ಯವೂ ವ್ಯರ್ಥವಾಯಿತು. ಪೇಶವೆಯೂ ಆತನ ಅನುಚರರೂ ಮತ್ತೆ ಬ್ರಹ್ಮಾವರ್ತದ ಹಾದಿಯನ್ನು ಹಿಡಿದರು. ತಾತ್ಯಾಟೋಪಿಯು ಅಳಿ ದುಳಿದ ಗ್ವಾಲ್ಹೇರಿಯ ಸೈನ್ಯದೊಡನೆ ಕಾಲ್ಪಿಗೆ ಹೋಗಿ ಮತ್ತೆ ಯುದ್ಧದ ಸಿದ್ಧತೆ ಮಾಡತೊಡಗಿದನು. ಇತ್ತ ಪೇಶವೆಯು ತನ್ನ ಗ್ರಹಬಲವು ಅನು ಕೂಲವಾಗಿಲ್ಲೆಂದು ಚಿಂತಿಸತೊಡಗಿದನು. ಹಗೆಗಳು ಸಂಗ್ರಹಿಸಿದ ವಿಪುಲ ಯುದ್ಧಸಾಮುಗ್ರಿ ಅನ್ನಸಾಮುಗ್ರಿಗಳು ದೊರೆದು ಬ್ರಿಟಿಷರ ಬಲವು ಹೆಚ್ಚಿತು.

ಕಾನಪುರದಲ್ಲಿ ನೆರೆದ ಗ್ವಾಲ್ಹೇರಿಯ ಸೈನ್ಯವನ್ನು ಚೆದರಿಸಿದ ಬಳಿಕ ಸೇನಾಪತಿ ಕ್ಯಾಂಬೆಲ್ ಸಾಹೇಬನು ಫತ್ತೇಗಡದ ಮೇಲೆ ಸಾಗಿಹೋದನು; ಅಲ್ಲಿ ಒಂದು ತಿಂಗಳವರೆಗೆ ಉಳಿದು ಸುತ್ತಲಿನ ಪ್ರದೇಶದ ದಂಗೆಗಾರರನ್ನೆಲ್ಲ ಸೋಲಿಸಿ ಓಡಿಸಿ ತನ್ನ ದಾರಿಯನ್ನು ಸುರಕ್ಷಿತವಾಗಿ ಮಾಡಿಕೊಂಡ ತರು ವಾಯ ಮತ್ತೆ ಕಾನಪುರಕ್ಕೆ ಬಂದನು; ಫೆಬ್ರುವರಿ ತಿಂಗಳ ೮ನೆಯ ತಾರೀ ಖಿಗೆ ಅಲಹಾಬಾದಕ್ಕೆ ಹೋಗಿ ಅಲ್ಲಿಗೆ ಬಂದಿದ್ದ ಲಾರ್ಡ್ ಕ್ಯಾನಿಂಗ್ ಸಾಹೇಬನನ್ನು ಕಂಡು ಮಾತಾಡಿ ಬಂದ ಬಳಿಕ ಸೈನ್ಯದ ಸಿದ್ಧತೆ ಮಾಡಿ ಕೊಂಡು ಮತ್ತೆ ಲಕನೌವಿಗೆ ಹೊರಟನು.

---

# ಐದನೆಯ ಪರಿಚ್ಛೇದ

## ಜಯ-ಪರಾಜಯ

"Nana had slept at tnat place (Bithoor) the night before, but, hearing of our approach, had decamped with all his guns and most of his followers.... —*Forrest*.



ಕಾನಪುರದಿಂದ ಹೊರಟ ಬ್ರಿಟಿಷ ಸೈನ್ಯವು ಅಲವ್ ಬಾಗದಿಂದ ಆರುಮೈಲು ದೂರದಲ್ಲಿದ್ದ ಬಂತೇರಾಶಿಬಿರಕ್ಕೆ ಬಂದು ಮುಟ್ಟಿತು. ಅಸಂಖ್ಯ ತೋಫು ತುಬಾಕಿಗಳೂ ವಿಪುಲ ಮದ್ದು ಗುಂಡುಗಳೂ ಅಪರಿಮಿತ ಅನ್ನ ಸಾಮುಗ್ರಿಯೂ ಅಲ್ಲಿ ಸಂಗ್ರಹವಾಗಿದ್ದುವು. ನೇಪಾಳದ ಜಂಗಬಹಾದ್ದೂರನ ಸೇನೆಯೂ ಬ್ರಿಟಿಷ ಸೇನೆಯೂ ಸೇರಿ ಒಟ್ಟಿಗೆ ೨೨ ಸಾವಿರಕ್ಕಿಂತ ಹೆಚ್ಚು ಸೈನಿಕರು ಲಕನೌವಿಗೆ ಸಾಗಿ ಬಂದಿದ್ದರು. ಪ್ರತ್ಯಕ್ಷ ಯುದ್ಧವು ಪ್ರಾರಂಭವಾಗಲು ಇನ್ನೂ ಒಂದೆರಡು ದಿನಗಳ ಅವಕಾಶವಿದ್ದುದರಿಂದ ಸೈನಿಕರು ಸುಖವಿಲಾಸಗಳಲ್ಲಿ ಕಾಲ ಕಳೆಯುತ್ತಿದ್ದರು. ೯೩ನೆಯ ವಿಭಾಗದ ಹಾಯ್‌ಲಂಡರ್ಸ್ ಸೇನೆಯು ಬಹುವಿಸ್ತಾರವಾದ ಶಿಬಿರದ ಪೂರ್ವ ಭಾಗದಲ್ಲಿ ಇಳಿದಿದ್ದಿತು.

ಪ್ರಾತಃಕಾಲದ ಎಂಟುಗಂಟೆಯಾಗಿರಬಹುದು. ಸೈನಿಕರು ಅಲ್ಲಲ್ಲಿ ಗುಂಪುಗೂಡಿ ಚಳಿಗಾಲದ ಎಳೆಬಿಸಿಲಲ್ಲಿ ಕುಳಿತು ಆಟ ನೋಟಗಳಲ್ಲಿ ಮಗ್ನರಾಗಿದ್ದರು. "ದ್ರಾಕ್ಷೆ..ದಾಳಿಂಬ..ಕಿತ್ತಳೆ..ಅಂಜೂರ.." ಎಂದು ಎಳೆದೆಳೆದು ಕೂಗುತ್ತ ಹಣ್ಣು ಮಾರುವವನೊಬ್ಬನು ಅಲ್ಲಿಗೆ ಬಂದನು. ಹತ್ತಿಪ್ಪತ್ತು ಜನ ಸೈನಿಕರು ಗುಂಪುಗೂಡಿ ಆತನ ಬುಟ್ಟಿಯೊಳಗಿನ ಹಣ್ಣುಗಳನ್ನೆಲ್ಲ ಆರಿಸಿಕೊಂಡರು. ರೊಕ್ಕ ಕೊಡುವಾಗ ತುಸ ಗೊಂದಲವಾಯಿತು. ಹಣ್ಣಿನವನು ಇನ್ನೂ ಎರಡು ಆಣೆ ಬರಬೇಕೆನ್ನುತ್ತಿದ್ದನು. ಸೈನಿಕರು ನಾನಿಲ್ಲ, ನೀನಿಲ್ಲ, ಎನ್ನುತ್ತ ಅತ್ತಿತ್ತ ಸರಿದು ನಡೆದರು. ಈ ಗೊಂದಲ

ವನ್ನು ಕೇಳಿ ಮಧ್ಯಮ ವಯಸ್ಸಿನ ಸೈನಿಕನೊಬ್ಬನು ಅಲ್ಲಿಗೆ ಬಂದು— "ನೀನು ಯಾರು? ಶಿಬಿರದೊಳಗೆ ಬರಲು ಆವಶ್ಯಕವಾದ ಪಾಸು ಇರುವುದೇ?" ಎಂದು ಗಾಂಭೀರ್ಯದೊಡನೆ ಕೇಳಿದನು. ಹಣ್ಣಿನವನು "ನನ್ನ ಹೆಸರು ಜಿಮ್‌ಗ್ರೀನ್; ಬ್ರಿಗೇಡಿಯರ್ ಹೋಪ್ ಸಾಹೇಬರಿಂದ ಪಾಸು ಪಡೆದು ಕೊಂಡಿದ್ದೇನೆ." ಎನ್ನುತ್ತ ತನ್ನ ಜೇಬಿನೊಳಗಿಂದ ಪಾಸು ತೆಗೆದು ತೋರಿದನು. ಹಣ್ಣಿನವನು ಸುಸ್ಪಷ್ಟ ಆಘಾತಗಳೊಡನೆ ವಿಶುದ್ಧವಾದ ಇಂಗ್ಲಿಷಿನಲ್ಲಿ ಮಾತಾಡುವುದನ್ನೂ ಆತನ ತೇಜಸ್ವಿಯಾದ ಮುಖಲಕ್ಷಣಗಳನ್ನೂ ಕಂಡು ಸೈನಿಕನು ಅಚ್ಚರಿಗೊಂಡನು. ಸೈನಿಕನ ಮುಖಲಕ್ಷಣಗಳನ್ನು ನೋಡಿ ಹಣ್ಣಿನವನು – "ನಿಮ್ಮ ಹೆಸರೇನು, ಸಾಹೇಬ? ನಾನು ಬಾಲ್ಯದಿಂದಲೂ ಯುರೋಪಿಯನರ ಒಳಕೆಯಲ್ಲಿಯೇ ಇರುವೆನು. ನನ್ನ ತಂದೆಯು ಯುರೋಪಿಯನ್ ಸೈನ್ಯದಲ್ಲಿದ್ದನು." ಎನ್ನುತ್ತ ಆತನ ಕೈಯೊಳಗಿನ ವರ್ತಮಾನ ಪತ್ರವನ್ನು ನೋಡಿ "ತಮ್ಮಲ್ಲಿ ಹಳೆಯ ವರ್ತಮಾನ ಪತ್ರಗಳೇನಾದರೂ ಇರುವುವೇ? ಅವಕ್ಕೆ ಪ್ರತಿಯಾಗಿ ನಾಲ್ಕು ಒಳ್ಳೆಯ ಹಣ್ಣುಗಳನ್ನು ಕೊಡುವೆನು." ಎಂದನು.

"ನನ್ನ ಹೆಸರು ಫೋರ್ಬೆಸ್ ಮಿಚೆಲ್. ನನ್ನಲ್ಲಿ ಬೇಕಾದಷ್ಟು ಹಳೆಯ ವರ್ತಮಾನ ಪತ್ರಗಳಿವೆ. ನೀನು ಅವಕ್ಕೆ ಪ್ರತಿಯಾಗಿ ಏನೂ ಕೊಡಬೇಕಾಗಿಲ್ಲ." ಎನ್ನುತ್ತ ಆತನನ್ನು ತನ್ನ ಚಿಕ್ಕ ಗೂಡಾರಕ್ಕೆ ಕರೆದೊಯ್ದು ಅಲ್ಲೊಂದು ಮೂಲೆಯಲ್ಲಿ ಬಿದ್ದಿರುವ ವರ್ತಮಾನ ಪತ್ರಗಳನ್ನು ತೋರಿಸಿದನು. ಹಣ್ಣಿನವನು ಹರಕು ಬಿಟ್ಟು ಒಳ್ಳೆಯವನ್ನು ಆರಿಸಿಕೊಳ್ಳುವನಂತೆ ತನಗೆ ಬೇಕಾದ ಕೆಲವನ್ನು ಆಯ್ದು ಸಂಗಡಿದ್ದ ಆಳಿನ ಬುಟ್ಟಿಯಲ್ಲಿ ತುಂಬಿಕೊಂಡು ಬೇಡವೆಂದರೂ ನಾಲ್ಕಾರು ಒಳ್ಳೆಯ ಹಣ್ಣುಗಳನ್ನು ಸಾಹೇಬನ ಮೇಜಿನ ಮೇಲಿಟ್ಟು ಹೊರಟು ಹೋದನು.

ಸಾಯಂಕಾಲವು ಸಮೀಪಿಸಿತು. ಶಿಬಿರದೊಳಗಿನ ಸೈನಿಕರಿಗೆ ಆರು ಗಂಟೆಯಾಯಿತೆಂದು ಸೂಚಿಸುವ ತೋಫು ಹಾರಿತು. ರಾತ್ರಿಯ ಸರತಿಯ ಪಹರೆಯವರು ತಮ್ಮ ಉಡುಗೆ ತೊಡುಗೆಗಳನ್ನೂ ಆಯುಧಗಳನ್ನೂ ಸರಿಪಡಿಸಿಕೊಂಡು ಪಹರೆಯ ಸ್ಥಳಕ್ಕೆ ಬಂದುನಿಂತರು. ಕೂಡಲೆ ಇಬ್ಬರು



ಜನರಲ್ ಸರ್ ಕಾಲ್ವಿನ್ ಕ್ಯಾಂಬೆಲ್, G C.B





ಮೇಜರ್ ಜನರಲ್ ಸರ್ ಹೆನರಿ ಹ್ಯಾವಲಾಕ್, K C B



ರಣಕುಶಲ ಸೇನಾಪತಿ ತಾತ್ಯಾಟೋಪಿ

K.P.W.D

ವಿಶಾರದನಾದ ತಾತ್ಯಾಟೋಪಿಯ ಸೇನಾಚಾಲನೆಯಿಂದ ಮರುದಿನ ಬ್ರಿಟಿಷ ಸೈನಿಕರು ರಣಭೂಮಿಯಿಂದ ಜೀವ ಉಳಿಸಿಕೊಂಡು ಪಾರಾಗಿ ಹೋಗಬೇಕಾದರೆ ಸಾಕುಸಾಕಾಗಿ ಹೋಯಿತು. ಅವರು ಓಡಿ ಕಾನಪುರ ವನ್ನು ಸೇರಿ ತಮ್ಮ ನೂತನ ನಿರ್ಮಿತ ದುರ್ಗದಲ್ಲಿ ಆಶ್ರಯ ಹೊಂದಿದರು. ತಾತ್ಯಾಟೋಪಿಯ ಸೈನ್ಯವು ಕಾನಪುರಕ್ಕೆ ಬಂದು ನಗರವನ್ನೂ ಸೇನಾ ನಿವಾಸವನ್ನೂ ವಶಮಾಡಿಕೊಂಡಿತು. ಸೇನಾಪತಿ ವಿಂಡ್‌ಹ್ಯಾಮ್ ಸಾಹೇಬನು ಚಿಂತಾಕುಲನಾದನು.

ಬ್ರಿಟಿಷ ಸೇನಾಧಿಕಾರಿಗಳು ಯಾವುದನ್ನು ತರ್ಕಿಸಿದ್ದರೋ ಅದು ಕೊನೆಗೆ ಆಗೇ ಆಯಿತು. ಪ್ರಧಾನ ಸೇನಾಪತಿ ಕ್ಯಾಂಬೆಲ್ ಸಾಹೇಬನು ಲಕನೌವಿಗೆ ಮುಟ್ಟಿದಾಗಲೇ ತಾತ್ಯಾಟೋಪಿಯು ಕಾನಪುರವನ್ನು ವಶ ಮಾಡಿಕೊಂಡ ವಾರ್ತೆಯೂ ಅಲ್ಲಿಗೆ ಮುಟ್ಟಿತು. ಕೂಡಲೆ ಸೇನಾಪತಿಯು ಮುತ್ತಿಗೆಯಲ್ಲಿ ಸಿಕ್ಕಿದ್ದವರಿಗೆ ತಕ್ಕ ಸಹಾಯವನ್ನೊದಗಿಸಿ ಅಲ್ಲಿದ್ದ ಹೆಂಗು ಸರು ಮಕ್ಕಳನ್ನೂ ಗಾಯಹೊಂದಿದವರನ್ನೂ ಬೇನೆಯವರನ್ನೂ ಸಂಗಡ ಕರೆದುಕೊಂಡು ತಿರುಗಿ ಕಾನಪುರಕ್ಕೆ ಹೊರಟನು. ದಂಗೆಗಾರ ಸೈನ್ಯ ದೊಡನೆ ಯುದ್ಧಮಾಡುತ್ತ ಅಲ್ಲಿ ಹೆಚ್ಚು ಕಾಲ ಕಳೆಯಲಿಲ್ಲ.

ಇತ್ತ ಗ್ವಾಲ್ಹೇರಿಯ ಸೈನ್ಯದವರು ನಾವು ವಿಜಯಶಾಲಿಗಳಾದೆವೆಂದು ಆನಂದಮಗ್ನರಾಗಿದ್ದರು. ಲಕನೌವಿಗೆ ಕಳುಹುವದಕ್ಕೆಂದು ಸಿದ್ಧಮಾಡಿಟ್ಟ ಅಸಂಖ್ಯ ಗೂಡಾರಗಳೂ ವಿಪುಲ ಮದ್ದುಗುಂಡುಗಳೂ ಸೈನಿಕರ ಉಡುಗೆ ತೊಡುಗೆಗಳೂ ಅವರಿಗೆ ದೊರೆತುವು. ಲಕನೌವಿನಿಂದ ಪ್ರಧಾನ ಸೇನಾ ಪತಿಯು ಇಷ್ಟು ಬೇಗನೆ ತಿರುಗಿ ಹೊರಡಬಹುದೆಂದು ಅವರು ತರ್ಕಿಸಿರ ಲಿಲ್ಲ. ಆದುದರಿಂದ ಆ ಮಾರ್ಗವನ್ನು ಅವರು ಪ್ರತಿಬಂಧಿಸಲಿಲ್ಲ; ಇಲ್ಲವೆ ಗಂಗಾನದಿಯ ಸೇತುವೆಯನ್ನು ಮುರಿದುಬಿಡಲಿಲ್ಲ. ಇನ್ನೂ ಒಂದು ಮಹತ್ವದ ಮಾತೇನೆಂದರೆ— ದಂಗೆಗಾರರು ಲಕನೌವಿನಲ್ಲಿಯ ಸೇನೆಗೂ ಕಾನಪುರದ ಸೈನ್ಯಕ್ಕೂ ಪರಸ್ಪರ ಸಂಬಂಧವಿಟ್ಟು ಯುದ್ಧಮಾಡುತ್ತಿರಲಿಲ್ಲ. ಆದರೆ ಬ್ರಿಟಿಷರು ಮಾತ್ರ ಇಡಿಯ ಹಿಂದುಸ್ತಾನದ ಚಲನವಲನೆಯನ್ನು ನಿರೀಕ್ಷಿಸಿಕೊಂಡು ಕೆಲಸಮಾಡುತ್ತಿದ್ದರು.

ಪ್ರಧಾನ ಸೇನಾಪತಿ ಕ್ಯಾಂಬೆಲ್ ಸಾಹೇಬನು ಲಕನೌವಿನಿಂದ

ಪ್ರಧಾನ ಸೇನಾಪತಿ ಕ್ಯಾಂಬೆಲ್ ಸಾಹೇಬನು ಕಾನಪುರದಿಂದ ಲಕನೌವಿಗೆ ಸಾಗಿಹೋದಂದಿನಿದಲೂ ತಾತ್ಯಾಟೋಪಿಯು ಕಾನಪುರವನ್ನು ವಶಮಾಡಿ ಕೊಳ್ಳುವ ವಿಚಾರದಲ್ಲಿ ತೊಡಗಿದ್ದನು. ಕ್ಯಾಂಬೆಲ್ ಸಾಹೇಬನಿಗೂ ಈ ವಿಚಾರವು ತಿಳಿದೇ ಇದ್ದಿತು. ಕಾನಪುರದಲ್ಲುಳಿದ ಸೇನಾಪತಿ ವಿಂಡ್‌ಹ್ಯಾಮ್ ಸಾಹೇಬನಿಗೆ ಆತನು ಈ ವಿಚಾರವನ್ನು ಹೇಳಿಯೂ ಇದ್ದನು. ಬ್ರಿಟಿಷ ಸೇನಾಧಿಕಾರಿಗಳು ಬಹು ಜಾಣರು. ಲಕನೌವನ್ನು ಸ್ವಾಧೀನಪಡಿಸಿ ಕೊಂಡು ಮುತ್ತಿಗೆಯಲ್ಲಿ ಸಿಕ್ಕಿದ್ದವರಿಗೆ ಸಹಾಯವೊದಗಿಸುವುದು ಆವಶ್ಯಕ ವಾಗಿದ್ದಂತೆಯೇ ಕಲಕತ್ತೆಯ ಮಾರ್ಗವನ್ನು ಸುರಕ್ಷಿತವಾಗಿಟ್ಟುಕೊಳ್ಳು ವುದೂ ಅವರ ಕರ್ತವ್ಯವಾಗಿದ್ದಿತು. ತಾತ್ಯಾಟೋಪಿಯು ಗ್ವಾಲ್ಹೇರಿಯ ಸೈನ್ಯದೊಡನೆ ಕಾಲ್ಪಿಯಿಂದ ಬಂದು ಕಾನಪುರವನ್ನು ಆಕ್ರಮಿಸಿಕೊಂಡು ಬಿಟ್ಟರೆ ಹೇಗೆಂಬ ಚಿಂತೆಯು ಅವರ ಮನಸ್ಸಿನಲ್ಲಿ ಹಗಲಿರಳು ಕುದಿಯು ತ್ತಲೇ ಇದ್ದಿತು. ಅತ್ತ ಕ್ಯಾಂಬೆಲ್ ಸಾಹೇಬನು ಲಕನೌವಿಗೆ ಹೊರಟನು. ಇತ್ತ ತಾತ್ಯಾಟೋಪಿಯು ಕಾನಪುರಕ್ಕೆ ಹೊರಟನು. ಆತನು ಕಾನಪುರಕ್ಕೆ ಸಮೀಪಿಸಿದುದನ್ನು ತಿಳಿದು ವಿಂಡ್‌ಹ್ಯಾಮ್ ಸಾಹೇಬನು ಅಡ್ಡಗಟ್ಟುವು ದಕ್ಕಾಗಿ ಸೇನೆಯೊಡನೆ ಇದಿರಿಗೆ ಸಾಗಿಹೋದನು. ತಾತ್ಯಾಟೋಪಿಯು ಕಾಲ್ಪಿಯಿಂದ ಕಾನಪುರಕ್ಕೆ ಹೋಗುವ ಎರಡು ರಾಜಮಾರ್ಗಗಳಲ್ಲಿಯೂ ಸುತ್ತಲಿನ ಅಕಬರಪುರ, ಭಗಿನೀಪುರ, ಸುಚಂಡಿ ಮುಂತಾದ ಹಳ್ಳಿಗಳಲ್ಲಿಯೂ ಸೈನ್ಯವನ್ನಿಟ್ಟು ಬಹುಕುಶಲತೆಯಿಂದ ವ್ಯೂಹರಚನೆ ಮಾಡಿಕೊಂಡಿದ್ದನು. ನೊವೆಂಬರ್ ತಿಂಗಳ ೨೬ನೆಯ ತಾರೀಖಿನ ದಿನ ಪಾಂಡುನದಿಯ ತೀರದಲ್ಲಿ ಯುದ್ಧಾರಂಭವಾಯಿತು. ಮಿಕ್ಕ ದಂಗೆಗಾರ ಸೇನಾಚಾಲಕರಿಗೂ ತಾತ್ಯಾ ಟೋಪಿಗೂ ಅತಿಶಯ ತಾರತಮ್ಯವಿದ್ದಿತು. ತಾತ್ಯಾಟೋಪಿಯು ತನ್ನ ರಣಭೂಮಿಯ ಮುಖ್ಯ ಸ್ಥಳವನ್ನು ಮೊದಲು ಗೊತ್ತು ಪಡಿಸಿಕೊಂಡು ಸುತ್ತು ಕಡೆಯಿಂದಲೂ ಅಲ್ಲಿಗೆ ಸಹಾಯವೊದಗಿಸಲು ಅನುಕೂಲವಾಗು ವಂತೆ ಹಲವು ಕಡೆಗಳಲ್ಲಿ ಸೇನಾವಿಭಾಗಗಳನ್ನಿಟ್ಟುಕೊಂಡು ಯುದ್ಧವನ್ನು ಆರಂಭಿಸುತ್ತಿದ್ದನು. ಪಾಂಡುನದಿಯ ತೀರದಲ್ಲಾದ ಯುದ್ಧದಲ್ಲಿ ಮೊದಲ ನೆಯ ದಿನ ವಿಂಡ್‌ಹ್ಯಾಮ್ ಸಾಹೇಬನು ವಿಜಯಶಾಲಿಯಾದನು. ಶತ್ರು ಗಳ ಮೂರು ತೋಪುಗಳು ಆತನ ವಶವಾದುವು. ಆದರೆ ಯುದ್ಧವಿದ್ಯಾ

ಯಲ್ಲಿರುವೆನು. ನಾನು ನಿನಗೆ ಎಂತಹ ಉಪಕಾರ ಮಾಡಲಿ? ಈತನು ನಿನಗೆ ಹಗೆಯಾಗಿ ನಂದನು. ನಿನ್ನ ಗಂಡುಸಿನ ವೇಷವು ನಮ್ಮನ್ನು ಮೋಸ ಗೊಳಿಸಿತು. ನೀನು ಹೆಂಗುಸೆಂಬುದು ಮೊದಲೇ ಗೊತ್ತಾಗಿದ್ದರೆ ನಿನ್ನ ಮೇಲೆ ಎಂದೂ ಕೈ ಎತ್ತಗೊಡುತ್ತಿರಲಿಲ್ಲ." ಎನ್ನುತ್ತ ಗಳಗಳನೆ ಅತ್ತುಬಿಟ್ಟನು. †

"ಅಣ್ಣಾ, ನೀನೆನಗೆ ಒಂದು. ನನಗೊಂದು ಉಪಕಾರ ಮಾಡು. ಗುಂಡಿನ ಏಟು ಸರಿಯಾದ ಸ್ಥಳಕ್ಕೆ ಬಡಿಯಲಿಲ್ಲ; ಆದರೂ ಗಾಯವು ಪ್ರಬಲ ವಾಗಿರುವುದರಿಂದ ನಾನು ಇನ್ನು ಬದುಕಲಾರೆ. ಒಂದೆರಡು ದಿನ ಇಲ್ಲಿಯೇ ನರಳುತ್ತ ಬೀಳಬೇಕಾಗುವುದು. ಆದುದರಿಂದ ಇನ್ನೊಂದು ಗುಂಡಿನಿಂದ ಈ ಪಾಪಿ ಜೀವನವನ್ನು ಕೊನೆಗಾಣಿಸು. ಇಲ್ಲವೆ ಈ ನನ್ನ ತುಬಾಕಿಗೆ ಒಂದು ಗುಂಡು ತುಂಬಿಕೊಡು. ನನ್ನ ಬಲದ ಕೈಯು ಎತ್ತಲಿಕ್ಕೆ ಬಾರ ದಂತಾಗಿದೆ." ಎಂದಳು. ಸೈನಿಕನು ಬೇರೆ ದಾರಿಗಾಣದೆ ಆಕೆಯ ತುಬಾಕಿಗೆ ಗುಂಡು ತುಂಬಿಟ್ಟಾಗ ಸೇನಾಪತಿಯ ಅಪ್ಪಣೆಯ ರಣವಾದ್ಯವು ಮೊಳಗ ತೊಡಗಿತು. ಕರ್ತವ್ಯನಿಷ್ಠನಾದ ಬ್ರಿಟಿಷ ಸೈನಿಕನು ಇನ್ನು ಅಲ್ಲಿ ನಿಲ್ಲ ಲಾರದೆ ಹೊರಟು ಹತ್ತು ಹಜ್ಜೆ ಹೋಗುವಷ್ಟರಲ್ಲಿ ತುಬಾಕಿ ಹಾರಿತು. ಆ ಸಪ್ಪಳದೊಡನೆಯೇ ವೀರರಮಣಿ ಮೆಹರ್‌ಜಾನಳ ಆತ್ಮವೂ ಅಂತರಿಕ್ಷ ದಲ್ಲಿ ವಿಲೀನವಾಗಿ ಹೋಯಿತು.

ಜುಲೈ ತಿಂಗಳ ೧೭ನೆಯ ತಾರೀಖಿನ ದಿನ ಕಾನಪುರದಲ್ಲಿ ಪರಾಜಯ ಹೊಂದಿದ ತರುವಾಯ ನಾನಾಸಾಹೇಬನು ಬ್ರಹ್ಮಾವರ್ತಕ್ಕೆ ಹೋದನು. ಅಪ್ರತಿಮ ರಣಕುಶಲನಾದ ತಾತ್ಯಾಟೋಪಿಗೆ ಕಾನಪುರದ ದಂಗೆಗಾರ ಸೈನ್ಯದ ಮೇಲೆ ಯಾವತರದ ಅಧಿಕಾರವೂ ಇರಲಿಲ್ಲ. ಆದುದರಿಂದ ಆತನು ಇನ್ನು ಮುಂದೆ ಸ್ವತಂತ್ರ ಸೈನ್ಯವನ್ನು ಕಟ್ಟಿಕೊಂಡು ತನ್ನ ಒಡೆಯನ ಹಿತ ವನ್ನು ಸಾಧಿಸಲು ಯತ್ನಿಸಿದನು. ಆತನು ಕೆಲವು ಜನ ಸೈನಿಕರ ಸಹಾಯ ದಿಂದ ಕಾಲ್ಪಿಯ ಭದ್ರವಾದ ದುರ್ಗವನ್ನು ವಶಪಡಿಸಿಕೊಂಡು ಅಲ್ಲಿ ಮದ್ದು ಗುಂಡುಗಳ ಕಾರಖಾನೆಯನ್ನು ಪ್ರಾರಂಭಿಸಿದನು. ಗ್ವಾಲ್ಹೇರಿಯ ಸೈನ್ಯ ದೊಡನೆ ಸಂಧಾನ ಹೂಡಿ ಅವರ ಸಹಾಯ ಪಡೆದು ಗ್ವಾಲ್ಹೇರಿಯಿಂದ ಕಾನಪುರದ ವರೆಗಿನ ದಾರಿಯಲ್ಲಿ ಅಲ್ಲಲ್ಲಿಗೆ ಶಿಬಿರಗಳನ್ನು ಸ್ಥಾಪಿಸಿದನು.

† Forbes Mitchell.... Great Mutiny P. 57-58

ಗುರಿಯಿಟ್ಟು ಹಾರಿಸಲು ಪರಕ್ಷಣದಲ್ಲಿಯೇ ವಿರೋಧಿಯು ನೆಲಕ್ಕೆ ಉರುಳಿದನು. ಕೆಳಗೆ ಬೀಳುವಾಗ ಆತನ ತಲೆಯಮೇಲಿನ ಮುಂಡಾಸವು ಗಿಡದ ಶಾಖೆಗೆ ತಗಲಿಕೊಂಡಿತು. ಮೈಮೇಲಿನ ಅಂಗಿಯು ಹರಿಯಿತು. ಸೈನಿಕನು ವಿರೋಧಿಯ ಶರೀರವನ್ನು ನೋಡಿ ವಿಸ್ಮಿತನಾದನು. ಹೆಂಗುಸು! ಕೆದರಿದ ಕೇಶರಾಶಿಯು ಆಕೆಯ ಮನೋಹರವಾದ ಮುಖವನ್ನು ಮುಸುಕಿದ್ದಿತು. ಆಕೆಯ ಮುಖವನ್ನು ನೋಡಿ ಗುರುತಿಸಿದಾಗ ಸೈನಿಕನು ಆಶ್ಚರ್ಯದಿಂದ ಬೆಪ್ಪಾಗಿ ನಿಂತುಬಿಟ್ಟನು. ಇದನ್ನೆಲ್ಲ ನೋಡುತ್ತಿದ್ದ ಇನ್ನೊಬ್ಬ ಸೈನಿಕನು ಅಲ್ಲಿಗೆ ಬಂದು ತನ್ನ ಮಗ್ಗುಲಲ್ಲಿ ಅಲೆಯುತ್ತಿದ್ದ ನೀರಿನ ಪಾತ್ರೆಯಿಂದ ಆಕೆಯ ಬಾಯಿಗೆ ನೀರೆರೆದನು. "ನನ್ನ ಹಗೆ ಇಂದಿಗೆ ಸಾಧಿಸಿತು. ನಿನ್ನೊಬ್ಬನ ಆಯುರ್ಬಲವು ಹೆಚ್ಚಾಗಿದ್ದುದರಿಂದ ಬದುಕಿಕೊಂಡೆ. ನೀಲ ಸಾಹೇಬನನ್ನು ಕೊಂದು ನನ್ನ ಪ್ರತಿಜ್ಞೆಯನ್ನು ಕೊನೆಗಾಣಿಸಿಕೊಂಡೆನು. ಸೇನಾಪತಿ ಔಟ್ರ್ಯಾಮನಿಗೂ ಅಂದೇ ಒಂದು ಏಟು ಕೊಟ್ಟಿದ್ದೆನು; ಆದರೆ ಆತನ ಆಯುಸ್ಸೂತ್ರವು ಗಟ್ಟಿಯಾಗಿದ್ದಿತು. ಹ್ಯಾವಲಾಕ್ ಸಾಹೇಬನ ಮಗನಿಗೂ ಒಂದೇಟು ಕೊಟ್ಟಿದ್ದೇನೆ." ಎನ್ನುತ್ತ ಆಕೆಯು ಆಗಲೂ ವೀರದರ್ಪವನ್ನು ಅಭಿನಯಿಸುತ್ತಿದ್ದಳು.

ಸೈನಿಕನ ಮನಸ್ಸು ಕರಗಿತು. ಕಣ್ಣುಗಳಲ್ಲಿ ನೀರು ತುಂಬಿತು. ಶೂರನಾದವನಿಗೆ ವೈರಿಗಳ ಶೌರ್ಯವನ್ನು ಕಂಡು ಆನಂದವಾಗುವುದೂ ಮನಸ್ಸಿನಲ್ಲಿ ವೈರವಿದ್ದರೂ ನಿರಾಶ್ರಯ ಸ್ಥಿತಿಯಲ್ಲಿದ್ದಾಗ ಅವರ ಕಷ್ಟವನ್ನು ಕಂಡು ಕರುಣೆಯುಂಟಾಗುವುದೂ ಸಹಜವು. ಅವನು "ಅಕ್ಕಾ, ನೀನು ಬಾಜಾ ಹುಸೇನನ ಧರ್ಮಪತ್ನಿಯೇನು?" ಎಂದನು.

"ಹೌದು. ನಾನೇ ಆ ದೈವಗೇಡಿ. ನನ್ನ ಹೆಸರು ಮೆಹರ್‌ಜಾನ್. ಈ ಹೆಸರನ್ನು ನಾನು ಹಿಂದೆ ಎರಡು ಸಾರೆ ನೀಲಸಾಹೇಬನ ಕಿವಿಗೆ ಮುಟ್ಟಿಸಿದ್ದೇನೆ. ನಿಮ್ಮಂತೆಯೇ ನಮ್ಮಲ್ಲಿಯೂ ಪ್ರತಿಹಿಂಸಾ ಪ್ರವೃತ್ತಿ ಇರುವುದೆಂಬುದನ್ನು ನಾನು ತೋರಿಸಬೇಕಾಗಿದ್ದಿತು. ಎನ್ನುತ್ತ ತನ್ನ ಬಾಯಿಗೆ ನೀರೆರೆದವನ ಕಡೆಗೆ ತಿರುಗಿ, "ಅಣ್ಣಾ ನೀನು ನನಗೊಂದು ಉಪಕಾರ ಮಾಡುವೆಯಾ? ನಾನು ನಿನ್ನ ಹೆಸರನ್ನು ತಿಳಿಯಬಹುದೇ" ಎಂದಳು.

"ಅಕ್ಕಾ, ನನ್ನ ಹೆಸರು ಫೋರ್ಬೆಸ್ ಮಿಚೆಲ್. ಹಾಯ್ಲೆಂಡರ್ಸ ಸೇನೆ

ಸಿಕ್ಕಿದ ಸಾವಿರಾರು ದಂಗೆಗಾರರಲ್ಲಿ ಒಬ್ಬನೂ ಜೀವಗೂಡಿ ಪಾರಾಗಲಿಲ್ಲ.

ವಿಜಯಿಗಳಾದ ಬ್ರಿಟಿಷ ಸೈನಿಕರು ವಿಶ್ರಾಂತಿಗಾಗಿ ಅಲ್ಲಿ ತುಸ ಹೊತ್ತು ಕುಳಿತಿದ್ದರು. ಆ ತೋಟವು ಗೋಮತಿ ನದಿಯ ದಂಡೆಯಲ್ಲಿದ್ದಿತು. ನಾಲ್ಕಾರು ಜನ ಯುರೋಪಿಯನ್ ಸೈನಿಕರು ನದಿಯ ದಂಡೆಯಲ್ಲಿ ದೊಡ್ಡದೊಂದು ಅಶ್ವತ್ಥವೃಕ್ಷದ ಕೆಳಗೆ ಕುಳಿತು ಮಾತಾಡುತ್ತಿದ್ದರು.

೧ನೆಯವ— ಅಂದು ನಾವು ಕಾನಪುರದಿಂದ ಹೊರಟು ಹೋಗಿ ಖಾಜಾಹುಸೇನನನ್ನು ಹಿಡಿದು ತಂದೆವಲ್ಲ!

೨ನೆಯವ— ಆ ತರುಣಿಯ ಸೌಂದರ್ಯವನ್ನು ನೋಡಿ ನನ್ನ ಮನಸ್ಸು ಮುಗ್ಧವಾಯಿತು!

೩ನೆಯವ— ಆಕೆಯ ಆ ವೀರದರ್ಪವನ್ನು ಕಂಡು ನನಗೆ ಭಯ ವಾಯಿತು. ಇಲ್ಲವಾದರೆ........ 'ಧಡಂ' ಎಂದು ತುಬಾಕಿಯ ಧ್ವನಿ ಯಾಯಿತು. ಮಾತಾಡುತ್ತಿದ್ದವನು ತಲೆಗೆ ಗುಂಡು ಬಡಿದು ಗೋಮತಿಯ ಜಲದಲ್ಲಿ ಉರುಳಿದನು. ಉಳಿದವರು ಗಾಬರಿಯಾದರು. ಸುತ್ತು ಕಡೆಗೆ ನೋಡಿದರೂ ಎಲ್ಲಿಯೂ ಯಾರೂ ಕಾಣಿಸಲಿಲ್ಲ, ಅವರು ನದಿಯಲ್ಲಿ ಇಳಿದು ಮೃತನ ಶರೀರವನ್ನು ಮೇಲೆ ತಂದು ಇನ್ನೂ ಜೀವವಿರುವುದೋ ಎಂದು ಪರೀಕ್ಷಿಸುತ್ತಿದ್ದಾಗ ಮತ್ತೊಂದು ಗುಂಡು ಹಾರಿತು. ಇನ್ನೊಬ್ಬನ ಬೆನ್ನಿನಲ್ಲಿ ಸೇರಿದ ಗುಂಡು ಎದೆಯಲ್ಲಿ ಹಾಯ್ದು ಹೋಯಿತು. ಉಳಿದ ಇಬ್ಬರು ಓಡಿ ಹೋಗಬೇಕೆಂದು ಆಲೋಚಿಸಿ ತಮ್ಮ ಉಡುಗೆ ತೊಡುಗೆ ಗಳನ್ನೂ ಆಯುಧಗಳನ್ನೂ ಸರಿಪಡಿಸಿಕೊಳ್ಳುತ್ತಿದ್ದಾಗ ಮೂರನೆಯ ಸಾರಿ ತುಬಾಕಿಯು ಹಾರಿ ಮೂರನೆಯವನೂ ನೆಲಕ್ಕೆ ಉರುಳಿದನು. ನಾಲ್ಕನೆ ಯವನು ಭಯಭ್ರಾಂತನಾಗಿ ಹೊರಟು ಓಡಲು ಪ್ರಾರಂಭಿಸಿದನು. ಹತ್ತು ಹಜ್ಜೆ ಹೋಗುವಷ್ಟರಲ್ಲಿ ಮೇಲಿನಿಂದ ಒಂದು ತುಬಾಕಿಯ ತೋಟೆಯು ಆತನ ಮೇಲೆ ಬಿದ್ದಿತು. ಆತನು ಇದೇನೆಂದು ಮೇಲೆ ನೋಡುವಾಗ ಮುಹಮ್ಮದೀಯ ಸೈನಿಕನೊಬ್ಬನು ಮಾವಿನ ಮರದ ಮೇಲೆ ಹಸುರೆಲೆಗಳ ಜಿಹುಪಿನಲ್ಲಿ ಅಡಗಿ ಕುಳಿತಿದ್ದುದು ಕಾಣಿಸಿತು. ಆತನು ತುಬಾಕಿಗೆ ತುಂಬುವುದಕ್ಕೆ ತೆಗೆದ ತೋಟೆಯು ಕೈತಪ್ಪಿ ಕೆಳಗೆ ಬೀಳಲು ಇನ್ನೊಂದನ್ನು ತೆಗೆದುಕೊಂಡಿದ್ದನು. ಸೈನಿಕನು ಕೂಡಲೆ ತನ್ನ ತುಬಾಕಿಯನ್ನು

ಕಟುಕನ ವೇಷದಿಂದ ಬಂದ ದಾರಿಕಾರನು ಲಕನೌವಿನ ಯುರೋಪಿಯನ್ ಇಂಜನಿಯರ್ ಕಾವನಾಗ್ ಸಾಹೇಬನಾಗಿದ್ದನು. ಸೇನಾಪತಿ ಔಟ್ರ್ಯಾಮನು ಲಕನೌನಗರದ ಅಂತಸ್ಥ ರಚನೆಯನ್ನೂ ಶತ್ರುಗಳ ವ್ಯೂಹಗಳನ್ನೂ ಬ್ರಿಟಿಷ ಸೇನೆಯು ಸಾಗಿ ಬರಬೇಕಾದ ದಾರಿಯನ್ನೂ ಆ ಪತ್ರದಲ್ಲಿ ಸಂಕ್ಷೇಪವಾಗಿ ಬರೆದುದಲ್ಲದೆ ಎಲ್ಲವನ್ನೂ ತಿಳಿದಿದ್ದ ಇಂಜನಿಯರ್ ಕಾವನಾಗ್ ಸಾಹೇಬನಿಂದ ಹೆಚ್ಚು ಪ್ರಯೋಜನವಾಗಬಹುದೆಂದು ಆತನನ್ನೇ ಕಳುಹಿದ್ದನು. ಹಗೆಗಳ ಮುತ್ತಿಗೆಯನ್ನು ದಾಟಿ ಯುರೋಪಿಯನರು ಹೊರಗೆ ಹೋಗುವುದು ಅಶಕ್ಯವಾಗಿದ್ದುದರಿಂದ ಆತನು ವೇಷ ಬದಲಾಯಿಸಿಕೊಂಡು ಬ್ರಿಟಿಷ ಸೈನ್ಯದಲ್ಲಿ ಗುಪ್ತಚರನ ಕೆಲಸ ಮಾಡುತ್ತಿದ್ದ ಕನೋಜಿಲಾಲನೆಂಬ ಕಟುಕನ ಸಹಾಯದಿಂದ ರಾತ್ರಿಯೆಲ್ಲಾ ಪ್ರವಾಸ ಮಾಡಿ ಹಲವು ಗಂಡಾಂತರಗಳಿಂದ ಪಾರಾಗಿ ಪ್ರಾತಃಕಾಲದಲ್ಲಿ ಬ್ರಿಟಿಷರ ಶಿಬಿರಕ್ಕೆ ಬಂದು ಮುಟ್ಟಿದ್ದನು. ಈ ಸಾಹಸದ ಮಹತ್ಕಾರ್ಯಕ್ಕಾಗಿ ಕಾವನಾಗ್ ಸಾಹೇಬನಿಗೆ ವಿಕ್ಟೋರಿಯಾ ಕ್ರಾಸಿನ ಬಹುಮಾನವು ದೊರೆಯಿತು.

ಸೇನಾಪತಿ ಕ್ಯಾಂಬೆಲ್ ಸಾಹೇಬನು ಲಕನೌನಗರದ ಅಂತಸ್ಥ ರಚನೆಯ ಗುಟ್ಟನ್ನೆಲ್ಲ ತಿಳಿದುಕೊಂಡ ಬಳಿಕ ಬ್ರಿಟಿಷ ಸೈನ್ಯವು ಹಗೆಗಳ ಒಂದೊಂದೇ ಕೇಂದ್ರಗಳನ್ನು ವಶಪಡಿಸಿಕೊಳ್ಳುತ್ತ ಮುಂದೆ ಸಾಗಿತು. ಬ್ರಿಟಿಷ ಸೈನ್ಯವು ಸಿಕಂದರಬಾಗವೆಂಬ ತೋಟದ ಬಾಗಿಲ ಬಳಿಗೆ ಬಂದಾಗ ಒಳಗಿನವರು ಅದರ ಬಾಗಿಲನ್ನು ಮುಚ್ಚಬೇಕಾಯಿತು. ಅವರು ಅವಸರದಿಂದ ಬಾಗಿಲು ಮುಚ್ಚುತ್ತಿದ್ದಾಗ ಮುಕರಬಖಾನೆಂಬ ಮಹಮ್ಮದೀಯ ಸುಭೇದಾರನು ಕದಗಳ ನಡುವೆ ತನ್ನ ಎಡಗೈಯನ್ನು ಇಡಲು ಒಳಗಿನವರು ಅದನ್ನು ಕಡಿದರು. ಕೂಡಲೆ ಆತನು ತನ್ನ ಬಲಗೈಯನ್ನು ಅಲ್ಲಿ ಇಕ್ಕಿದನು. ಒಳಗಿನವರು ಭರದಿಂದ ಬಾಗಿಲನ್ನು ಮುಚ್ಚಲು ಆ ಕೈಯೂ ಕತ್ತರಿಸಿ ಹೋಯಿತು. ಆದರೆ ಮುರಿದ ಕೈಯ ಭಾಗವು ಕದಗಳ ನಡುವೆ ಸಿಕ್ಕು ಬಾಗಿಲಿಗೆ ಅಗುಳಿಯನ್ನು ಹಾಕಲು ಬಾರದಾಯಿತು. ಶೂರ ಮುಕರಬನು ಎರಡೂ ಕೈಗಳನ್ನು ಕಳೆದುಕೊಂಡು ಬಾಗಿಲನ್ನು ಮುಚ್ಚಲು ಪ್ರತಿಬಂಧ ಮಾಡಿದನು; ಅಷ್ಟರಲ್ಲಿ ಅನೇಕರು ಅಲ್ಲಿಗೆ ಬಂದು ಬಾಗಿಲನ್ನು ದೂಡಿ ಒಳಸೇರಿದರು; ಸಿಕಂದರಬಾಗವು ಬ್ರಿಟಿಷರ ವಶವಾಯಿತು. ಒಳಗೆ

ಅದೇ ಆಗ ಸೂರ್ಯೋದಯವಾಗಿದ್ದಿತು. ಬಾಲರವಿಯ ಕೋಮಲ ಕಿರಣಗಳು ಬಂತೇರಾದ ಬಯಲಿನಲ್ಲಿ ಹಬ್ಬಿದ ಬ್ರಿಟಿಷರ ಶಿಬಿರದ ಗೂಡಾರಗಳನ್ನು ಬೆಳಗುತ್ತಿದ್ದುವು. ಆಗ ಅಕಸ್ಮಾತ್ ಒಬ್ಬ ದಾರಿಕಾರನು ಅಲ್ಲಿಗೆ ಬಂದನು. ವಿಚಿತ್ರವಾದ ಉಡುಗೆ ತೊಡುಗೆಗಳಿಂದ ಆತನು ಒಬ್ಬ ಹುಚ್ಚ ಕಟುಕನಂತೆ ತೋರುತಿದ್ದನು. ಕೆಂಪು ಮುಖಕ್ಕೆ ಕರಿಯ ಮಸಿಯನ್ನು ಬಳಿದಿದ್ದು ಅದು ಅರ್ಧಮರ್ಧ ತೊಳೆದು ಹೋಗಿದ್ದಿತು. ತಲೆಯ ಮೇಲಿನ ಹೆಡಿಗೆಯಂತಹ ಹಸುರು ಚಿಕ್ಕೆಯ ಮುಂಡಾಸವು ಅಸ್ತವ್ಯಸ್ತವಾಗಿದ್ದಿತು. ಮಹಮ್ಮದೀಯರು ಧರಿಸುವಂತಹ ಬಿಳಿಯ ನಿಲುವಂಗಿಯ ಮೇಲೆ ಹಸುರು ಜಾಕೇಟು ವಿಚಿತ್ರವಾಗಿ ತೋರುತ್ತಿದ್ದಿತು. ನಿರಿಗೆಯ ಚಲ್ಲಣವೂ ಕಾಲೊಳಗಿಂದ ತೆಗೆದು ಎಡದ ಕೈಯಲ್ಲಿ ಹಿಡಿದುಕೊಂಡಿರುವ ಉದ್ದಮೂಗಿನ ಚಡಾವೂ ಅವನ್ನು ಆತನು ಹಿಂದೆ ಎಂದೂ ಧರಿಸಿರಲಿಲ್ಲವೆಂದು ಹೇಳುತ್ತಿದ್ದುವು. ದಾರಿಕಾರನು ಅಕಸ್ಮಾತ್ ''ಹೂ ಕಮ್ಸ್ ದೇರ್''(Who comes there) ಎಂದು ಕೂಗಿದ ಕರ್ಕಶ ಧ್ವನಿಯಿಂದ ಬೆಚ್ಚಿ ಬಿದ್ದನು. ಕೂಡಲೆ ಆತನು ಕಾವಲುಗಾರನ ಸಮೀಪಕ್ಕೆ ಹೋಗಿ ಒಂದು ಕುರುಹನ್ನು ತೋರಿದನು. ಪರಕ್ಷಣದಲ್ಲಿಯೇ ಇಬ್ಬರು ಸೈನಿಕರು ಬಂದು ಆತನನ್ನು ಕರೆದೊಯ್ದು ಒಂದು ಸುವಿಶಾಲವಾದ ಗೂಡಾರದ ಬಾಗಿಲಲ್ಲಿ ಬಿಟ್ಟರು. ದಾರಿಕಾರನು ಒಳಗೆ ನಿಂತಿದ್ದ ಮಧ್ಯಮ ವಯಸ್ಸಿನ ಗಂಭೀರ ಪ್ರಕೃತಿಯ ಒಬ್ಬ ಗೃಹಸ್ಥನನ್ನು ಕಂಡು '' ನಾನು ಕ್ಯಾಂಬೆಲ್ ಸಾಹೇಬರನ್ನು ಕಾಣಬೇಕಾಗಿದೆ. ಅವರು ಎಲ್ಲಿರುವರು ? '' ಎಂದು ಕೇಳಿದನು. ಸಾಹೇಬನು ಅರೆಹುಚ್ಚನಂತಹ ಈ ಕಾಡು ದಾರಿಕಾರನನ್ನು ನೋಡಿ ' ನಾನೇ ಆತನು. ನಿನಗೇನು ಬೇಕಾಗಿದೆ ? " ಎಂದು ಗರ್ಜಿಸಿದನು. ದಾರಿಕಾರನು ತನ್ನ ಅಚಾತುರ್ಯಕ್ಕಾಗಿ ನಾಚಿಕೊಂಡು ತನ್ನ ಮುಂಡಾಸದ ಸೆರಗಿನಿಂದ ಒಂದು ಪತ್ರವನ್ನು ತೆಗೆದು ಆತನ ಕೈಗೆ ಕೊಟ್ಟನು. ಅವನ್ನು ಓದಿ ನೋಡಿ ಸೇನಾಪತಿಯು ಆನಂದಾತಿಶಯದಿಂದ ಆತನನ್ನು ಬಿಗಿದಪ್ಪಿಕೊಂಡು ತನ್ನ ನಿಷ್ಠುರ ವಾಕ್ಯಗಳಿಗಾಗಿ ಪಶ್ಚಾತ್ತಾಪಗೊಂಡು '' ಬ್ರಿಟಿಷ ಸೇನೆಯು ನಿಮಗೆ ಅತ್ಯಂತ ಋಣಿಯಾಗಿದೆ." ಎನ್ನುತ್ತ ಆತನನ್ನು ಒಳಗೆ ಕರೆದೊಯ್ದು ಬೇರೆ ಉಡುಗೆ ತೊಡುಗೆಗಳನ್ನು ಕೊಟ್ಟು ಸನ್ಮಾನಿಸಿದನು.

ಸಪ್ಟಂಬರ್ ತಿಂಗಳ ೨೫ನೆಯ ತಾರೀಖಿಗೆ ಸೇನಾಪತಿ ಔಟ್ರ್ಯಾಮ ಮತ್ತು ಹ್ಯಾವಲಾಕ್ ಸಾಹೇಬರು ಲಕನೌವಿಗೆ ಮುಟ್ಟಿ ಅಲ್ಲಿ ಮುತ್ತಿಗೆಯಲ್ಲಿ ಸಿಕ್ಕಿದ್ದವರಿಗೆ ಸಹಾಯವನ್ನು ಒದಗಿಸಿದರೂ ಸಂಪೂರ್ಣ ವಿಜಯಿಗಳಾಗಿರಲಿಲ್ಲ. ದಿಲ್ಲಿಯು ಬ್ರಿಟಿಷರ ವಶವಾದ ಬಳಿಕ ಬಹುಜನ ದಂಗೆಗಾರರು ಅಲ್ಲಿಂದ ಪಾರಾಗಿ ಲಕನೌವಿಗೆ ಬಂದು ಸೇರಿದರು. ಆದುದರಿಂದ ಅಲ್ಲಿ ಬ್ರಿಟಿಷ ಬಲವು ಹೆಚ್ಚಿದಂತೆಯೇ ದಂಗೆಗಾರ ಸೈನ್ಯವೂ ಹೆಚ್ಚಿತು.

ದಿಲ್ಲಿಯಲ್ಲಿ ವಿಜಯಶಾಲಿಗಳಾದ ಬ್ರಿಟಿಷ ಸೈನಿಕ ಸೇನಾಪತಿಗಳು ನೇಪಾಳದ ಮುಖ್ಯಮಂತ್ರಿ ಜಂಗಬಹಾದ್ದೂರನ ಮೂರು ಸಾವಿರ ಅಪ್ರತಿಮ ವೀರ ಗುರ್ಖಾ ಸೈನ್ಯದೊಡನೆ ಲಕನೌವಿಗೆ ಹೊರಟರು. ಹಿಂದುಸ್ತಾನದ ಮುಖ್ಯ ಸೇನಾಪತಿಯಾಗಿ ನಿಯಮಿಸಲ್ಪಟ್ಟು ಇಂಗ್ಲಂಡದಿಂದ ಹೊರಟ ಸರ್ ಕಾಲಿನ್ ಕ್ಯಾಂಬೆಲ್ ಸಾಹೇಬನೂ ನೌಕಾಬಲದ ಅಧಿಪತಿ ಕ್ಯಾಪ್ಟನ್ ಪೀಲಸಾಹೇಬನೂ ಮಾರಿಷಸ್ ಚೀನಗಳಿಂದ ಹೊರಟ ಸೈನ್ಯವೂ ಕಲಕತ್ತೆಗೆ ಬಂದುವು. ಆ ಬಳಿಕ ಕ್ಯಾಂಬೆಲ್ ಸಾಹೇಬನು ಆ ಎಲ್ಲ ಸೈನ್ಯದ ವ್ಯವಸ್ಥೆ ಮಾಡಿಕೊಂಡು ಕಲಕತ್ತೆಯಿಂದ ಹೊರಟು ಅಲಹಾಬಾದ ಕಾನಪುರಗಳ ಮಾರ್ಗವಾಗಿ ಲಕನೌವಿಗೆ ಸಮೀಪಿಸಿ ಅಲಮ್‌ಬಾಗದಿಂದ ಆರುಮೈಲು ದೂರದಲ್ಲಿದ್ದ **ಬಂತೇರಾದ** ಬಯಲಿಗೆ ಬಂದು ಮುಟ್ಟಿದನು. ದಾರಿಯಲ್ಲಿ ಆತನು ದೇಶದ ಬಹು ದುಃಖದಾಯಕವಾದ ಸ್ಥಿತಿಯನ್ನು ಕಂಡು ಕಳವಳಗೊಂಡನು. ಕಲಕತ್ತೆಯಿಂದ ಪೇಶಾವರಕ್ಕೆ ಹೋಗುವ ರಾಜಮಾರ್ಗಕ್ಕೆ ಸಮೀಪಿಸಿದ ಯಾವ ಹಳ್ಳಿಯಲ್ಲಿಯೂ ಜನವಸತಿಯಿರಲಿಲ್ಲ. ಒಂದು ಕಾಲದಲ್ಲಿ ದಟ್ಟಾದ ಜನವಸತಿಯಿಂದ ಕಿಕ್ಕಿರಿದ ಹಳ್ಳಿಯ ದಾರಿಗಳು ಈಗ ಶವದ ರಾಶಿಗಳಿಂದ ತುಂಬಿ ಹೋಗಿದ್ದುವು; ಕೊಳೆತ ಶವಗಳ ದುರ್ವಾಸನೆಯಿಂದ ದುರ್ಗಂಧಮಯವಾಗಿದ್ದುವು. ಸೇನಾಪತಿ ಕ್ಯಾಂಬೆಲ್ ಸಾಹೇಬನು ಬಂತೇರಾದ ಶಿಬಿರದಲ್ಲಿ ದಿಲ್ಲಿಯಿಂದಲೂ ನೇಪಾಳದಿಂದಲೂ ಬಂದ ಸೈನ್ಯವನ್ನು ಕೂಡಿಕೊಂಡು ಲಕನೌವಿನ ಮೇಲೆ ಸಾಗಿಹೋಗುವ ವಿಚಾರದಲ್ಲಿ ತೊಡಗಿದ್ದನು. ಆದರೆ ಆತನಿಗೆ ಲಕನೌನಗರದ ಅಂತಸ್ಥ ರಚನೆಯು ಚೆನ್ನಾಗಿ ತಿಳಿದಿರಲಿಲ್ಲವಾಗಿ ಸೇನಾಚಾಲನೆಗೆ ಹೆಚ್ಚು ಅನುಕೂಲವಾದ ದಾರಿಯನ್ನು ತಿಳಿದುಕೊಳ್ಳುವುದು ಅತ್ಯವಶ್ಯವಾಗಿದ್ದಿತು.

# ನಾಲ್ಕನೆಯ ಪರಿಚ್ಛೇದ

## ಕ್ಯಾಂಬೆಲ್ ಸಾಹೇಬನ ವಿಜಯ

"Owing to his grand design, vigorously executed, Sir Colin Campbell was able with five thousand men to totally defeat an army of twenty five thousand men.

—*Forrest*.



ದಿಲ್ಲಿಯಲ್ಲಿ ಸ್ಥಾಪಿತವಾದ ಮೊಗಲ್ ಬಾದಷಾಹಿಯು ಬಹು ದಿವಸ ಬಾಳಲಿಲ್ಲ. ಪಂಜಾಬ ಪ್ರಾಂತವು ಕಡೆತನಕ ಶಾಂತವಾಗಿಯೇ ಉಳಿಯಿತು. ಶೀಖ ಸೈನಿಕರು ಮೊಗಲ್ ಬಾದಷಾಹಿಯ ಉತ್ಕರ್ಷಕಾಲದಲ್ಲಿ ಮಹಮ್ಮದೀಯರು ತಮ್ಮ ಮೇಲೆ ನಡೆಯಿಸಿದ ಅತ್ಯಾಚಾರಗಳನ್ನು ನೆನೆದು ಬ್ರಿಟಿಷರೊಡನೆ ನಿಷ್ಠೆಯಿಂದ ನಡೆದುದಲ್ಲದೆ ಮಹಮ್ಮದೀಯರ ವಿರುದ್ಧ ಶಸ್ತ್ರವನ್ನೆತ್ತಿದರು. ಕಡುಗಲಿ ಗುರ್ಖಾ ಸೈನ್ಯವು ಬ್ರಿಟಿಷರಿಗೆ ನೆರವಾಯಿತು. ಪತಿಯಾಲಾ, ನಾಭಾ, ಝಿಂದ ಮುಂತಾದ ಸಂಸ್ಥಾನಿಕರೂ ರಜಪೂತ ರಾಜರೂ ಬ್ರಿಟಿಷರಿಗೆ ಪರಿಪರಿಯಿಂದ ಸಹಾಯ ಮಾಡಿದರು. ನಿಕಲ್‌ಸನ, ಹಡಸನ್, ವಿಲಸನ್ ಮುಂತಾದ ಸೇನಾಧಿಕಾರಿಗಳು ಕಡುಗಲಿತನದಿಂದ ಕಾದಿದರು; ಯುಕ್ತಿ ಪ್ರಯುಕ್ತಿಗಳಿಂದ ಹಗೆಗಳನ್ನು ಹಣ್ಣುಮಾಡಿದರು. ಸಪ್ಟಂಬರ್ ತಿಂಗಳ ೧೫ನೆಯ ತಾರೀಖಿಗೆ ದಿಲ್ಲಿಯು ಬ್ರಿಟಿಷರ ಆಧೀನವಾಯಿತು. ರಜ್ಜಬಅಲ್ಲಿ ಇಲಾಹಿಬಕ್ಷರ ಸಂಚಿನಿಂದ ವೃದ್ಧ ಬಹದ್ದೂರಷಹನೂ ಆತನ ಮಕ್ಕಳೂ ಸೆರೆಸಿಕ್ಕಿದರು. ಬಹದ್ದೂರಷಹನನ್ನು ಬ್ರಹ್ಮದೇಶದಲ್ಲಿ ಪೇಗೂ ಪಟ್ಟಣದಲ್ಲಿ ಸೆರೆಯಾಳಾಗಿರಲು ಕಳುಹಿ ರಾಜಕುಮಾರರನ್ನು ನಿಷ್ಕರುಣೆಯಿಂದ ಕೊಂದುಬಿಟ್ಟರು. ಈ ರೀತಿ ಮೊಗಲ್ ಬಾದಷಾಹಿಯು ಕೊನೆಗಂಡಿತು. ಮುಖ್ಯ ನಾಯಕನೂ ಮುಖ್ಯ ಕೇಂದ್ರವೂ ಹಗೆಗಳ ವಶವಾಗಿ ದಂಗೆಗಾರರ ಅಂತರ್ಬಾಹ್ಯ ಶಕ್ತಿಗಳೆರಡೂ ಕುಂದಿ ಹೋದುವು.

ಬ್ರಿಟಿಷ ಸೈನ್ಯವನ್ನು ಕಂಡು ವಿರೋಧಿಗಳು ಯುದ್ಧವನ್ನು ಹೂಡಿದರು. ಅವರು ದಾರಿಯ ಎಡಬಲದ ಕಟ್ಟಡಗಳಲ್ಲಿ ಅಡಗಿ ಕುಳಿತು ತೋಫು ತುಬಾಕಿಗಳಿಂದ ಹಗೆಗಳ ಮೇಲೆ ಗುಂಡಿನ ಮಳೆಗರೆಯುತ್ತಿದ್ದರು. ಅಜಸ್ರವಾಗಿ ಸುರಿಯುವ ಅಗ್ನಿವೃಷ್ಟಿಯನ್ನು ಗಣಿಸದೆ ಬ್ರಿಟಿಷ ಸೈನ್ಯವು ಮುಂದೆ ಸಾಗಿತು. ಸೇನಾಪತಿ ಔಟ್ರ್ಯಾಮ್ ಸಾಹೇಬನ ಬಲಭುಜಕ್ಕೆ ಒಂದು ಗುಂಡು ಬಡಿಯಿತು. ಗಾಯದ ಮೇಲೆ ಎಡದ ಕೈಯನ್ನು ಒತ್ತಿಹಿಡಿದುಕೊಂಡು ಸೇನಾಪತಿಯು ಅಶ್ವಾರೋಹಿಯಾಗಿ ಮುಂದೆ ಸಾಗಿದನು. ಆತನು ಉದ್ದಿಷ್ಟಸ್ಥಾನವನ್ನು ಸೇರಿದ ಹೊರತು ಗಾಯವನ್ನು ಕಟ್ಟುವುದಿಲ್ಲೆಂದು ಪ್ರತಿಜ್ಞೆಮಾಡಿದ್ದನು. ಬ್ರಿಟಿಷ ಸೈನ್ಯವು ಖಾಕಬಾಜಾರದ ಮಹಾದ್ವಾರಕ್ಕೆ ಸಮೀಪಿಸಿತು. ಸೇನಾಪತಿ ನೀಲಸಾಹೇಬನು ತುಸ ಹಿಂದೆ ಉಳಿದು ಗೋಲಂದಾಜ ಸೈನ್ಯವನ್ನು ನಿರೀಕ್ಷಿಸುವುದಕ್ಕಾಗಿ ತಿರುಗಿ ನೋಡಿದನು. ಮಹಾದ್ವಾರದ ಮೇಲ್ಭಾಗದಲ್ಲಿ ತುಬಾಕಿಯ ಧ್ವನಿಯಾಯಿತು. ಒಂದು ಗುಂಡು ಸುಯ್ಯೆಂದು ಧ್ವನಿಮಾಡಿ ನೀಲಸಾಹೇಬನ ತಲೆಯ ಮೇಲಿಂದ ಹಾಯ್ದು ಹೋಯಿತು. ಮತ್ತೊಮ್ಮೆ ತುಬಾಕಿಯ ಧ್ವನಿಯಾಯಿತು. ಇನ್ನೊಂದು ಗುಂಡು ಆತನ ಎಡಗಿವಿಯ ಬಳಿಯಲ್ಲಿ ತಲೆಯೊಳಗೆ ಸೇರಿತು. ಸಾಹೇಬನು ಕುದುರೆಯಿಂದ ಉರುಳಿದನು. "ಇಂದು ನನ್ನ ಹೆಸರು ಮೆಹೆರ್ ಜಾನ್" ಎಂದುದು ಮರಣೋನ್ಮುಖನಾದ ನೀಲಸಾಹೇಬನಿಗೆ ಕೇಳಿಸಿತು. ಆತನು ಹೀಗೆ ಈ ಹೆಸರು ಕೇಳಿದುದು ಎರಡನೆಯ ಸಾರಿ.

ಬ್ರಿಟಿಷ ಸೈನ್ಯವು ಅಗ್ನಿಚಕ್ರದೊಳಗಿಂದ ಹಾಯ್ದು ಹೋಗುವ ಸರ್ಕಸಿನ ಕುದುರೆಯಂತೆ ಪಾರಾಗಿ ಹೋಗಿ ಮಧ್ಯರಾತ್ರಿಯ ಸಮಯಕ್ಕೆ ಉದ್ದಿಷ್ಟ ಸ್ಥಾನವನ್ನು ಸೇರಿತು. ಮುತ್ತಿಗೆಯಲ್ಲಿ ಸಿಕ್ಕಿದ್ದವರು ಅತ್ಯಾನಂದದಿಂದ ಅವರನ್ನು ಇದಿರುಗೊಂಡು ಸನ್ಮಾನಿಸಿದರು. ಇಂತು ಹ್ಯಾವಲಾಕ್ ಸಾಹೇಬನು ದಾರಿಯಲ್ಲಿ ಅಸಂಖ್ಯ ಪ್ರಾಣಗಳನ್ನು ಆಹುತಿಕೊಡಬೇಕಾದರೂ ಕೊನೆಗೆ ವಿಜಯಶಾಲಿಯಾದನು. ಬಹುಕಾಲದ ಅನುಭವಶಾಲಿ ವೀರ ಹ್ಯಾವಲಾಕ್ ಸಾಹೇಬನು ಕೇವಲ ವಿಜಯಾನಂದಕ್ಕಿಂತಲೂ ಹೆಚ್ಚಿನ ಆವುದೋ ಒಂದು ಆನಂದದಿಂದ ಮೈಮರೆತನು.

---

ಮಾತಾಡಿ ಸರಕಾರದವರು ಈ ವಿಷಯದಲ್ಲಿ ಸಂಪೂರ್ಣ ವಿಚಾರಮಾಡದೆ ಕೆಲಸ ಮಾಡಿರುವರೆಂದೂ ನೀನೇ ಮುಖ್ಯ ಸೇನಾಪತಿಯಾಗಿರಬೇಕೆಂದೂ ತಾನು ನಿನ್ನ ಕೈಕೆಳಗೆ ದಿವಾಣೀ ಅಧಿಕಾರಿಯಾಗಿದ್ದು ತಕ್ಕ ಸಹಾಯ ಮಾಡುತ್ತಿರುವೆನೆಂದೂ ಹೇಳಿದನು. ಮತ್ತು ಈ ಸಂಗತಿಯನ್ನು ಕೈಕೆಳಗಿನ ಎಲ್ಲ ಅಧಿಕಾರಿಗಳಿಗೆ ತಿಳುಹಿದನು. ಆತನ ಔದಾರ್ಯವನ್ನು ಕಂಡು ಹ್ಯಾವಲಾಕ್ ಸಾಹೇಬನಿಗೆ ಅತ್ಯಾನಂದವಾಯಿತು. ಆ ಬಳಿಕ ಇಬ್ಬರೂ ಕೂಡಿ ಲಕನೌವಿಗೆ ಹೊರಡುವ ಸಿದ್ಧತೆ ನಡೆಯಿಸಿದರು. ಕರ್ನಲ್ ನೀಲ ಸಾಹೇಬನಿಗೂ ಒಂದು ಸೇನಾವಿಭಾಗವು ಒಪ್ಪಿಸಲ್ಪಟ್ಟಿತು. ಮೂವರೂ ಸೇನಾಧಿಕಾರಿಗಳು ಒಮ್ಮನಸ್ಸಿನಿಂದ ಪ್ರಬಲವಾದ ಸೇನಾಚಾಲನೆಯಲ್ಲಿ ತೊಡಗಿ ಲಕನೌವಿಗೆ ಹೊರಟರು. ಸರಕಾರವು ಅವಸರದಲ್ಲಿ ಮಾಡಿದ ತಪ್ಪನ್ನು ಔಟ್ರ್ಯಾಮ ಸಾಹೇಬನು ಸ್ವಾರ್ಥತ್ಯಾಗದಿಂದ ತಿದ್ದಿ ಸರಿ ಪಡಿಸಿದನು. ಬ್ರಿಟಿಷ ಅಧಿಕಾರಿಗಳಲ್ಲಿ ಇಂತಹ ಸ್ವಾರ್ಥತ್ಯಾಗ, ಇಂತಹ ದೂರದೃಷ್ಟಿ, ಇಂತಹ ಸ್ವಜನಾಭಿಮಾನ-ಸ್ವದೇಶಾಭಿಮಾನಗಳಿದ್ದುದರಿಂದಲೇ ಅವರು ಮಣ್ಣುಮುಟ್ಟಿದರೆ ಹೊನ್ನಾಯಿತು ; ಎಂತಹ ವಿಪತ್ಕಾಲವೊದ ಗಿದರೂ ಅದನ್ನು ಸುರಕ್ಷಿತವಾಗಿ ದಾಟಿ ಪುನಃ ಸುಖಶಾಂತಿಗಳನ್ನು ಹೊಂದಿದರು;ಭರತಖಂಡದಲ್ಲಿ ವಿಜಯಶಾಲಿಗಳಾಗಿ ಮಹಾಸಾಮ್ರಾಜ್ಯಾಧಿ ಕಾರಿಗಳಾದರು. ಇಂತಹ ಗುಣಗಳಿಲ್ಲದ ದಂಗೆಗಾರರು ಮಣ್ಣುಗೂಡಿದರು.

ಸಪ್ಟಂಬರ ತಿಂಗಳ ೨೧ನೆಯ ತಾರೀಖಿನ ದಿನ ಬ್ರಿಟಿಷ ಸೇನೆಯು ಎರಡನೆಯ ಸಾರಿ ಗಂಗಾನದಿಯನ್ನು ದಾಟಿ ಲಕನೌವಿಗೆ ಹೊರಟಿತು. ಅವರು ಹಿಂದಿನಂತೆ ಮಂಗಳವಾರ ನಸೀರಗಂಜಗಳಲ್ಲಿ ಯುದ್ಧಮಾಡಿ ಶತ್ರು ಸೈನ್ಯ ವನ್ನು ಚೆದರಿಸಿ ಮುಂದೆ ಸಾಗಿದರು. ಅವಿರತವಾದ ಅತಿವೃಷ್ಟಿಯಿಂದ ದಾರಿ ಯಲ್ಲಿ ಅವರು ಬಹು ಕಷ್ಟನಷ್ಟಗಳನ್ನು ಅನುಭವಿಸಬೇಕಾಯಿತು. ಅವರು ನಾಲ್ಕು ದಿನಗಳ ತರುವಾಯ ಲಕನೌವಿಗೆ ಸಮೀಪಿಸಿದರು. ಇಷ್ಟರಲ್ಲಿ ಬ್ರಿಟಿಷರು ದಿಲ್ಲಿಯಲ್ಲಿ ವಿಜಯಿಶಾಲಿಗಳಾದ ವಾರ್ತೆಯು ಲಕನೌವಿಗೆ ಮುಟ್ಟಿತು. ಮುತ್ತಿಗೆಯಲ್ಲಿ ಸಿಕ್ಕಿದ್ದ ಬ್ರಿಟಿಷರು ಆನಂದದಿಂದ ತೋಫು ಗಳನ್ನು ಹಾರಿಸಿದರು. ಅದೇ ವೇಳೆಗೆ ಕಲಕತ್ತೆಯಿಂದ ತಮಗೆ ಸಹಾಯವು ಬಂದಿರುವ ವಾರ್ತೆಯೂ ತಿಳಿಯಲು ಅವರು ಆನಂದದಿಂದ ಮೈಮರೆತರು.

ಬ್ರಹ್ಮಾವರ್ತದಲ್ಲಿ ದಂಗೆಗಾರರನ್ನು ಹಿಮ್ಮೆಟ್ಟಿಸಿದ ಬಳಿಕ ಹ್ಯಾವಲಾಕ್ ಸಾಹೇಬನು ತಿರುಗಿ ಕಾನಪುರಕ್ಕೆ ಬಂದನು. ನೀಲಸಾಹೇಬನಂತೆಯೇ ಲಾರ್ಡ್ ಕ್ಯಾನಿಂಗ್ ಸಾಹೇಬನಿಗೂ ಹ್ಯಾವಲಾಕನು ಲಕನೌವಿಗೆ ಸಾಗಿ ಹೋಗದೆ ತಿರುಗಿ ಬಂದುದು ಅಯೋಗ್ಯವೆನಿಸಿತು. ಇಬ್ಬರಿಗೂ ನಿಜವಾದ ಪರಿಸ್ಥಿತಿ ಗೊತ್ತಿರಲಿಲ್ಲ. ಸರ್ ಜೇಮ್ಸ್ ಔಟ್ರ್ಯಾಮನೆಂಬ ರಣಕುಶಲ ಸೇನಾಪತಿಯು ಆಗಲೆ ಕಲಕತ್ತೆಗೆ ಬಂದು ಮುಟ್ಟಿದ್ದನು. ಗವರ್ನರ್ ಜನರಲನು ಆತನನ್ನು ಮುಖ್ಯ ಸೇನಾಪತಿಯಾಗಿ ನಿಯಮಿಸಿ ಲಕನೌವಿಗೆ ಸಹಾಯಮಾಡುವುದಕ್ಕೆ ಇನ್ನೊಂದು ಸೇನಾವಿಭಾಗದೊಡನೆ ಕಳುಹಿದನು. ಹ್ಯಾವಲಾಕ್ ಸಾಹೇಬನು ಈ ಸಂಗತಿಯನ್ನು ಕೇಳಿ ಬಹು ದುಃಖಿತನಾದನು. ಅತ್ಯಂತ ಕುಶಲತೆಯಿಂದಲೂ ಸಾಹಸದಿಂದಲೂ ಹಲವು ಕಡೆಗಳಲ್ಲಿ ಹಗೆಗಳೊಡನೆ ಕಾದಾಡಿ ವಿಜಯ ಸಂಪಾದಿಸಿದುದಲ್ಲದೆ ಅವಿವೇಕದ ಸಾಹಸದಿಂದ ಮುಂದೆ ಒದಗಬಹುದಾದ ಅನರ್ಥ ಪರಂಪರೆಯನ್ನು ತಪ್ಪಿಸಿ ಬೇನೆಬೇಸರಿಕೆಗಳಿಂದಲೂ ರಣಭೂಮಿಯಲ್ಲಿಯೂ ಅಳಿದುಳಿದ ಸೈನ್ಯವನ್ನು ಸುರಕ್ಷಿತವಾಗಿ ಕಾನಪುರಕ್ಕೆ ತಂದು ಮುಟ್ಟಿಸಿದ ಮಹತ್ಕಾರ್ಯಕ್ಕೆ ಪ್ರತಿಯಾಗಿ ಕಲಕತ್ತೆಯ ಪ್ರಾಸಾದದಲ್ಲಿ ಕುಳಿತು ಸುಖವಿಲಾಸಗಳಲ್ಲಿದ್ದ ಅಧಿಕಾರಿಗಳು ತನ್ನನ್ನು ಹೀಗೆ ಅಪಮಾನಗೊಳಿಸಿದುದನ್ನು ಕಂಡು ಹ್ಯಾವಲಾಕ್ ಸಾಹೇಬನು ಮನಸ್ಸಿನಲ್ಲಿ ಬಹುವಾಗಿ ಮರುಗಿದನು.

ಸೇನಾಪತಿ ಔಟ್ರ್ಯಾಮ್ ಸಾಹೇಬನು ಕಲಕತ್ತೆಯಿಂದ ಹೊರಟು ದಾರಿಯಲ್ಲಿ ಅನೇಕ ಕಡೆಗಳಲ್ಲಿ ದಂಗೆಗಾರರೊಡನೆ ಕಾದಾಡಿ ಅವರನ್ನು ಚೆದರಿಸುತ್ತ ಸಪ್ಟಂಬರ್ ತಿಂಗಳ ೧೬ನೆಯ ತಾರೀಖಿಗೆ ಕಾನಪುರಕ್ಕೆ ಮುಟ್ಟಿದನು. ಆತನು ಯುದ್ಧವಿದ್ಯಾವಿಶಾರದನಾಗಿದ್ದಂತೆಯೇ ವ್ಯವಹಾರ ಚತುರನೂ ಆಗಿದ್ದನು. ಸ್ವಾರ್ಥಕ್ಕಿಂತಲೂ ಸ್ವದೇಶಹಿತವೇ ಮುಖ್ಯವಾದುದೆಂದೂ ಇಂತಹ ಆಪತ್ಕಾಲದಲ್ಲಿ ತನ್ನ ಸಹಕಾರಿಯೊಬ್ಬನ ಮನಸ್ಸು ನೋಯಿಸುವುದು ಸರಿಯಲ್ಲವೆಂದೂ ಆತನು ಭಾವಿಸಿದನು. ಸರಕಾರದವರು ತನ್ನನ್ನು ಮುಖ್ಯ ಸೇನಾಪತಿಯನ್ನಾಗಿ ನಿಯಮಿಸಿದಂದಿನಿಂದ ಹ್ಯಾವಲಾಕ್ ಸಾಹೇಬನು ಅಸಂತುಷ್ಟನಾಗಿರುವನೆಂಬುದನ್ನು ಆತನು ಕಂಡುಕೊಂಡನು. ಕಾನಪುರಕ್ಕೆ ಮುಟ್ಟಿದೊಡನೆ ಆತನು ಹ್ಯಾವಲಾಕ್ ಸಾಹೇಬನನ್ನು ಕಂಡು

ಸೈನಿಕರು ಒಬ್ಬ ಅಪರಾಧಿಯೊಡನೆ ಅಲ್ಲಿಗೆ ಬಂದು "ಈತನು ಲಕನೌವಿನಿಂದ ಬಂದ ಗುಪ್ತಚರನೆಂದೂ ನಾಳೆ ಮುಂಜಾನೆ ಈತನಿಗೆ ಮರಣ ದಂಡನೆಯಾಗತಕ್ಕದ್ದಿರುವುದರಿಂದ ಈತನನ್ನು ನಿಮ್ಮ ಕಾವಲಿನಲ್ಲಿಟ್ಟುಕೊಳ್ಳಬೇಕೆಂದೂ ಹೇಳಿದರು. ಅಪರಾಧಿಯು ಪಹರೆಯವರಲ್ಲಿ ಒಬ್ಬನ ಮುಖವನ್ನು ದಿಟ್ಟಿಸಿ ನೋಡಿದನು. ಆತನು ಆಶ್ಚರ್ಯದಿಂದ "ಜಿಮಿಗ್ರೀನ್" ಎಂದನು.

ಅಪರಾಧಿಯು ಮುಂಜಾನೆ ಹಣ್ಣಿನ ವ್ಯಾಪಾರಿಯಾಗಿದ್ದ ಜಿಮಿಗ್ರೀನನಾಗಿದ್ದನು. ಮಿಚೆಲ್ ಸಾಹೇಬನು ಆತನನ್ನು ಗುರುತಿಸಿ ಹತ್ತಿರ ಕುಳ್ಳಿರಿಸಿಕೊಂಡು ಎಲ್ಲ ಸಮಾಚಾರಗಳನ್ನು ತಿಳಿದುಕೊಳ್ಳಲು ಪ್ರಾರಂಭಿಸಿದನು. ಅವರಾಡಿಕೊಂಡ ಮಾತುಗಳಲ್ಲಿ ಕೆಲವನ್ನು ಇಲ್ಲಿ ಹೇಳುವೆವು.

"ಸಾಹೇಬ, ಯುರೋಪಿಯನರು ಅತಿ ಕ್ರೂರರು. ಅವರು ನನಗೆ ಮರಣದಂಡನೆಯನ್ನು ವಿಧಿಸಿದರು. ಕೆಲವು ದಿನಗಳ ಹಿಂದೆ ಕಾನಪುರದಲ್ಲಿ ಶತ್ರುಗಳ ಕೈಗೆ ಸಿಕ್ಕಿದ ಗುಪ್ತಚರ ಶೆಫರ್ಡ ಸಾಹೇಬನಿಗೆ ನಾನಾಸಾಹೇಬನು ಮೂರೇ ವರುಷ ಸಶ್ರಮ ಶಿಕ್ಷೆಯನ್ನು ವಿಧಿಸಿದ್ದನು. ಮುಂದೆ ಆತನು ಹ್ಯಾವಲಾಕ್ ಸಾಹೇಬನು ಬಂದೊಡನೆ ಬಿಡುಗಡೆ ಹೊಂದಿದನು."

"ಅಣ್ಣಾ, ಈ ಮಾತನ್ನು ನಾವು ಒಪ್ಪಿಕೊಳ್ಳಬೇಕಾಗುವುದು. ನಮ್ಮವರು ಯುರೋಪಿಯನರ ಸಂಗಡ ಯುದ್ಧ ಮಾಡುವ ರೀತಿಯೇ ಬೇರೆ. ಏಶಿಯದವರೊಡನೆ ನಡೆಯುವ ನಡತೆಯೇ ಬೇರೆ. ಈಗಿನ ಬಂಡಾಯದ ಕಾಲದ ಯುದ್ಧನೀತಿಯಂತೂ ತುಂಬ ಉಗ್ರವಾಗಿರುವುದು. ಇಂತಿರುವಾಗ ಲಷ್ಕರೀ ಕಾಯದೆಯ ನ್ಯಾಯಾಧೀಶರ ವಿಚಾರಕ್ರಮವನ್ನು ಕೇಳುವುದೇನಿದೆ? ಫತ್ತೇಗಡದಲ್ಲಿ ಒಂದೇ ಅಶ್ವತ್ಥವೃಕ್ಷಕ್ಕೆ ೧೩೦ಕ್ಕಿಂತ ಹೆಚ್ಚು ಜನರನ್ನು ಪಾಶಕ್ಕೆ ಏರಿಸಿದರು. ನಮ್ಮ ಸೇನಾಪತಿ ಕ್ಯಾಂಬೆಲ್ ಸಾಹೇಬನು ಫತ್ತೇಗಡದಿಂದ ತಿರುಗಿ ಬರುವಾಗ ಒಂದು ಮಾವಿನ ಬನದಲ್ಲಿ ಸೇರಿದಾಗ ಅಲ್ಲಿಯ ಒಂದೊಂದು ಗಿಡದ ಶಾಖೆಗೂ ತೂಗಾಡುತ್ತಿರುವ ದಂಗೆಗಾರರ ಹತ್ತೆಂಟು ಶವಗಳು ಕೊಳೆತು ಬೀಳುತ್ತಿರುವುದನ್ನು ಕಂಡು ತಮ್ಮವರು ವಿಧಿಸಿದ ಇಂತಹ ಕ್ರೂರ ಶಾಸನಕ್ಕಾಗಿ ಬಲು ನೊಂದುಕೊಂಡನು."

"ನಾಳೆಯೇ ನನಗೆ ದೇಹಾಂತ ಶಿಕ್ಷೆಯಾಗುವುದು. ಅದಕ್ಕಾಗಿ ನನಗೆ ಚಿಂತೆಯಿಲ್ಲ. ಹುಟ್ಟಿದವನು ಸಾಯಲೇಬೇಕು. ಆದರೆ ನಿಮ್ಮವರು

ನನ್ನ ಧರ್ಮನಾಶಕ್ಕೆ ಯತ್ನಿಸುತ್ತಿದ್ದಾರೆ. ನಾನು ಮಹಮ್ಮದೀಯನು. ಅವರು ನನಗೆ ತಿನ್ನಿಸಲಿಕ್ಕೆ ಹಂದಿಯ ಮಾಂಸವನ್ನು ತರಲು ಹೋಗಿದ್ದಾರೆ."

"ಇತ್ತೀಚಿಗೆ ಅವರು ಅಂತಹ ಅವಿಚಾರದ ಕಾರ್ಯ ನಡೆಯಿಸುತ್ತಿದ್ದಾರೆ. ಫತ್ತೇಗಡದಲ್ಲಿ ಹಲವರ ಮೈಗೆ ಹಂದಿಯ ನೆಣವನ್ನು ಲೇಪಿಸಿ ಹಂದಿಯ ಮಾಂಸವನ್ನು ತಿನ್ನಿಸಿ ಆ ಬಳಿಕ ಕೊಲೆಗಲ್ಲಿಗೆ ಏರಿಸಿದರು. ಆದರೆ ಅಣ್ಣಾ, ನೀನು ಹೆದರಬೇಡ. ನಿನ್ನ ಜೀವರಕ್ಷಣೆ ಮಾಡುವುದು ನನ್ನ ಕೈಯಲ್ಲಿಲ್ಲದಿದ್ದರೂ ನಾನು ನಿನ್ನ ಧರ್ಮರಕ್ಷಣೆ ಮಾಡಬಹುದಾಗಿದೆ."

"ಸಾಹೇಬ, ಸಾಕು. ನನಗೆ ಹೆಚ್ಚಿಗಿನ್ನೇನೂ ಬೇಕಾಗಿಲ್ಲ. ಅಲ್ಲಾ ನಿಮ್ಮ ಸಕಲ ಕಷ್ಟಗಳನ್ನೂ ಪರಿಹಾರ ಮಾಡಿ ರಕ್ಷಿಸಲಿ."

"ನೀನು ಸಾಯಂಕಾಲದ ನಮಾಜನ್ನು ಮಾಡಿಕೊ. ಶಿಬಿರದಲ್ಲಿದ್ದ ಮಹಮ್ಮದೀಯರ ಅಂಗಡಿಯಿಂದ ನಿನ್ನ ಊಟದ ಸಾಮುಗ್ರಿಗಳನ್ನು ತರುವುದಕ್ಕೆ ಆಳು ಕಳುಹಿರುವೆನು."

ಪ್ರಹರಿಗಳ ಅಧಿಕಾರಿ ಮಿಚೆಲ್ ಸಾಹೇಬನೂ ಅಪರಾಧಿಯೂ ತಮ್ಮ ತಮ್ಮ ಊಟ ತೀರಿಸಿ ಮತ್ತೆ ಮಾತಾಡುತ್ತ ಕುಳಿತರು.

"ದೇವರು ದಯಾಮಯನು. ಮರಣಸಮಯವು ಸಮೀಪಿಸಿರುವಾಗ ಇಂತಹ ದಯಾಶೀಲ ಸಾಹೇಬರ ಸಹವಾಸವನ್ನು ಒದಗಿಸಿಕೊಟ್ಟನು. ಸಾಹೇಬ, ನೀವು ನನ್ನ ಪರಿಚಯವನ್ನು ತಿಳಿಯಬೇಕೆಂದಿರಲ್ಲವೇ ? ನಾನು ಲಕನೌವಿನಿಂದ ಗುಪ್ತಚರನಾಗಿ ಬಂದುದು ನಿಜ; ಆದರೆ ನಾನು ಅಷ್ಟು ಸಾಮಾನ್ಯ ವ್ಯಕ್ತಿಯಲ್ಲ. ನಾನು ಲಕನೌವಿನ ಸೇನಾಚಾಲಕರಲ್ಲಿ ಒಬ್ಬನು; ಸೈನ್ಯದ ಮುಖ್ಯ ಇಂಜನೀಯರನು. ನಿಮ್ಮ ಸೈನ್ಯದ ಬಲಾಬಲಗಳನ್ನೂ ನಿಮ್ಮ ತೋಫು ತುಬಾಕಿಗಳ ಶಕ್ತಿ ರಚನೆ ಮುಂತಾದುವನ್ನೂ ತಿಳಿದುಕೊಳ್ಳಬೇಕೆಂದು ಬಂದಿದ್ದೆನು. ಅವೆಲ್ಲವನ್ನೂ ತಿಳಿದುಕೊಂಡು ತಿರುಗಿ ಹೊರಟಿದ್ದೆನು. ಆದರೆ ನಿಮ್ಮವರು ಎಲ್ಲ ಮದ್ದು ಗುಂಡುಗಳನ್ನೂ ತೋಫು ತುಬಾಕಿಗಳನ್ನೂ ಸಂಗಡಲೇ ಒಯ್ಯುವರೋ, ಕೆಲವನ್ನಾದರೂ ಇಲ್ಲಿಯೇ ಇಟ್ಟು ಹೋಗುವರೋ, ಎಂಬುದನ್ನು ತಿಳಿದುಕೊಳ್ಳಬೇಕೆಂದು ಮತ್ತೊಮ್ಮೆ ಶಿಬಿರದೊಳಗೆ ಬಂದೆನು. ಅಷ್ಟರಲ್ಲಿ ದುಷ್ಪುತ್ರನೊಬ್ಬನು ನನ್ನನ್ನು ಗುಪ್ತಚರನೆಂದು ಹಿಡಿದುಕೊಟ್ಟನು. ನನ್ನ ಸಂಗಡಿದ್ದ ಆಳು ಕಾನಪುರದ ಕೊಲೆಗಾರ

ರಲ್ಲಿ ಒಬ್ಬನಾಗಿದ್ದನೆಂದು ಆತನು ಗುರುತಿಸಿದನು. ಆ ಪಾಷಂಡಿಯು ತನ್ನ ಕವಡೆಯ ಸ್ವಾರ್ಥಕ್ಕಾಗಿ ಮಾತೃಭೂಮಿಯ ಅಮಾಂಗಲ್ಯವನ್ನು ಕೋರಿದನು. ಭಾರತಮಾತೆಯು ಇಂತಹ ದುಷ್ಪುತ್ರರನ್ನು ಪಡೆದಿರುವುದರಿಂದಲೇ ಆಕೆಗೆ ಇಂದು ಇಂತಹ ದುರವಸ್ಥೆಯೊದಗಿದೆ. ಸಾಹೇಬ, ನನ್ನ ಹೆಸರು ಮಹಮ್ಮದ ಅಲ್ಲೀಖಾನ. ನಾನು ರೋಹಿಲಖಂಡದಲ್ಲಿ ಒಂದು ಸುಪ್ರಸಿದ್ಧವಾದ ಮನೆತನದಲ್ಲಿ ಹುಟ್ಟಿದೆನು ಬರೇಲಿಯ ಕಾಲೇಜಿನಲ್ಲಿ ವಿದ್ಯಾಭ್ಯಾಸವಾಯಿತು. ಅಲ್ಲಿಯು ಎಲ್ಲ ಪರೀಕ್ಷೆಗಳಲ್ಲಿ ನಾನೇ ಮೊದಲಿಗನಾಗಿದ್ದೆನು. ಆಮೇಲೆ ರುಡಕಿಯ ಇಂಜನಿಯರಿಂಗ್ ಕಾಲೇಜಿನಲ್ಲಿ ಓದಿದೆನು. ಕಂಪನಿಯ ಸರಕಾರದ ಸೈನ್ಯದಲ್ಲಿ ಕೆಲಸಮಾಡುತ್ತಿದ್ದ ಹಲವರು ಯುರೋಪಿಯನರೂ ದೇಶೀಯರೂ ಆ ಕಾಲೇಜಿನ ಕೊನೆಯ ಪರೀಕ್ಷೆಗೆ ಕುಳಿತಿದ್ದರು. ಅವರೆಲ್ಲರಲ್ಲಿ ನಾನೇ ಹೆಚ್ಚು ಗುಣಗಳನ್ನು ದೊರಕಿಸಿ ಮೊದಲನೆಯವನಾದೆನು. ಆದರೆ ಪರಿಣಾಮವೇನಾಯಿತು ? ನನಗಿಂತ ತೀರ ಕಡಿಮೆ ಯೋಗ್ಯತೆಯವರಾದ ಯುರೋಪಿಯನರಿಗೆಲ್ಲ ಹೆಚ್ಚು ಹೆಚ್ಚು ಅಧಿಕಾರದ ಸ್ಥಳಗಳು ದೊರೆತುವು. ನನಗೆ ಒಬ್ಬ ಜಮಾದಾರನ ಕೆಲಸ ಕೊಟ್ಟರು. ಒಬ್ಬ ಯುರೋಪಿಯನ್ ತರುಣನು ನನ್ನ ಮೇಲಧಿಕಾರಿಯಾಗಿದ್ದನು. ವಿದ್ಯಾಬುದ್ಧಿಗಳಲ್ಲಿ ಆತನು ನನಗಿಂತ ತೀರ ಕನಿಷ್ಠ ತರಗತಿಯವನು. ಇಂಗ್ಲೆಂಡಿನಲ್ಲಾದರೆ ಆತನಿಗೆ ಇಂತಹ ಅಧಿಕಾರದ ಸ್ಥಳವು ಎಂದೂ ದೊರೆಯುತ್ತಿದ್ದಿಲ್ಲ. ಆತನ ಔದ್ಧತ್ಯ ಅಹಂಕಾರ ಸ್ವಾರ್ಥಬುದ್ಧಿ ಇವುಗಳನ್ನು ಕಂಡು ನನ್ನ ಮನಸ್ಸು ಹೇಸಿತು. ನನ್ನ ಯೋಗ್ಯತೆಗೆ ತಕ್ಕ ಸ್ಥಾನ ಮಾನಗಳು ದೊರೆಯಬಹುದೆಂಬ ವಿಚಾರದಿಂದಲ್ಲದೆ ಕೇವಲ ದುಡ್ಡಿನಾಶೆಯಿಂದ ನಾನು ಕಂಪನಿಯ ಸರಕಾರದ ನೌಕರಿಯನ್ನು ಕೈಕೊಂಡಿರಲಿಲ್ಲ. ಅಲ್ಲಿ ನನಗಾದ ಅನ್ಯಾಯವನ್ನೂ ನನ್ನ ಮೇಲಧಿಕಾರಿಯ ಅವಿಚಾರವನ್ನೂ ತಾಳಲಾರದೆ ನಾನು ನೌಕರಿಯನ್ನು ಬಿಟ್ಟು ಬಂದು ಅಯೋಧ್ಯೆಯ ನಬಾಬನ ಆಶ್ರಯವನ್ನು ಹೊಂದಿದೆನು. ಕೆಲವು ದಿನಗಳಲ್ಲಿಯೇ ಇಂಗ್ಲೆಂಡಿಗೆ ಹೊರಟ ನೇಪಾಳದ ಮುಖ್ಯಮಂತ್ರಿ ಜಂಗಬಹದ್ದೂರನಿಗೆ ಒಬ್ಬ ಕಾರ್ಯದರ್ಶಿ (ಸೆಕ್ರೆಟರಿ) ಯು ಬೇಕಾದನು. ನಾನು ಆ ಕೆಲಸವನ್ನು ಒಪ್ಪಿಕೊಂಡು ಇಂಗ್ಲೆಂಡಿಗೆ ಹೋಗಿ ಲಂಡನ್, ಎಡಿನ್‌ಬರೋ ಮುಂತಾದ ನಗರಗಳನ್ನು ನೋಡಿಬಂದೆನು. ಆಗ

ಆ ನಮ್ಮ ಯಜಮಾನನ ಸನ್ಮಾನಕ್ಕಾಗಿ ನಿಮ್ಮ ಹಾಯ್‌ಲಂಡರ್ಸ್ ಸೇನೆಯ ೯೩ ನೆಯ ವಿಭಾಗವು ರಣವೇಷದಲ್ಲಿ ಸಜ್ಜಾಗಿ ನಿಂತಿರುವದನ್ನು ನೋಡಿದ್ದೆನು. ಆದರೆ ಆ ಸೈನ್ಯವು ಇಷ್ಟು ಬೇಗನೆ ನಮ್ಮ ಭರತಭೂಮಿಗೆ ಬಂದು ಈ ರೀತಿ ರಕ್ತದ ಕಾಲುವೆ ಹರಿಯಿಸಬಹುದೆಂದು ಮಾತ್ರ ಊಹಿಸಿರಲಿಲ್ಲ. ಅಲ್ಲಾನ ಮನೋಗತವನ್ನು ಯಾರು ತಾನೇ ತಿಳಿಯಬಲ್ಲರು ?"

"ಇಂಗ್ಲೆಂಡಿನಿಂದ ತಿರುಗಿ ಬಂದಬಳಿಕ ನಾನು ೧೮೫೪ನೆಯ ಇಸವಿಯ ವರೆಗೆ ಬೇರೆ ಬೇರೆ ದೇಶೀಯ ರಾಜರ ದರ್ಬಾರಿನಲ್ಲಿ ಕೆಲಸಮಾಡಿದೆನು. ಆ ವರ್ಷ ಅಜೀಮುಲ್ಲಾಖಾನನು ತನ್ನ ಒಡೆಯ ನಾನಾಸಾಹೇಬ ಪೇಶವೆಯ ಪೆನ್‌ಷನ್ನಿನ ಪ್ರಕರಣದಲ್ಲಿ ವಕೀಲನಾಗಿ ಇಂಗ್ಲೆಂಡಿಗೆ ಹೊರಟನು. ಬಾಲ್ಯದಲ್ಲಿ ಅಜೀಮುಲ್ಲಾಖಾನನೂ ನಾನೂ ಕಾನಪುರದ ಸರಕಾರೀ ಶಾಲೆಯಲ್ಲಿ ಗಂಗಾದೀನನಿಂದ ಇಂಗ್ಲಿಷು ಭಾಷೆಯ ಅಭ್ಯಾಸ ಮಾಡಿದ್ದೆವು. ಅಜೀಮುಲ್ಲಾನೊಡನೆ ನಾನು ಎರಡನೆಯ ಸಾರಿ ಇಂಗ್ಲೆಂಡಿಗೆ ಹೋದೆನು. ಅಲ್ಲಿಯ ಸರಕಾರದಿಂದ ನಮಗೆ ನ್ಯಾಯದೊರೆಯಬಹುದೆಂದೂ ಸಾಧ್ಯವಾದರೆ ಯೋಗ್ಯ ಅಧಿಕಾರಿಗಳಿಗೆ ಉತ್ಕೋಚವನ್ನು ಕೊಟ್ಟಾದರೂ ನಮ್ಮ ಕಾರ್ಯವನ್ನು ಸಾಧಿಸಿಕೊಳ್ಳಬೇಕೆಂದೂ ಆಲೋಚಿಸಿ ವಿಪುಲ ದ್ರವ್ಯವನ್ನು ಸಂಗಡ ತೆಗೆದುಕೊಂಡು ಹೋಗಿದ್ದೆವು; ಆದರೆ ನಾವು ಐದು ಲಕ್ಷ ರೂಪಾಯಿಗಳನ್ನು ಕಳೆದುಕೊಂಡು ಹೋದಹಾದಿಯಲ್ಲಿ ತಿರುಗಿಬರಬೇಕಾಯಿತು. ದಾರಿಯಲ್ಲಿ ಕಾನ್‌ಸ್ಟಾಂಟಿನೋಪಲಕ್ಕೆ ಹೋಗಿದ್ದೆವು. ಅಲ್ಲಿಯ ಕೆಲವು ಜನರು ಭರತಖಂಡದಲ್ಲಿ ಕಂಪನಿಯ ಸರಕಾರದ ವಿರುದ್ಧ ವಿದ್ರೋಹವುಂಟಾದರೆ ತಾವು ಸಹಾಯಮಾಡುವೆವೆಂದು ಹೇಳಿದ್ದರು. ದೇವರು ದೊಡ್ಡವನು. ನಾವಿಂದು ಕೃತಕಾರ್ಯರಾದೆವು. ಕಂಪನಿಯ ಸರಕಾರದ ವಿರುದ್ಧ ಹೂಡಿದ ಬಂಡಾಯವು ಸಂಪೂರ್ಣ ಫಲಕಾರಿಯಾಯಿತೆಂದು ನಾನು ತಿಳಿದೆನು. ನೀವು ನನಗೆ ಕೊಟ್ಟ ವರ್ತಮಾನಪತ್ರಗಳನ್ನೆಲ್ಲ ಓದಿ ನೋಡಿದೆನು. ಅದರಿಂದ ತುಸ ದಿನಗಳಲ್ಲಿಯೇ ಕಂಪನಿಯ ಸರಕಾರದ ಆಡಳಿತವು ತಪ್ಪಿ ಹಿಂದುಸ್ಥಾನವು ವಿಕ್ಟೋರಿಯಾ ಮಹಾರಾಣಿಯವರ ಆಳಿಕೆಗೆ ಒಳಗಾಗುವುದೆಂದು ಸ್ಪಷ್ಟವಾಯಿತು. ನಾವು ನಮ್ಮ ದೇಶವನ್ನು ಸ್ವತಂತ್ರವಾಗಿ ಮಾಡಲಾರದೆ ಹೋದರೂ ನಮ್ಮ ಪ್ರಯತ್ನವು ವ್ಯರ್ಥವಾಗಲಿಲ್ಲ.

ಹಿಂದುಸ್ಥಾನದ ಕಾರ್ಯಭಾರವು ಪಾರ್ಲಿಮೆಂಟಿನ ಅಧಿಕಾರಕ್ಕೆ ಒಳಗಾದ ಬಳಿಕ ಕಂಪನಿಯ ಆಳಿಕೆಯಲ್ಲಾದಷ್ಟು ಅನ್ಯಾಯ ಅತ್ಯಾಚಾರಗಳು ಸಂಭವಿಸಲಾರವೆಂದು ನಾನು ನಂಬಿರುವೆನು. ನಾನೂ ನಮ್ಮ ಅಸಂಖ್ಯಾಕ ವಾದ ದೇಶೀಯ ಸೈನ್ಯವೂ ಇಂದು ಅಪರಿಮಿತ ಕಷ್ಟವನ್ನು ಅನುಭವಿ ಸಿದರೂ ಆ ಕಷ್ಟಕ್ಕೆ ಪ್ರತಿಯಾಗಿ ನಮ್ಮ ಮುಂದಿನ ಪ್ರಜೆಯು ಸುಖವನ್ನು ಅನುಭವಿಸಬಹುದೆಂದು ನಮಗೆ ಸಂತೋಷವಾಗಿದೆ. ಆದರೆ ಕಾನಪುರದಲ್ಲಿ ಘಟಿಸಿದ ಸ್ತ್ರೀಯರ ಮತ್ತು ಬಾಲಕರ ಕೊಲೆಯು ಮಾತ್ರ ನಮ್ಮ ಮನಸ್ಸಿಗೆ ಅತ್ಯಂತ ದುಃಖದಾಯಕವಾಗಿದೆ. ''

" ಆ ಸಮಯದಲ್ಲಿ ನೀನು ಕಾನಪುರದಲ್ಲಿ ಇದ್ದೆಯೇನು ? ''

" ಇಲ್ಲ, ಆಗ ನಾನು ದಿಲ್ಲಿಯಲ್ಲಿದ್ದೆನು. ಸಪ್ಟಂಬರ ತಿಂಗಳಲ್ಲಿ ನಿಮ್ಮ ವರು ದಿಲ್ಲಿಯನ್ನು ವಶಮಾಡಿಕೊಂಡಬಳಿಕ ನಾನು ಲಕನೌವಿಗೆ ಬಂದೆನು. ನೊವ್ಹೆಂಬರ ತಿಂಗಳಲ್ಲಿ ಔಟ್ರ್ಯಾಮ ಸಾಹೇಬನು ಲಕನೌ ರೆಸಿಡೆನ್ಸಿಯಲ್ಲಿದ್ದ ವರಿಗೆ ಸಹಾಯವೊದಗಿಸಲು ಬಂದಾಗ ನಾನು ಅಲ್ಲಿಯೇ ಇದ್ದೆನು. ಈಗ ನಾವು ಕೈಸರ ಬಾಗದಲ್ಲಿ ಭದ್ರವಾದ ದುರ್ಗವನ್ನು ರಚಿಸಿಕೊಂಡಿರುವೆವು. ಪದಾತಿದಳದವರೂ ಗೋಲಂದಾಜರೂ ಸಮ್ಮಿಳಿತರಾಗಿ ಯುದ್ಧಮಾಡಿದರೆ ನೀವು ಅದನ್ನು ಸುಲಭವಾಗಿ ವಶಮಾಡಿಕೊಳ್ಳಲಾರಿರಿ. ''

" ಕಾನಪುರದಲ್ಲಿ ಸೆರೆಸಿಕ್ಕಿದ್ದ ನಮ್ಮ ಹೆಂಗುಸರ ಮಾನಭಂಗವಾಯಿ ತೆಂದು ಹೇಳುವರು. ಅದು ನಿಜವೇನು ? ''

" ಇದು ಶುದ್ಧ ಅನ್ಯಾಯದ ಮಾತು. ದೇಶೀಯರ ಆಚಾರ ವಿಚಾರ ಗಳನ್ನೂ ನಮ್ಮವರಿಗೆ ಸ್ತ್ರೀ ವಿಷಯದಲ್ಲಿದ್ದ ನ್ಯಾಯಬದ್ಧತೆಯನ್ನೂ ತಿಳಿ ದವರು ಯಾರೂ ಈ ಮಾತು ಹೇಳಲಾರರು. ನಿಮ್ಮವರಿಗೆ ದೇಶೀಯರ ಮೇಲಣ ದ್ವೇಷವನ್ನು ಹೆಚ್ಚಿಸುವುದಕ್ಕೆ ಈ ಮಾತು ಹುಟ್ಟಿದೆ. ''

" ಕಾನಪುರದಲ್ಲಿ ಕಟ್ಟಡಗಳ ಗೋಡೆಗಳ ಮೇಲೆ ನಾವು ಪಶು ವೃತ್ತಿಯ ಜನರೊಡನೆ ವ್ಯವಹಾರ ಮಾಡುತ್ತಿದ್ದೇವೆ; ಅವರು ನಮ್ಮ ಕುಲ ವನಿತೆಯರ ಮಾನಭಂಗ ಮಾಡಿದರು; ಮುಂತಾದ ವಾಕ್ಯಗಳನ್ನು ಬರೆದಿರು ವರು. ವರ್ತಮಾನಪತ್ರಗಳಲ್ಲಿಯೂ ಈ ಮಾತು ಪ್ರಸಿದ್ಧವಾಗಿದೆ. ''

" ಇವೆಲ್ಲ ಹಿಂದಿನಿಂದ ಹುಟ್ಟಿದುವು. ಸೇನಾಪತಿ ಔಟ್ರ್ಯಾಮ್

ಹ್ಯಾವಲಾಕ್‌ಸಾಹೇಬರ ಸೈನ್ಯವು ಕಾನಪುರಕ್ಕೆ ಬಂದಬಳಿಕ ಅವರೇ ಇವನ್ನೆಲ್ಲ ಬರೆದರಂತೆ. ಆ ಸಮಯದಲ್ಲಿ ಅಲ್ಲಿ ಇದ್ದವರು ನನಗೆ ಹೇಳಿರುವರು."

"ಪೇಶವೆ ನಾನಾಸಾಹೇಬನು ಸ್ತ್ರೀಹತ್ಯೆ ಶಿಶುಹತ್ಯೆ ಮುಂತಾದ ಪಾಪಾಚರಣೆಗಳಿಗೆ ಏಕೆ ಮನಸ್ಸುಮಾಡಿದನು?"

"ಈ ಕಾರ್ಯದಲ್ಲಿ ಪ್ರತ್ಯಕ್ಷ ಅಂಗವಿಲ್ಲದೆ ಇದ್ದರೂ ಆತನು ನಿರ್ದೋಷಿಯೆಂದು ಹೇಳಲಾಗುವುದಿಲ್ಲ. ಒಮ್ಮೆ ತಾನು ಕೊಟ್ಟ ವಚನವನ್ನು ಕಾದುಕೊಳ್ಳುವುದು ಆತನ ಕರ್ತವ್ಯವಾಗಿದ್ದಿತು. ಆತನೇ ಕೊಲೆಯನ್ನು ಮಾಡಿಸದೆ ಇದ್ದರೂ ಕೊಲೆಯನ್ನು ತಪ್ಪಿಸಲು ಸಕಾಲದಲ್ಲಿ ಯತ್ನಮಾಡಲಿಲ್ಲವೆಂಬ ಅಪರಾಧವು ಆತನ ಮೇಲೆ ಹೊತ್ತೇಹೋರುವುದು. ಆತನು ತನ್ನ ವಚನವನ್ನು ಮರೆತಿರಬೇಕು; ಅಥವಾ ತನ್ನನ್ನು ಕೇಳದೆ ಹೇಗೆ ಕೊಲೆ ಮಾಡುವರೆಂದು ಆತನ ನಂಬುಗೆಯಾಗಿರಬೇಕು. ಹುಸೇನಿ ಬೇಗಮಳು ಈ ದುರಾಚಾರದ ಪ್ರೇರಕಳು. ಅಜೀಮುಲ್ಲಾಖಾನನು ಅದಕ್ಕೆ 'ಅಸ್ತು' ಎಂದವನು."

"ಸೇನಾಪತಿ ವೀಲರಸಾಹೇಬನ ಮಗಳು ಪಿಸ್ತೂಲಿನಿಂದ ನಾಲ್ಕೈದು ಜನರನ್ನು ಕೊಂದು ಕೊನೆಗೆ ಬೀಬೀಗೃಹದ ಬಳಿಯಲ್ಲಿದ್ದ ಬಾವಿಯಲ್ಲಿ ಹಾರಿಕೊಂಡಳೆಂದು ಪ್ರಕಟವಾಗಿದೆ. ಇದು ನಿಜವೇನು?"

"ಇದೂ ಸುಳ್ಳು ಸುದ್ದಿ. ಆಕೆಯು ಈಗ ರೋಷನಾ ಎಂದು ಹೆಸರಿಟ್ಟುಕೊಂಡು ಅಲ್ಲೀಖಾನನೆಂಬ ಒಬ್ಬ ಮುಹಮ್ಮದೀಯ ಅಶ್ವಾರೋಹಿಯನ್ನು ಮದುವೆ ಮಾಡಿಕೊಂಡು ಲಕನೌವಿನಲ್ಲಿ ಸುಖವಾಗಿರುವಳು."

ಈ ರೀತಿ ಮಾತು ಕತೆ ನಡೆದಿರುವಾಗಲೇ ಪ್ರಾತಃಕಾಲವನ್ನು ಸೂಚಿಸುವ ಕಹಳೆ ಮೊಳಗಿತು. ಮುಹಮ್ಮದ ಅಲ್ಲಿಯು ಇದು ತನ್ನ ಮರಣಕಾಲವು ಸಮೀಪಿಸಿತೆನ್ನುವ ಸೂಚನೆಯೆಂದು ಭಾವಿಸಿದನು. ಮತ್ತು 'ಸಾಹೇಬ, ನೀವು ನನ್ನ ಮೇಲೆ ಅನಂತ ಉಪಕಾರ ಮಾಡಿದಿರಿ. ಅದಕ್ಕೆ ಪ್ರತಿಯಾಗಿ ಕೊಡಲು ನನ್ನಲ್ಲಿ ಇನ್ನೇನೂ ಇಲ್ಲ. ಇದೊಂದು ಉಂಗುರವಿದೆ. ಇದನ್ನು ಒಬ್ಬ ಮಹಾಪುರುಷನು ನನಗೆ ಕೊಟ್ಟಿರುವನು. ಇದನ್ನು ಧರಿಸಿದವರಿಗೆ ಸುಖ ಸಮೃದ್ಧಿಗಳುಂಟಾಗುವುವು. ನೀವು ಲಕನೌವಿಗೆ ಮುಟ್ಟಿದಾಗ ಈ ಉಂಗುರವನ್ನು ನೋಡಿ ಈದೀನ ಮುಹಮ್ಮದ ಅಲ್ಲೀಖಾನನ ನೆನಪು ಮಾಡಿಕೊಳ್ಳಿ. ನಿಮಗೆ ಯುದ್ಧದಲ್ಲಿ ಯಾವ ಅಪಾಯವೂ ಆಗದು."

ಎನ್ನುತ್ತ ತನ್ನ ಮುಂಡಾಸದ ಸೆರಗಿನಿಂದ ಒಂದು ಉಂಗುರವನ್ನು ತೆಗೆದು ಮಿಚೆಲ್ ಸಾಹೇಬನ ಕೈಗೆ ಕೊಟ್ಟನು.

ಬೆಳಗಾದೊಡನೆ ಬ್ರಿಟಿಷ ಸೇನೆಯು ಲಕನೌವಿಗೆ ಹೊರಟಿತು. ಸಾರ್ಜಂಟ್ ಫೋರ್ಬೆಸ್ ಮಿಚೆಲನು ತನ್ನ ಸೈನ್ಯದ ಸಾಲಿನಲ್ಲಿ ರಣವಾದ್ಯಗಳ ತಾಳಕ್ಕೆ ಅನುಗುಣವಾಗಿ ಹಜ್ಜೆಯಿಟ್ಟು ನಡೆದಿರುವಾಗ ರಾಜಮಾರ್ಗದ ಅಂಚಿನಲ್ಲಿ ನೇತಾಡುತ್ತಿರುವ ತನ್ನ ಒಂದೇ ದಿನದ ಸ್ನೇಹಿತ ಮುಹಮ್ಮದ ಅಲ್ಲಿಯ ಶವವನ್ನು ಕಂಡು ಕಣ್ಣೀರು ಸುರಿಸಿ ಮುಂದೆ ಸಾಗಿದನು. ಯಥಾ ಕಾಲದಲ್ಲಿ ಬ್ರಿಟಿಷ ಸೇನೆಯು ಲಕನೌವಿನಲ್ಲಿ ವಿಜಯಶಾಲಿಯಾಗಿ ದಂಗೆ ಗಾರರನ್ನು ದಿಕ್ಕು ದಿಕ್ಕಿಗೆ ಚದರಿಸಿತು. ಮಿಚೆಲ್ ಸಾಹೇಬನು ಕೈಸರ ಬಾಗದಲ್ಲಿ ನಡೆದ ಕದನದಲ್ಲಿ ಬಹು ಇರುಕಿನಲ್ಲಿ ಸಿಕ್ಕಿದ್ದಾಗ ಮುಹಮ್ಮದ ಅಲ್ಲಿಯು ಕೊಟ್ಟಿದ್ದ ಉಂಗುರವನ್ನು ನೋಡಿ ಆತನ ಸ್ಮರಣೆ ಮಾಡಿದನು. ಆತನ ಸಂಗಡಿಗರಲ್ಲಿ ಬಹು ಜನರು ಮಡಿದರು; ಬಹುಜನರು ಗಾಯವಡೆ ದರು; ಆದರೆ ಮಿಚೆಲ್ ಸಾಹೇಬನು ಮಾತ್ರ ನಿರಾಪದನಾಗಿದ್ದನು. † ದಂಗೆ ಗಾರರ ಹೃದಯದಂತಿದ್ದ ಲಕನೌ ನಗರವು ತಮ್ಮ ವಶವಾದ ಬಳಿಕ ಬ್ರಿಟಿಷ ಸೇನಾಧಿಕಾರಿಗಳು ಹಲವು ಸೇನಾವಿಭಾಗಗಳೊಡನೆ ಅಲ್ಲಲ್ಲಿ ಸಂಚರಿಸಿ ದಂಗೆಗಾರರನ್ನು ನಿರ್ಮೂಲನಗೊಳಿಸುವ ಕಾರ್ಯವನ್ನು ಕೈಕೊಂಡರು.

ಇತ್ತ ಕಾನಪುರದಲ್ಲಿ ಪರಾಜಿತನಾದ ನಾನಾಸಾಹೇಬನು ಬ್ರಹ್ಮಾ ವರ್ತಕ್ಕೆ ಬಂದನು. ಒಂದು ಕಾಲದಲ್ಲಿ ಜನಾವಾಸದಿಂದ ಕಿಕ್ಕಿರಿದ ಆತನ ರಾಜಧಾನಿಯು ಇಂದು ನಿರ್ಜನವಾಗಿದ್ದಿತು. ಅರಮನೆಯ ಬಹುಭಾಗವು ಧ್ವಂಸವಾಗಿದ್ದಿತು. ಆತನ ಕುಲದೇವತೆಯ ಮಂದಿರವು ಮೊದಲಿನಂತೆಯೇ ಇದ್ದರೂ ಜನಶೂನ್ಯವಾಗಿದ್ದಿತು. ಬಂಗಾರದ ಸಮೆಗಳಲ್ಲಿ ಹಗಲಿರುಳು ಬೆಳಗುತ್ತಿದ್ದ ೧೮ ನಂದಾದೀವಿಗೆಗಳಲ್ಲಿ ಈಗ ಒಂದೂ ಇರಲಿಲ್ಲ. ನಾನಾ ಸಾಹೇಬನು ಇಂತಹದುರವಸ್ಥೆಯನ್ನು ಕಂಡು ಬಹು ಶೋಕಾಕುಲನಾದನು. ಮಂದಿರದ ಮೆಟ್ಟಲಿನ ಮೇಲೆ ಕುಳಿತು "ಹಾ! ದೇವಾ! ಮುಂದೇನು

† ಸಾರ್ಜಂಟ್ ಫೋರ್ಬೆಸ್ ಮಿಚೆಲ್ ಸಾಹೇಬನ "Reminiscences etc.'" ಎಂಬ ಗ್ರಂಥದ ೧೭೪–೧೯೩ ಪುಟಗಳಲ್ಲಿ ಈ ವಿಷಯಗಳನ್ನುವಿವರವಾಗಿ ಓದಬಹುದು.

ಗತಿ ! ಗುರುದೇವಾ ! ನೀನೆನಗೆ ಮಾರ್ಗದರ್ಶಕನು" ಎನ್ನುತ್ತ ಉಸಿರ್ಗರೆದು ಕಣ್ಣೀರು ಸುರಿಸಿದನು.

" ಅಯ್ಯೋ ! ದೈವಗೇಡೀ ! ಕೈಯಲ್ಲಿ ಖಡ್ಗವನ್ನು ಹಿಡಿದು ಕ್ಷತ್ರಿಯ ಧರ್ಮವನ್ನು ಸ್ವೀಕರಿಸಿದ ನೀನು ಅಳುವುದನ್ನೆಂದು ಕಲಿತೆ? " ಎನ್ನುತ್ತ ಯಾರೋ ಆತನ ಬೆನ್ನಮೇಲೆ ಕೈಯಿಟ್ಟರು.

" ಗುರುದೇವಾ ! ಕ್ಷಮಿಸು " ಎನ್ನುತ್ತ ನಾನಾಸಾಹೇಬನು ಆತನ ಪಾದಕ್ಕೆ ಎರಗಿದನು.

" ಅಜೀಮುಲ್ಲಾಖಾನನು ಇಂತಹ ಕ್ರೂರನೆಂದು ನಾನು ತಿಳಿದಿರಲಿಲ್ಲ. ಆ ಪಾಪದ ಫಲವು ನಿನಗೂ ತಪ್ಪದು. ವಚನಬದ್ಧನಾದ ನೀನು ಬೀಬೀಗೃಹದಲ್ಲಿದ್ದ ಸ್ತ್ರೀಬಾಲಕರನ್ನು ಸಂರಕ್ಷಿತವಾಗಿಡುವುದಕ್ಕೆ ಮರೆಯಕೂಡದಾಗಿದ್ದಿತು. ಹುಸೇನಿ ಬೇಗಮಳು ಮಹಾಪಾಪಾಚರಣೆ ಮಾಡಿದಳು."

" ಗುರುದೇವಾ ! ಆದುದು ಆಗಿಹೋಯಿತು. ಮುಂದಿನ ಮಾರ್ಗವನ್ನು ತೋರು. "

" ಮೊದಲು ಕಂಪನಿಯ ಅಧಿಕಾರಿಗಳು ನಿನ್ನನ್ನೂ ಹಲವು ದೇಶೀಯ ರಾಜಕುಟುಂಬಗಳನ್ನೂ ಅನ್ಯಾಯವಾಗಿ ಆಪತ್ತಿಗೆ ಗುರಿಮಾಡಿದರು. ಆ ವೈರಾಗ್ನಿಯು ಪ್ರಜ್ವಲಿತವಾಗಿ ಇಡಿಯ ದೇಶವನ್ನೇ ವ್ಯಾಪಿಸಿತು. ದೇಶವನ್ನು ವ್ಯಾಪಿಸಿದ ಅಗ್ನಿಯಲ್ಲಿ ಅಸಂಖ್ಯ ಪ್ರಜೆಗಳು ಧ್ವಂಸವಾಗಲೇಬೇಕು. ನಿನ್ನಂತೆಯೇ ಹಲವರು ತಮ್ಮ ಸರ್ವಸ್ವವನ್ನೂ ಕಳೆದುಕೊಂಡು ಕಂಗಾಲರಾಗಿರುವರು. ದೈವವು ಪ್ರತಿಕೂಲವಾದ ಬಳಿಕ ಯಾರೇನು ಮಾಡುವರು ? ಮನುಷ್ಯ ಪ್ರಯತ್ನವು ಕೂಡ ಸರಿಯಾಗಿ ನಡೆಯಲಿಲ್ಲ. ಆದರೆ ನೀನು ಪರಾಜಿತನಾದೆನೆಂದು ಭಯಪಡಬೇಡ; ಚಿಂತಿಸಬೇಡ. ನಿನ್ನ ಸೋಲು ನಿಜವಾದ ಸೋಲಲ್ಲ; ನೀನು ಅನುಭವಿಸಿದ ಕಷ್ಟ ಪರಂಪರೆಯು ನಿನ್ನ ಬಂಧುಗಳ ಹಿತಕ್ಕೆ ಕಾರಣವಾಗುವುದು. ದೇಶೀಯ ಸಂಸ್ಥಾನಿಕರಿಗೆ ಇನ್ನು ಮುಂದೆ ಇಂತಹ ಅನ್ಯಾಯವಾಗಲಾರದು. ಸ್ವಲ್ಪ ದಿನಗಳಲ್ಲಿಯೇ ಭರತಖಂಡದಲ್ಲಿ ಮತ್ತೆ ಸುಖಶಾಂತಿಗಳು ತಲೆದೋರುವುವು; ಕಂಪನಿಯ ಸರಕಾರದ ಅಧಿಕಾರಿಗಳ ಅತ್ಯಾಚಾರಗಳೂ ನಿಂತು ಹೋಗುವುವು. ಪ್ರಬಲನಾದ ವೈರಿಯೊಡನೆ ಕದನವಾಡಿ ಜಯಶಾಲಿಯಾದವನು ಕೂಡ ಪರಾಜಿತ

ನಾದವನಂತೆಯೇ ಕಷ್ಟಪರಂಪರೆಗಳನ್ನು ಭೋಗಿಸಲೇಬೇಕಾಗುವುದು. ನಿನ್ನಂತೆಯೇ ಹಗೆಗಳ ದಳದೊಳಗಿನ ಎಷ್ಟು ಕುಟುಂಬಗಳು ಅಪರಿಮಿತ ಆಪತ್ತಿಗೆ ಗುರಿಯಾಗಿಲ್ಲ? ಲಾರೆನ್ಸ್, ನೀಲ್, ಹಡಸನ್, ಹ್ಯಾವಲಾಕ ಮುಂತಾದ ವೀರಾಧಿವೀರರು ರಣಭೂಮಿಯಲ್ಲಿ ಪತನಹೊಂದಿದುದರಿಂದ ಅವರ ಕುಟುಂಬಗಳಿಗೆ ಕಷ್ಟವೊದಗಲಿಲ್ಲವೇನು? ಭಾರತ ಮಾತೆಯು ತನ್ನ ಬಹುಜನ ವೀರ ಪುತ್ರರನ್ನು ಕಳೆದುಕೊಂಡಂತೆಯೇ ಆಂಗ್ಲದೇಶವು ಕೂಡ ತನ್ನ ಅನೇಕ ಪುತ್ರರತ್ನಗಳನ್ನು ಕಳೆದುಕೊಳ್ಳಲಿಲ್ಲವೇನು? ನೀವು ನಿಮ್ಮ ದೆಂಬುದನ್ನೆಲ್ಲ ಕಳೆದುಕೊಂಡಿರಿ; ರಾಜ್ಯವೂ ಲಭಿಸಲಿಲ್ಲ. ಅದರಂತೆ ಹಗೆಗಳೂ ತಮ್ಮ ಮೊದಲಿನ ವೈಭವಗಳನ್ನೆಲ್ಲ ಕಳೆದುಕೊಂಡರೂ ರಾಜ್ಯವು ಅವರ ದಾಯಿತು. ಕಂಪನಿಯ ಸರಕಾರವು ಹೋಗಿ ಮಹಾರಾಣಿಯ ಸರಕಾರವು ಸ್ಥಾಪಿತವಾದರೂ ಅವರು ಸುಖಿಗಳೇ ಆಗುವರು. ನಮ್ಮವರೂ ಒಂದು ಬಗೆಯಿಂದ ಸುಖಿಗಳಾಗುವರೆಂದು ನಾವು ನಂಬಬೇಕು.

ದೇಶದ ಪ್ರಜೆಗಳು ಇಂತಹ ಕ್ರಾಂತಿಯ ಕಾಲದಲ್ಲಿ ಅಪರಿಮಿತ ಕಷ್ಟನಷ್ಟಗಳನ್ನು ಅನುಭವಿಸಿದರೂ ಮುಂದೆ ಸುಖಿಗಳಾಗುವರು. ದೇಶದ ಜಯಾಪಜಯಗಳು ವ್ಯಕ್ತಿಗಳ ಜಯಾಪಜಯಗಳನ್ನು ಅವಲಂಬಿಸಿರುವುದಿಲ್ಲ. ಬಹುಜನ ವ್ಯಕ್ತಿಗಳು ಪರಾಜಿತರಾಗಿ ವಿಪತ್ಪರಂಪರೆಗಳಿಗೆ ಗುರಿಯಾದಾಗಲೇ ದೇಶವು ವಿಜಯಿಯಾಗುವುದು. ದೇಶದ ಜಾಗ್ರತೆಗೆ ಕಾರಣವಾದ ವ್ಯಕ್ತಿಗಳು ಹಗೆಗಳಪ್ರಾಬಲ್ಯದಿಂದ ನಷ್ಟಹೊಂದಿದರೂ ಅವರಿಂದ ಹುಟ್ಟಿದ ಜಾಗ್ರತೆಯು ನಷ್ಟವಾಗುವುದಿಲ್ಲ. ಆ ಮೂಲಕ ಅಂತಹ ಅಸಂಖ್ಯ ವ್ಯಕ್ತಿಗಳು ಮತ್ತೆಮತ್ತೆ ಉದಯಹೊಂದುವರು. ಇಂದು ಒಬ್ಬ ನಾನಾಸಾಹೇಬನು ಹೋದರೆ ಆತನಿಂದ ಉತ್ಪನ್ನವಾದ ಸ್ವಾತಂತ್ರ್ಯಪ್ರೀತಿಯ ಮಹಿಮೆಯಿಂದ ದೇಶದಲ್ಲಿ ನಾಳೆಯೇ ಹತ್ತುಜನ ನಾನಾಸಾಹೇಬರು ಹುಟ್ಟುವರು; ನೂರು ಜನರು ಹುಟ್ಟುವರು. ಪ್ರಜೆಗಳಲ್ಲಿ ಹೆಚ್ಚು ಹೆಚ್ಚು ಜನರು ಇಂತಹ ವಿಪತ್ತುಗಳಿಗೆ ಎದೆಗೊಡಲು ಮುಂದೆ ಬಂದಾಗಲೇ ಆ ದೇಶವು ಹೆಚ್ಚು ತೀವ್ರವಾಗಿ ವಿಜಯಿಯಾಗುವುದು. ಭಾರತ ಮಾತೆಯ ಭವಿಷ್ಯದ ಸುಖವನ್ನು ಸ್ಮರಿಸಿಕೊಂಡು ನೀನು ನಿನ್ನ ಕಷ್ಟಪರಂಪರೆಯನ್ನು ಮರೆ. ಇನ್ನೊಮ್ಮೆ ನಿನ್ನನ್ನು ಕಂಡು ಮಾತಾಡುವೆನು; ಈಗ ಅವಕಾಶವಿಲ್ಲ; ಶತ್ರುಸೇನೆ ಸಮೀಪಿಸಿದೆ.

ಇಂದೇ ನೀನು ಇಲ್ಲಿಂದ ಹೊರಡು. ಪುನಃ ಹೇಳುತ್ತೇನೆ. ಧರ್ಮವನ್ನು ಮರೆಯಬೇಡ; ಸತ್ಯವನ್ನು ಕಾಪಾಡಿಕೋ! ಸ್ವಾಮಿಯಾಗಿರು.

ಆನಂಪ ಮಿಶ್ರ ಸ್ವಾಮಿಯು ಕತ್ತಲೆಯಲ್ಲಿ ಅದೃಶ್ಯನಾಗಿ ಹೋದನು. ನಾನಾಸಾಹೇಬನು ತನ್ನ ಅನುಚರರೊಡನೆ ಗಂಗಾನದಿಯ ತೀರಕ್ಕೆ ಬಂದನು. ಆತನ ಸೈನಿಕರೂ ತೋಪುಗಳೂ ಈ ಮೊದಲೇ ನದಿಯನ್ನು ದಾಟಿ ಹೋಗಿದ್ದುವು. ದೊಡ್ಡದೊಂದು ನಾವೆಯಲ್ಲಿ ಎಲ್ಲರೂ ಕುಳಿತರು. ನಾನಾಸಾಹೇಬನು ಹೊರಟಿರುವುದನ್ನು ತಿಳಿದ ಬ್ರಹ್ಮಾವರ್ತದ ನಿವಾಸಿಗಳಲ್ಲಿ ಹಲವರು ಅಲ್ಲಿಗೆ ಬಂದು ಮುಂದೆಲ್ಲಿಗೆ ಹೋಗುವಿರೆಂದು ಕೇಳಿದರು. "ಇನ್ನು ನಮಗೆ ಆಶ್ರಯವೆಲ್ಲಿದೆ? ಪುಣ್ಯಸಲಿಲೆ ಗಂಗಾಮಾತೆಯೇ ನಮಗೆ ಆಶ್ರಯಗೊಡಬೇಕು." ಎಂದು ನುಡಿದು ಮುಖವನ್ನು ಮರೆಮಾಡಿಕೊಂಡು ನಾವೆಯಲ್ಲಿ ಕುಳಿತನು. ನಾವೆ ಎರಡನೆಯ ದಂಡೆಗೆ ಹೊರಟಿತು. ನಡುನೀರಿಗೆ ಬಂದಾಗ ಅದರೊಳಗಿನ ದೀಪಗಳೆಲ್ಲಾ ಆರಿಹೋದವು. ದಂಡೆಯಮೇಲೆ ನಿಂತವರು ನಾವೆಯೂ ನಾನಾಸಾಹೇಬನೂ ಜಲಸಮಾಧಿಯನ್ನು ಹೊಂದಿದರೆಂದು ಭಾವಿಸಿದರು. ಮೊದಲು ಪೇಶವೆಯ ಕಾರ್ಯಭಾರಿಯಾಗಿದ್ದ ನಾನಾ ನಾರಾಯಣರಾಯನೂ ಅದನ್ನು ಒಪ್ಪಿದನು.

ಡಿಸೆಂಬರ್ ತಿಂಗಳ ೧೧ನೆಯ ತಾರೀಖಿಗೆ ಬ್ರಿಟಿಷ ಸೈನ್ಯವು ಮೂರನೆಯ ಸಾರಿ ಬ್ರಹ್ಮಾವರ್ತಕ್ಕೆ ಬಂದಿತು. ನಾನಾ ನಾರಾಯಣರಾಯನು ತಾನು ಬ್ರಿಟಿಷರ ಪಕ್ಷಪಾತಿಯೆಂದು ಹೇಳಿ ನಾನಾಸಾಹೇಬನು ತನ್ನ ಅರಮನೆಯ ಬಾವಿಯಲ್ಲಿ ಮದ್ದು ಗುಂಡುಗಳ ಪೆಟ್ಟಿಗೆಗಳೊಡನೆ ಹಾಕಿಟ್ಟ ೩೦ ಲಕ್ಷ ರೂಪಾಯಿಗಳ ಆಸ್ತಿಯನ್ನು ಅವರಿಗೆ ತೋರಿಸಿಕೊಟ್ಟನು. ಆತನ ಸಹಾಯದಿಂದ ಎರಡನೆಯ ಬಾಜೀರಾಯನ ಮೂರುಲಕ್ಷ ರೂಪಾಯಿ ಬೆಲೆ ಬಾಳುವ ಖಡ್ಗವೂ ನಾನಾಸಾಹೇಬನು ಸಂಚುಗಾರನೆನ್ನುವ ಹಲವು ಕಾಗದ ಪತ್ರಗಳೂ ಅವರಿಗೆ ದೊರೆತುವು. ನಾನಾಸಾಹೇಬನ ಹೊರತಾಗಿ ಎಲ್ಲವೂ ದೊರೆತುವು; ಇದರಿಂದ ಬ್ರಿಟಿಷ ಸೈನಿಕರ ಆನಂದದಲ್ಲಿ ಒಂದಂಶ ಕಡಿಮೆಯಾಯಿತು. ನಾನಾ ನಾರಾಯಣರಾಯನಿಗೆ ಈ ಉಪಕಾರಕ್ಕಾಗಿ ಬ್ರಹ್ಮಾವರ್ತದ ಜಹಗೀರು ವಂಶಪರಂಪರೆಯಾಗಿ ದೊರೆಯಿತು.

---

# ಆರನೆಯ ಪರಿಚ್ಛೇದ

## ಮಹಾರಾಣಿ ಲಕ್ಷ್ಮೀಬಾಯಿಯ ಪರಾಜಯ



"Among the native rulers who have heroically resisted foreign invaders, none has shown stronger qualities than Lakshmee Bayee, the Ranee or queen of Zhansi;......" —*Martin.*

ಮಹಾರಾಣಿ ಲಕ್ಷ್ಮೀಬಾಯಿಯು ತಾನು ನಿರಪರಾಧಿನಿಯೆಂದು ತೋರಿಸುವುದಕ್ಕೆ ಮಾಡಿದ ಪ್ರಯತ್ನಗಳೆಲ್ಲ ನಿಷ್ಫಲವಾದುವು. ಮೇಜರ್ ಜನರಲ್ ಸರ್ ಹ್ಯೂ ರೋಜ್ ಸಾಹೇಬನು ಮಹಾಸೇನಾ ಸನ್ನಾಹದೊಡನೆ ಝಾಂಸಿಯ ಮೇಲೆ ಸಾಗಿ ಬಂದನು. ಮಹಾರಾಣಿಯು ಇನ್ನೂ ಬ್ರಿಟಿಷರ ವಿರುದ್ಧ ಶಸ್ತ್ರಧಾರಣೆ ಮಾಡಿರಲಿಲ್ಲ. ಆದರೂ ಆಕೆಯ ಸೈನ್ಯದಲ್ಲಿ ರೂಢ-ಮೂಲವಾಗಿದ್ದ ಬ್ರಿಟಿಷರ ಮೇಲಣ ದ್ವೇಷದ ಮೂಲಕ ಯುದ್ಧಾರಂಭವಾಗಿ ಹೋಯಿತು. ರಾಣಿಯು ನಿರುಪಾಯಳಾಗಿ ಶಸ್ತ್ರವೆತ್ತಿದಳು. ಹತ್ತು ದಿನಗಳ ವರೆಗೆ ಘನಘೋರ ಸಂಗ್ರಾಮವು ನಡೆಯಿತು. ದುರ್ಗದೊಳಗಿನ ಅನ್ನಸಾಮಗ್ರಿ ಯುದ್ಧ-ಸಾಮಗ್ರಿಗಳು ತೀರುತ್ತ ಬಂದುವು. ಬಹುಜನ ಸೈನಿಕರು ರಣರಂಗದಲ್ಲಿ ಮಡಿದು ಸೇನಾಬಲವೂ ಕುಂದಿಹೋಯಿತು. ರಾಣಿಯು ಕಣ್ಗೆಟ್ಟಳು. ಈ ರೀತಿ ಮಹಾರಾಣಿಯು ಚಿಂತಾಕ್ರಾಂತಳಾಗಿರುವಾಗ ಆಕೆಯ ಸಹಾಯಕ್ಕೆ ಪೇಶವೆಯ ಸೇನಾಪತಿ ತಾತ್ಯಾಟೋಪಿಯು ೨೦ ಸಾವಿರ ಸೇನೆಯೊಡನೆ ಬಂದನು. ಆದರೆ ಆತನ ಸೈನಿಕರ ಅವ್ಯವಸ್ಥೆಯಿಂದ ಅಂತಹ ಮಹಾಬಲವು ಕೂಡ ರಣರಂಗದಲ್ಲಿ ಸೋತು ಹಿಮ್ಮೆಟ್ಟಬೇಕಾಯಿತು. ಆತನು ಸಂಗ್ರಹಿಸಿ ತಂದಿದ್ದ ಅನ್ನಸಾಮಗ್ರಿ ಯುದ್ಧಸಾಮಗ್ರಿಗಳು ಶತ್ರುಗಳ ವಶವಾದುವು. ತಾತ್ಯಾಟೋಪಿಯು ಪರಾಜಿತನಾಗಿ ತಿರುಗಿ ಕಾಲ್ಪಿಗೆ ಹೋಗಿ "ವಿಧಿರಪಿ ಬಲೀಯಾನ್ ನ ತು ನರಃ" ಎಂದು ಪೇಶವೆಗೆ ದೂರಿಕೊಳ್ಳಬೇಕಾಯಿತು.

ಮಹಾರಾಣಿಯು ತನ್ನ ಅಲ್ಪಬಲದ ನೆರವಿನಿಂದಲೇ ಯುದ್ಧವನ್ನು ಸಾಗಿಸಿದಳು. ಕೊನೆಗೆ ಝಾಂಸಿಯ ನಗರವು ಶತ್ರುಗಳ ವಶವಾಯಿತು. ಮಹಾರಾಣಿಗೆ ಇನ್ನು ಜಯದ ಆಶೆ ಉಳಿಯಲಿಲ್ಲ. ನಡುರಾತ್ರಿಯಲ್ಲಿ ಮಹಾರಾಣಿಯೂ ದಾಸಿ ಮುಂದರೆಯೂ ಉಕ್ಕಿನ ಕವಚಗಳನ್ನೂ ಕೈಯಲ್ಲಿ ಒರೆಗಳೆದ ಖಡ್ಗಗಳನ್ನೂ ಧರಿಸಿ ಕುದುರೆಗಳನ್ನೇರಿ ಪುರುಷವೇಷದಿಂದ ದುರ್ಗದಿಂದ ಹೊರಟು ನಡೆದರು. ಕೆಲವರು ಶೂರ ಸೈನಿಕರು ಆಕೆಯನ್ನು ಅನುಸರಿಸಿದರು. ಮಹಾರಾಣಿಯು ತನ್ನ ದತ್ತಪುತ್ರ ದಾಮೋದರರಾಯ ನನ್ನು ಬೆನ್ನ ಮೇಲೆ ಬಿಗಿದು ಕಟ್ಟಿಕೊಂಡಿದ್ದಳು. ಶತ್ರುಗಳು ಮಹಾ ರಾಣಿಯ ಪಲಾಯನ ವಾರ್ತೆಯನ್ನು ಕೇಳಿ ಲೆಫ್ಟಿನೆಂಟ್ ಬೋಕರ್ ಸಾಹೇಬ ನನ್ನು ಸೈನ್ಯದೊಡನೆ ಕಳುಹಿದರು. ಆತನು ದಾರಿಯಲ್ಲಿ ಮಹಾರಾಣಿಯ ಖಡ್ಗದಿಂದ ಗಾಯವಡೆದು ಮರಳಿ ಬಂದನು. ಮಹಾರಾಣಿಯು ಬಾಯಿ ಯಲ್ಲಿ ಗುಟುಕು ನೀರನ್ನು ಕೂಡ ಹಾಕದೆ ಒಂದೇ ದಿನದಲ್ಲಿ ೧೦೨ ಮೈಲು ಪ್ರವಾಸಮಾಡಿ ರಾತ್ರಿ ೧೧ ಗಂಟೆಯ ವೇಳೆಗೆ ಕಾಲ್ಪಿಗೆ ಬಂದು ಮುಟ್ಟಿದಳು. ಮರುದಿನ ಪ್ರಾತಃಕಾಲದಲ್ಲಿ ಪೇಶವೆಯ ದರ್ಶನಕ್ಕೆ ಹೋಗಬೇಕೆನ್ನುವಾಗ ಸ್ತ್ರೀ-ಶರೀರ-ಧರ್ಮಕ್ಕನುಗುಣವಾಗಿ ಆಕೆಗೆ ಅಸ್ಪೃಶ್ಯಸ್ಥಿತಿಯೊದಗಿತು. ಆಕಟಾ! ಮಹಾರಾಣಿಯ ದುಃಖವು ಇಮ್ಮಡಿಸಿತು. ಆಕೆಯು ಪುರುಷ ವೇಷದಿಂದಿದ್ದಳು. ಬಳಿಯಲ್ಲಿ ಸ್ತ್ರೀಯರು ಧರಿಸುವ ಒಂದೂ ಬಟ್ಟೆಯಿರಲಿಲ್ಲ. ತುಸ ಹೊತ್ತಿನ ತರುವಾಯ ಮಹಾರಾಣಿಯು ಬಂದಿರುವುದನ್ನು ತಿಳಿದು ತಾತ್ಯಾಟೋಪಿಯು ಅಲ್ಲಿಗೆ ಬಂದು ಎಲ್ಲ ಅನುಕೂಲತೆ ಮಾಡಿಕೊಟ್ಟನು.

ಮಹಾರಾಣಿಯು ಹೊರಟು ಹೋದ ಬಳಿಕ ಝಾಂಸಿಯು ನಿರಾಪದ ವಾಗಿ ಬ್ರಿಟಿಷರ ವಶವಾಯಿತು. ಉನ್ಮತ್ತರಾದ ಸೈನಿಕರು ಕೊಲೆ ಸುಲಿಗೆ ಗಳನ್ನು ಆರಂಭಿಸಿದರು. ಅವರು ೫ ವರ್ಷಕ್ಕೆ ಮಿಕ್ಕು ೮೦ ವರ್ಷಕ್ಕೆ ಕಡಿಮೆ ಯವನಂತೆ ತೋರುವ ಒಬ್ಬ ಗಂಡುಸನ್ನೂ ಉಳಿಸಲಿಲ್ಲ. ಅನೇಕ ಜನ ಪತಿ ವ್ರತಾ ಸ್ತ್ರೀಯರೂ ಮರಣಕ್ಕೆ ಗುರಿಯಾದರು. ಊರಿಗೇ ಬೆಂಕೆ ಹೊತ್ತಿ ಉರಿಯ ತೊಡಗಿತು. ಮಹಾರಾಣಿಯ ಅರಮನೆಯೂ ಶತ್ರುಗಳ ವಶ ವಾಯಿತು. ಝಾಂಸಿಯ ಅರಸುಮನೆತನದ ಕುಲದೇವತೆ ಮಹಾ ಲಕ್ಷ್ಮಿಯ ಮಂದಿರದ ಸಕಲ ಸಂಪತ್ತೂ ಹೋಯಿತು. ಅರಮನೆಯ

ಮುತ್ತು ರತ್ನಗಳೂ ಬೆಳ್ಳಿ ಬಂಗಾರಗಳೂ ಹೋದುವು. ನಗರದ ಸಕಲ ಸಂಪತ್ತೂ ತಾಮ್ರ ಹಿತ್ತಾಳಿಗಳ ಪಾತ್ರೆಗಳೂ ಅರಿವೆ ಅಂಚಡಿಗಳೂ ಹೋದುವು. ಹೋಗಲಿ! ಲಕ್ಷಾವಧಿ ಗ್ರಂಥಗಳಿರುವ ಝಾಂಸಿಯ ಗ್ರಂಥ ಸಂಗ್ರಹಾಲಯವು ಕೂಡ ಹಾಳಾಗಿ ಹೋಯಿತು. ಅಕ್ಷರಶತ್ರುಸೈನಿಕರು ಕೈ ಬರೆಹದ ಅಮೂಲ್ಯ ಗ್ರಂಥಗಳಿಗೆ ಸುತ್ತಿದ ರೇಶಿಮೆಯ ಪಟ್ಟಿಗಳನ್ನು ಬಿಚ್ಚಿಕೊಂಡು ಒಳಗಿನ ಪುಟಗಳನ್ನು ಮಾಳಿಗೆಯ ಮೇಲೆ ನಿಂತು ಗಾಳಿಗೆ ತೂರಿದರು. ಅತುಲ ವೈಭವದಿಂದ ಮೆರೆಯುತ್ತಿದ್ದ ಝಾಂಸಿಯು ಮಹಾ ಶ್ಮಶಾನವಾಗಿ ಪರಿಣಮಿಸಿತು.

ಅತ್ತ ಮಹಾರಾಣಿಯು ಕಾಲ್ಪಿಯಲ್ಲಿ ಪೇಶವೆಯ ಸಹಾಯದಿಂದ ಮತ್ತೆ ಯುದ್ಧದ ಸಿದ್ಧತೆ ಮಾಡಿಕೊಂಡು ಝಾಂಸಿಗೆ ಹೊರಟಳು. ಕಾಲ್ಪಿಯಿಂದ ೪೦ ಮೈಲು ದೂರದಲ್ಲಿ ಕುಂಚ ಎಂಬಲ್ಲಿ ಬ್ರಿಟಿಷ ಸೈನ್ಯವು ಅವರನ್ನು ಎದುರಿಸಿತು. ಯುದ್ಧಾರಂಭವಾಯಿತು. ಹಗಲು ಗಿಡದ ನೆರಳಿನಲ್ಲಿಯೂ ೧೧೦° ಉಷ್ಣತೆಯಿರುವ ಉತ್ತರ ಹಿಂದುಸ್ತಾನದ ಬಿಸಿಲಿನ ಸಂತಾಪದಿಂದ ಬ್ರಿಟಿಷ ಸೈನಿಕರು ಹುರಿದು ಬೀಳುತ್ತಿದ್ದರು. ಹಲವರು ಆತಪವ್ಯಾಧಿ (Sun Stroke) ಯಿಂದ ಸತ್ತುಬಿದ್ದರು. ಸೇನಾಪತಿ ರೋಜ್ ಸಾಹೇಬನೇ ಕುದುರೆಯಿಂದ ಉರುಳಿ ಬಿದ್ದನು. ಇಂತಹ ಕಷ್ಟಮಯವಾದ ಸ್ಥಿತಿಯಲ್ಲಿಯೂ ಬ್ರಿಟಿಷ ಸೈನಿಕರು ಎದೆಗುಂದದೆ ಯುದ್ಧ ಮಾಡಿದರು. ಎರಡು ತಾಸುಗಳ ವರೆಗೆ ನಿಕರದ ಕಾಳಗವಾಯಿತು. ಪೇಶವೆಯ ಸೈನ್ಯವು ಎದೆಗುಂದಿ ಹಿಂಜರಿಯಿತು. ಮಹಾರಾಣಿಗೆ ಸೇನಾಚಾಲನೆಯಲ್ಲಿ ಸ್ವಾತಂತ್ರ್ಯವಿರಲಿಲ್ಲ. ಯುದ್ಧ ಕಲಾವಿಶಾರದನಾದ ತಾತ್ಯಾಟೋಪಿಯೂ ಹಿಮ್ಮೆಟ್ಟಿ ಬಹು ಕುಶಲತೆಯಿಂದ ಹಿಂದೆ ಸಾಗಿದನು. ಸೈನ್ಯದಲ್ಲಿ ಬೇರೆ ಬೇರೆ ವಿಭಾಗಮಾಡಿ ಒಂದು ಭಾಗದವರು ಶತ್ರುಗಳೊಡನೆ ಕಾದುತ್ತಿರುವಾಗಲೇ ಮಿಕ್ಕವರು ಹಿಂದೆ ಸಾಗುತ್ತಿದ್ದರು. ಹೀಗೆ ಅವರೆಲ್ಲರೂ ಕಾಲ್ಪಿಗೆ ಬಂದು ಸೇರಿದರು.

ಬ್ರಿಟಿಷ ಸೈನ್ಯವು ಕಾಲ್ಪಿಯಿಂದ ೬ ಮೈಲು ದೂರದಲ್ಲಿದ್ದ ಗಲಾವಲಿಗೆ ಬಂದು ಬೀಡುಬಿಟ್ಟಿತು. ಪೇಶವೆಯು ತಾನೇ ಸೇನಾಚಾಲಕನಾಗಿ ಯುದ್ಧಕ್ಕೆ ಅಣಿಯಾದನು. ಹಿಂದುಮುಂದಿನ ವಿಚಾರವಿಲ್ಲದೆ ಪೇಶವೆಯ ಸೈನ್ಯವು ದುರ್ಗವನ್ನು ಬಿಟ್ಟು, ನೈಸರ್ಗಿಕ ಭದ್ರತೆಯುಳ್ಳ ತನ್ನ ಆಶ್ರಯಸ್ಥಾನದಿಂದ

ಹೊರಗೆ ಬಂದು, ಯುದ್ಧವನ್ನು ಆರಂಭಿಸಿತು. ಮಹಾರಾಣಿಗೆ ಸೇನಾ ಚಾಲನೆಯಲ್ಲಿ ಸ್ವಾತಂತ್ರ್ಯವಿಲ್ಲದಿದ್ದರೂ ಅವಳ ಬಹು ತೀಕ್ಷ್ಣವಾದ ಖಡ್ಗಧಾರೆಯು ಅರಿಬಲದಲ್ಲಿ ಎಲ್ಲಿ ನೋಡಿದಡಲ್ಲಿ ಮಿಂಚಿ ಹೊಳೆಯುತ್ತಿದ್ದಿತು; ಹಾರಿಸುವುದಕ್ಕೆ ಸಿದ್ಧವಾದ ತೋಫಿನ ಇದಿರಿಗೆ ಹೋಗಿ ಗೋಲಂದಾಜರನ್ನು ಕಡಿದು ಬಿಸುಡುತ್ತಿದ್ದಳು. ಆದರೆ ಮಾಡುವುದೇನು! ಪೇಶವೆಯ ಸೈನ್ಯವು ಬಹುಸಂಖ್ಯಾಕವಾಗಿದ್ದರೂ ಅದರಲ್ಲಿಯ ಅವ್ಯವಸ್ಥೆಯ ಮೂಲಕ ಅದು ಸುವ್ಯವಸ್ಥಿತವಾದ ಬ್ರಿಟಿಷ ಸೈನ್ಯದೊಡನೆ ಕಾದಿ ಜಯಿಸುವ ಸಂಭವವುಳಿಯಲಿಲ್ಲ. ಪೇಶವೆ ಮುಂತಾದವರು ಓಡಿಹೋದರು.

ಕಾಲ್ಪಿಯ ನಗರವೂ ದುರ್ಗವೂ ಬ್ರಿಟಿಷರ ವಶವಾದುವು. ಅವರಿಗೆ ತಾತ್ಯಾಟೋಪಿಯು ಒಂದು ವರುಷದಿಂದಲೂ ಸಂಗ್ರಹಿಸಿಟ್ಟ ೬೦ ಸಾವಿರ ಪೌಂಡು ಮದ್ದು ತೋಫು ತುಬಾಕಿ ಮುಂತಾದ ಯುದ್ಧಸಾಮಗ್ರಿಯೂ ಅನ್ನಸಾಮಗ್ರಿಯೂ ದೊರೆತುವಲ್ಲದೆ ಬ್ರಿಟಿಷ ಸೈನಿಕರು ವ್ಯಾಪಾರೋದ್ಯೋಗಗಳಿಂದ ಸಮೃದ್ಧವಾದ ಕಾಲ್ಪಿಯ ನಗರವನ್ನು ಸುಲಿದು ವಿಪುಲ ಸಂಪತ್ತನ್ನು ಗಳಿಸಿಕೊಂಡರು.

ಕಾಲ್ಪಿಯಲ್ಲಿ ಪರಾಭವ ಹೊಂದಿದ ಒಳಿಕ ಪೇಶವೆ, ಬಾಂದಾದ ನಬಾಬ ಮುಂತಾದವರು ಕಂಗೆಟ್ಟು "ಮುಂದೇನು ಗತಿ" ಎಂದು ಚಿಂತಾಕುಲರಾಗಿ ಕುಳಿತಿದ್ದರು. ಆಗ ಮಹಾರಾಣಿ ಲಕ್ಷ್ಮೀಬಾಯಿಯು ಮುಂದೆ ಬಂದು "ವೀರರೇ, ಹೀಗೆ ಅಧೈರ್ಯದಿಂದ ಕೈಕಾಲುಬಿಟ್ಟು ಕುಳಿತರೆ ಹೇಗೆ? ಯಾವುದಾದರೊಂದು ಉಪಾಯದಿಂದ ಗ್ವಾಲ್ಹೇರಿಯ ದುರ್ಗವನ್ನು ವಶಪಡಿಸಿಕೊಳ್ಳಬೇಕು. ಆ ಮೇಲೆ ಮತ್ತೆ ಯುದ್ಧದ ಸಿದ್ಧತೆ ಮಾಡಿಕೊಂಡು ಹಗೆಗಳನ್ನು ಎದುರಿಸಬೇಕು." ಎಂದು ಸೂಚಿಸಿದಳು.

ತಾತ್ಯಾಟೋಪಿಯು ಗ್ವಾಲ್ಹೇರಿಯ ಸೈನ್ಯದೊಡನೆ ಸಂಚುಮಾಡಿ ಅದನ್ನು ತನ್ನ ಪಕ್ಷಕ್ಕೆ ಒಲಿಸಿಕೊಳ್ಳಲು ಸಾಧ್ಯವಿದ್ದಿತು. ಆತನು ಗ್ವಾಲ್ಹೇರಿಗೆ ಹೋಗಿ ಅಲ್ಲಿಯ ಸೈನಿಕರ ಅನುಮತಿ ಪಡೆದು ಗೋಪಾಲಪುರಕ್ಕೆ ಬಂದನು. ಪೇಶವೆ ಮೊದಲಾದವರು ಗ್ವಾಲ್ಹೇರಿಗೆ ಹೊರಟರು. ಮಹಾರಾಜ ಜಯಾಜಿರಾಯನು ಬ್ರಿಟಿಷರ ಸ್ನೇಹಿತನಾಗಿದ್ದುದರಿಂದ ಬಂಡುಗಾರರೊಡನೆ ಯುದ್ಧವನ್ನು ಹೂಡಿದನು. ಮಹಾರಾಣಿ ಲಕ್ಷ್ಮೀಬಾಯಿಯೂ

ತಾತ್ಯಾಟೋಪಿಯೂ ಬಹು ದಕ್ಷತೆಯಿಂದ ಹೋರಾಡಿ ಜಯಾಜಿರಾಯನ ವಿಶ್ವಾಸದ ಸೈನಿಕರನ್ನು ಸೋಲಿಸಿದರು. ಮಿಕ್ಕವರು ತಾತ್ಯಾಟೋಪಿಗೆ ವಚನ ಕೊಟ್ಟಿದ್ದಂತೆ ಯುದ್ಧವನ್ನು ನಿಲ್ಲಿಸಿ ಬಂಡುಗಾರರನ್ನು ಕೂಡಿ ಕೊಂಡರು. ಗ್ವಾಲ್ಹೇರಿಯು ಪೇಶವೆಯ ವಶವಾಯಿತು.

ಪೇಶವೆಯ ಮನಸ್ಸು ತಿರುಗಿತು. ತಾತ್ಯಾಟೋಪಿಯೂ ಮೋಸ ಹೊಂದಿದನು. ರಾವಸಾಹೇಬ ಪೇಶವೆಗೆ ಗ್ವಾಲ್ಹೇರಿಯಲ್ಲಿ ಪಟ್ಟಗಟ್ಟುವ ಸಮಾರಂಭವು ನಡೆಯಿತು. ಪ್ರತಿನಿತ್ಯ ಸಹಸ್ರ ಸಹಸ್ರ ಬ್ರಾಹ್ಮಣಭೋಜನ ಮುಂತಾದ ಉತ್ಸವಗಳು ನಡೆಯ ತೊಡಗಿದುವು. ಒಮ್ಮೆ ಪೇಶವೆಯ ರಾಜ್ಯಸ್ಥಾಪನೆಯಾಯಿತೆಂದು ಜನತೆಯಲ್ಲಿ ಸಾರಿದರೆ ಜನರೂ ಹಲವು ಸಂಸ್ಥಾನಿಕರೂ ತಮಗೆ ಅನುಕೂಲರಾಗುವರೆಂದು ತಾತ್ಯಾಟೋಪಿಯು ತಿಳಿದಿದ್ದನು. ಗ್ವಾಲ್ಹೇರಿಯಲ್ಲಿ ದೊರೆತ ಸಿಂಧೆಯ ಭಾಂಡಾರದ ದ್ರವ್ಯದಿಂದ ತಮ್ಮ ಸೈನ್ಯವನ್ನು ಹೆಚ್ಚಿಸಿ ಇದ್ದ ಸೈನ್ಯದಲ್ಲಿ ಸುವ್ಯವಸ್ಥೆಯನ್ನುಂಟು ಮಾಡಿಕೊಳ್ಳುವುದನ್ನು ಬಿಟ್ಟು ಪೇಶವೆಯೂ ಆತನ ಅನುಯಾಯಿಗಳೂ "ನಿರ್ವೀರಮುರ್ವೀತಲಂ" ಎಂದು ಭಾವಿಸಿ ಸುಖವಿಲಾಸಗಳಲ್ಲಿ ಕಾಲ ಕಳೆಯತೊಡಗಿದರು.

ಅತ್ತ ಸರ್ ಹ್ಯೂ ರೋಜ್, ಬ್ರಿಗೇಡಿಯರ್ ಜನರಲ್ ನೇಪೀಯರ ಮುಂತಾದ ರಣಪಟುಗಳು ಮಹಾ-ಸೇನಾಸನ್ನಾಹದೊಡನೆ ಗ್ವಾಲ್ಹೇರಿಗೆ ಹೊರಟರು. ಗ್ವಾಲ್ಹೇರಿಯ ಅಂತಸ್ಥವ್ಯವಸ್ಥೆಯನ್ನೆಲ್ಲ ಅರಿತಿದ್ದ ಯುರೋಪಿಯನ್ ಅಧಿಕಾರಿಗಳು ಅವರೊಡನೆ ಕೂಡಿಕೊಂಡರು. ಬ್ರಿಟಿಷ ಸೈನ್ಯವು ತಮ್ಮ ಮೇಲೆ ಸಾಗಿಬರುವುದನ್ನು ಕೇಳಿ ಪೇಶವೆಯು ಮತ್ತೆ ಕಂಗೆಟ್ಟನು.

ಮಹಾರಾಣಿ ಲಕ್ಷ್ಮೀಬಾಯಿಯ ಶೌರ್ಯದ ಉತ್ಸಾಹ ವಚನಗಳಿಂದ ಪೇಶವೆಯ ಸೈನ್ಯವು ಮತ್ತೆ ಯುದ್ಧಕ್ಕೆ ಅಣಿಯಾಯಿತು. ಒಂದು ಕಡೆ ಮಹಾರಾಣಿಯೂ ಇನ್ನೊಂದು ಕಡೆ ತಾತ್ಯಾಟೋಪಿಯೂ ಯುದ್ಧವನ್ನು ಆರಂಭಿಸಿದರು. ಮಹಾರಾಣಿಯ ಮಹಾಲಕ್ಷ್ಮಿಯಂತಹ ದಿವ್ಯತೇಜಸ್ಸನ್ನೂ ವೈರಿಬಲವೆಂಬ ಮೇಘರಾಶಿಯನ್ನು ಸೀಳುತ್ತಿರುವ ಕೋಲ್ಮಿಂಚಿನಂತೆ ಮಿಂಚುವ ಆಕೆಯ ಖಡ್ಗಧಾರೆಯನ್ನೂ ನೋಡಿ ಸೈನಿಕರ ರಣೋತ್ಸಾಹವು ಇಮ್ಮಡಿಸಿತು. ಎರಡುದಿನ ಹಗಲಿರುಳು ಬಿಟ್ಟು ಬಿಡದೆ ಯುದ್ಧನಡೆಯಿತು.

ಮಿಕ್ಕ ಹಲವು ಕಡೆಗಳಲ್ಲಿ ಬಂಡುಗಾರ ಸೇನೆಯೊಡನೆ ಆದ ಯುದ್ಧಗಳಲ್ಲಿ ತಾಸೆರಡು ತಾಸುಗಳಲ್ಲಿಯೇ ಜಯಾಪಜಯಗಳ ನಿರ್ಣಯವಾಗಿ ಹೋಗುತ್ತಿದ್ದಿತು. ಆದರೆ ಮಹಾರಾಣಿಯ ಅಪ್ರತಿಮವಾದ ರಣಕೌಶಲ್ಯ ಧೈರ್ಯ ಶೌರ್ಯಗಳ ಮೂಲಕ ಇಲ್ಲಿ ಬ್ರಿಟಿಷ ಸೈನಿಕರು ಅಷ್ಟು ಸುಲಭವಾಗಿ ಜಯಶಾಲಿಗಳಾಗಲು ಸಾಧ್ಯವಾಗಲಿಲ್ಲ. ಮಹಾರಾಣಿಯು ಬ್ರಿಗೇಡಿಯರ್ ಸ್ಮಿಥ್ ಸಾಹೇಬನೊಡನೆ ಸಮದಂಡಿಯಲ್ಲಿ ಯುದ್ಧಮಾಡಿದಳು. ಆಕೆಯ ಪರಾಕ್ರಮವನ್ನೂ ರಣಚಾತುರ್ಯವನ್ನೂ ಹಗೆಗಳೂ ಕೊಂಡಾಡಿದರು.

ಗ್ವಾಲ್ಹೇರಿಯಲ್ಲಿಯ ಬಂಡುಗಾರರ ಜೀವಾಳವು ಮುಖ್ಯವಾಗಿ ಸಿಂಧೆಯ ಸೈನ್ಯವನ್ನು ಅವಲಂಬಿಸಿದ್ದಿತು. ಮಹಾರಾಜ ಜಯಾಜಿರಾಯನು ಬ್ರಿಟಿಷರ ಸಂಗಡ ಇದ್ದನು. ಅವರು ಆತನ ಹೆಸರಿನಿಂದ ಒಂದು ಜಾಹೀರ ನಾಮೆಯನ್ನು ಪ್ರಕಟಿಸಿ ಅದರಲ್ಲಿ "ತನ್ನ ಉಪ್ಪನ್ನವನ್ನುಂಡು ಬೆಳೆದಿರುವ ಸೈನಿಕರು ತನ್ನ ಮೇಲೆಯೇ ಶಸ್ತ್ರವೆತ್ತಬಾರದು" ಎಂದು ಬಹು ವಿನಯದಿಂದ ಕೇಳಿಕೊಂಡಿದ್ದರು. ಮತ್ತು ಬ್ರಿಟಿಷರು ಜಯಾಜಿರಾಯನಿಗಾಗಿಯೇ ಯುದ್ಧಮಾಡುತ್ತಿರುವರೆಂದು ಹಗೆಗಳ ಸೈನ್ಯದಲ್ಲೆಲ್ಲ ಸಾರಿದರು. ಗ್ವಾಲ್ಹೇರಿಯ ಸೈನಿಕರು ಭಾರತ ಯುದ್ಧದಲ್ಲಿ "ಅಹೋ ಬತ! ಮಹತ್ಪಾಪಂ ಕರ್ತುಂ ವ್ಯವಸಿತಾ ವಯಂ" ಎಂದು ತಟಸ್ಥನಾದ ಕಡುಗಲಿ ಅರ್ಜುನನಂತೆ ತಟಸ್ಥರಾಗಿ ಬಿಟ್ಟರು. ಬಂಡುಗಾರರ ಬಲವು ಕುಂದಿಹೋಯಿತು.

೧೮೫೮ನೆಯ ಇಸವಿಯ ಜೂನ್ ತಿಂಗಳ ೧೮ನೆಯ ತಾರೀಖಿನ ದಿನ ಪ್ರಾತಃಕಾಲದಲ್ಲಿ ಕಡುತರವಾದ ಕಾಳಗವು ನಡೆಯಿತು. ಮಹಾರಾಣಿಯು ರಣರಂಗದಲ್ಲಿ ಉಜ್ವಲವಾದ ವೀರಶ್ರೀಯಿಂದ ಮೆರೆಯುವ ಪುರುಷಸಿಂಹನಂತೆ ಒಪ್ಪುತ್ತಿದ್ದಳು. ಆಕೆಯ ಪಾವುಡದ ಜರಿಯ ಸೆರಗು ಗಾಳಿಯಿಂದ ಹಾರಾಡುತ್ತಿದ್ದಿತು. ಅಚ್ಚುಕಟ್ಟಾದ ಕಸೆಯ ಅಂಗಿಯೂ, ಮರಾಠಾ ಸೈನಿಕರು ಧರಿಸುವಂತಹ ನಿರಿಗೆಯ ಚೆಲ್ಲಣವೂ, ಕಂಠದಲ್ಲಿ ಥಳಥಳಿಸುವ ಮುತ್ತಿನ ಕಂಠಿಯೂ, ಆಕೆಯ ಸುಂದರವಾದ ಮೈಕಟ್ಟಿನಿಂದ ಎದ್ದು ಕಾಣಿಸುತ್ತಿದ್ದುವು. ಆಕೆಯು ಏರಿದ ದಿವ್ಯಾಶ್ವವು ಶತ್ರು ಸೈನ್ಯದಲ್ಲಿ ಪುಟನೆಗೆದು ಹಾರುತ್ತಿದ್ದಿತು; ಕೈಯಲ್ಲಿಯ ಖಡ್ಗವು ಕೋಲ್ಮಿಂಚಿನ ಹಾಗೆ ಹೊಳೆ ಹೊಳೆದು ವೈರಿ ಸೈನಿಕರ ತಲೆಗಡಿದು ನೆಲಕ್ಕುರುಳಿಸುತ್ತಿದ್ದಿತು.

ಇಂತು ಮಹಾರಾಣಿಯು ಅಪ್ರತಿಮ ಪರಾಕ್ರಮದಿಂದ ಅರಿಬಲವನ್ನು ಮುರಿದು ಮುಕ್ಕುತ್ತಿರುವ ಸಮಯದಲ್ಲಿ ಮುರಾರದ ರಣರಂಗದಲ್ಲಿ ಸರ್ ಹ್ಯೂ ರೋಜ್ ಸಾಹೇಬನು ವಿಜಯಿಯಾದ ವಾರ್ತೆಯು ಬಂಡುಗಾರ ಸೈನ್ಯದಲ್ಲಿ ಹಬ್ಬಿತು. ಮಹಾರಾಣಿಯ ಸಂಗಡಿದ್ದು ಆಕೆಯ ಧೈರ್ಯದಿಂದ ಎಡಗೈಯಲ್ಲಿ ಜೀವ ಹಿಡಿದು ಕಾದುತ್ತಿದ್ದ ಸೈನಿಕರು ಈ ವಾರ್ತೆಯಿಂದ ಎದೆಗೆಟ್ಟರು. ಬ್ರಿಗೇಡಿಯರ್ ಸ್ಮಿಥ್ ಸಾಹೇಬನು ಹಿಮ್ಮಗ್ಗಲಿನಿಂದ ಏರಿ ಬಂದು ಮಹಾರಾಣಿಯು ಕಾದಿಟ್ಟ ಕಾಲ್ಬಲವನ್ನು ಹಿಮ್ಮೆಟ್ಟಿಸಲು ಎಲ್ಲರೂ ರಣರಂಗದಿಂದ ಓಡಿಹೋಗುವ ಪ್ರಯತ್ನ ನಡೆಯಿಸಿದರು. ಮಹಾರಾಣಿಯು ಇದೇ ಕೊನೆಯ ಕದನವೆಂದುಕೊಂಡಳು. ಅಕಸ್ಮಾತ್ ಒಬ್ಬ ಸೈನಿಕನ ಸಂಗೀನು ಆಕೆಯ ಬೆನ್ನಿನಲ್ಲಿ ನೆಟ್ಟಿತು. ತಿರುಗಿ ನೋಡಿ ತನ್ನ ಖಡ್ಗದ ಒಂದು ಏಟಿನಿಂದ ಆತನ ತಲೆಯನ್ನು ನೆಲಕ್ಕುರುಳಿಸಿದಾಗ ಮಗ್ಗುಲಲ್ಲಿದ್ದ ಮುಂದರೆಯು "ಅಕ್ಕಾ, ಸತ್ತೆನು." ಎನ್ನುತ್ತ ನೆಲಕ್ಕುರುಳಿದಳು. ಮಹಾರಾಣಿಯ ಚಪಲವಾದ ಖಡ್ಗಧಾರೆಯು ಮುಂದರೆಯನ್ನು ಕೊಂದ ಸೈನಿಕನನ್ನೂ ಕಡಿದು ಉರುಳಿಸಿತು. ಈ ಅವಸರದಲ್ಲಿ ಇನ್ನೊಬ್ಬ ಸೈನಿಕನ ಖಡ್ಗದ ಹೊಡೆತದಿಂದ ಮಹಾರಾಣಿಯ ತಲೆಯ ಬಲಭಾಗವು ಸಿಡಿದುಬಿದ್ದಿತು. ಕಣ್ಣುಗುಡ್ಡೆ ಹೊರಗೆ ಬಂದಿತು. ಹೈ ! ಭರತಖಂಡದ ವೀರರತ್ನವೊಂದು ಸ್ವಾತಂತ್ರ್ಯ ಸಂಗ್ರಾಮದ ಸಾಗರದಲ್ಲಿ ಮುಳುಗಿ ಹೋಯಿತು. ಅಖಿಲ ಆರ್ಯಾವರ್ತದ ಭಾಗ್ಯಲಕ್ಷ್ಮಿಯಂತಿದ್ದ ಮಹಾರಾಣಿ ಲಕ್ಷ್ಮೀಬಾಯಿಯೊಡನೆ ಬಂಡುಗಾರರ ಜಯಲಕ್ಷ್ಮಿಯೂ ಸ್ವಾತಂತ್ರ್ಯಲಕ್ಷ್ಮಿಯೂ ಅಸ್ತವಾದರು. ಮಹಾರಾಣಿಯು ಮರಣಾನಂತರದಲ್ಲಿಯೂ ತನ್ನ ಶರೀರವು ಶತ್ರುಗಳ ಸ್ಪರ್ಶದಿಂದ ಅಪವಿತ್ರವಾಗಕೂಡದೆಂದು ಬಯಸುತ್ತಿದ್ದಳು. ಆಕೆಯ ಅನುಚರರು ಆ ಮೃತ ಶರೀರಕ್ಕೆ ತಕ್ಕ ಸಂಸ್ಕಾರ ಮಾಡಿದರು; ಮತ್ತು ದತ್ತಪುತ್ರ ದಾಮೋದರರಾಯನನ್ನು ಸುರಕ್ಷಿತವಾದ ಸ್ಥಳಕ್ಕೆ ಒಯ್ದು ಸಂರಕ್ಷಿಸಿದರು.

ಸೇನಾಪತಿ ತಾತ್ಯಾ ಟೋಪಿಯು ತನ್ನ ಅಳಿದುಳಿದ ಅಲ್ಪ ಬಲವನ್ನು ಕೂಡಿಕೊಂಡು ರಣರಂಗದಿಂದ ಓಡಿ ಪಾರಾದನು. ರಾವಸಾಹೇಬ ಪೇಶವೆಯೂ ಅದೃಶ್ಯನಾಗಿಬಿಟ್ಟನು. ವಿಜಯಶಾಲಿಗಳಾದ ಬ್ರಿಟಿಷರು ಮಹಾರಾಜ ಜಯಾಜಿರಾಯನನ್ನು ಮತ್ತೆ ಗ್ವಾಲ್ಹೇರಿಯ ಸಿಂಹಾಸನದಲ್ಲಿ ಎತ್ತಿ ಇಟ್ಟರು.

೧೮೫೭ ಇಸವಿಯ ಮೇ ತಿಂಗಳ ೧೦ ನೆಯ ತಾರೀಖಿಗೆ ಸಿಪಾಯಿ ದಂಗೆಯು ಮೀರತದಲ್ಲಿ ವ್ಯಕ್ತ ಸ್ವರೂಪವನ್ನು ಹೊಂದಿತು. ದಿಲ್ಲಿ, ಲಕನೌ ಕಾನಪುರ, ಝಾಂಸಿ ಮುಂತಾದ ಸ್ಥಳಗಳಲ್ಲಿ ಅದು ಉಗ್ರಸ್ವರೂಪ ಧಾರಣೆ ಮಾಡಿತು. ಮುಂದೆ ಸಪ್ಟಂಬರ್ ತಿಂಗಳ ೭೦ನೆಯ ತಾರೀಖಿಗೆ ದಿಲ್ಲಿಯು ಬ್ರಿಟಿಷರ ವಶವಾಗಿ ಮೊಗಲ್ ಬಾದಷಹನು ಅವರ ಸೆರೆಯಾಳಾದ ಬಳಿಕ ಬಂಡುಗಾರರ ಅಂತರ್ಬಾಹ್ಯ ಶಕ್ತಿಗಳೆರಡೂ ನಷ್ಟವಾದಂತಾದುವು. ಎರಡನೆಯ ಸಾರಿ ಬಂಡುಗಾರರ ವಶಕ್ಕೆ ಬಂದ ಕಾನಪುರವು ಕೈಬಿಟ್ಟ ಬಳಿಕ ಅವರು ಇನ್ನಷ್ಟು ದುರ್ಬಲರಾದರು. ತನ್ನ ಅಲ್ಪ ಪರಿವಾರದೊಡನೆ ಬ್ರಹ್ಮಾವರ್ತದಿಂದ ಹೊರಟ ನಾನಾಸಾಹೇಬನು ಬ್ರಿಟಿಷ ಸೈನ್ಯದ ಚಲನವಲನೆಯನ್ನು ನಿರೀಕ್ಷಿಸುತ್ತ ಮುಂದೆ ಸಾಗಿದ್ದನು. ಇನ್ನು ಮುಂದೆ ಬ್ರಿಟಿಷ ಸೈನ್ಯದ ಮೇಲೆ ಏರಿ ಹೋಗುವುದು ಅಸಾಧ್ಯವೆನಿಸಿದುದರಿಂದ ಆವುದಾದರೊಂದು ಆಶ್ರಯ ಸ್ಥಾನದಲ್ಲಿ ಉಳಿದುಕೊಂಡು ಲಕನೌವಿನ ಸಂಗ್ರಾಮದ ಪರಿಣಾಮವೆಂತಾಗುವುದೊ ನೋಡಬೇಕೆಂದು ಆತನು ನಿಶ್ಚಯಿಸಿದ್ದನು. ಆತನ ಸೈನಿಕರಲ್ಲಿ ಹಲವರು ಲಕನೌವಿಗೂ ಹೋಗಿದ್ದರು.

ಬ್ರಿಟಿಷರ ಬಲವೆಲ್ಲ ಲಕನೌವಿನಲ್ಲಿ ಕೇಂದ್ರೀಭೂತವಾಗಿ ಅವರು ಅದನ್ನು ವಶಮಾಡಿಕೊಂಡ ತರುವಾಯ ಮಹಮ್ಮದೀಯ ಬಂಡುಗಾರರು ನಿರಾಶ್ರಿತರಾದರು. ಮಹಾರಾಷ್ಟ್ರ ಪಕ್ಷದ ಬಂಡುಗಾರರು ಝಾಂಸಿ ಕಾನಪುರಗಳು ಕೈಬಿಟ್ಟರೂ ತಾತ್ಯಾಟೋಪಿ ಮಹಾರಾಣಿ ಲಕ್ಷ್ಮೀಬಾಯಿ ಇವರ ನೇತೃತ್ವದಲ್ಲಿ ಜೀವಧಾರಣೆ ಮಾಡಿಕೊಂಡಿದ್ದರು. ಗ್ವಾಲ್ಹೇರಿಯ ಕದನದಲ್ಲಿ ಮಹಾರಾಣಿಯು ಅದೃಶ್ಯಳಾದೊಡನೆ ಅವರ ಜೀವಜ್ಯೋತಿಯು ಆರಿಹೋದಂತಾಯಿತು. ಇನ್ನುಳಿದವನು ತಾತ್ಯಾಟೋಪಿಯೊಬ್ಬನೇ. ಆತನು ಇನ್ನೂ ಕೆಲವು ಕಾಲ ಬ್ರಿಟಿಷ ಸೈನ್ಯವನ್ನು ಅತ್ತಿತ್ತ ಸುಳಿದಾಡಿಸಿ ತೊಂದರೆಗೀಡುಮಾಡಿದನು. ಹೀಗಿರುವುದರಿಂದ ೧೮೫೮ನೆಯ ಇಸವಿಯ ಜೂನ್ ತಿಂಗಳ ೧೮ನೆಯ ತಾರೀಖಿಗೇ ಸಿಪಾಯಿ ದಂಗೆಯ ಇತಿಶ್ರೀಯಾಯಿತೆಂದು ಹೇಳಬೇಕಾಗುವುದು. ಆದರೂ ಮಂಗಲಸಿಂಹ ಪಾಂಡೆಯ ಪ್ರಥಮಾಹುತಿಯಿಂದ ಪ್ರಾರಂಭವಾದ ಮಹಾಯಜ್ಞವು ಇನ್ನೂ ಪೂರ್ಣಾಹುತಿಯಾಗಿ ಪೂರ್ಣವಾಗಲಿಲ್ಲ. ಈ ವಿಷಯವನ್ನು ಮುಂದಿನ ಪರಿಚ್ಛೇದದಲ್ಲಿ ವಿವರಿಸುವ.

---

# ಏಳನೆಯ ಪರಿಚ್ಛೇದ

## ಬ್ರಿಟಿಷರ ವಿಜಯ, ಶಾಂತಿ

" Without perfect obedience an army is an armed mob dangerous to its friends and contemptible to its enemies "

—*Forrest,*



ಒಂತೇರಾದ ಶಿಬಿರದಲ್ಲಿದ್ದ ಸೇನಾಪತಿ ಕ್ಯಾಂಬೆಲ್ ಸಾಹೇಬನು ಲಕನೌವಿಗೆ ಸಾಗಿ ಹೋಗುವುದಕ್ಕಿಂತ ಮೊದಲು ನಾನಾ ಸಾಹೇಬನ ಹೆಸರಡಗಿಸಿ ಬಿಡಬೇಕೆಂದು ಆಲೋಚಿಸಿದ್ದನು. ಆದರೆ ಆತನಿಗೆ ನಾನಾ ಸಾಹೇಬನ ಚಲನವಲನಗಳು ಇನ್ನೂ ಸರಿಯಾಗಿ ತಿಳಿದಿರಲಿಲ್ಲ. ಅನೇಕ ದೇಶೀಯ ಗುಪ್ತಚರರು ನಾನಾಸಾಹೇಬನ ಗೊತ್ತುಗುರಿಗಳನ್ನು ಕಂಡುಕೊಂಡು ಬರಲು ಹೊರಟಿದ್ದರು. ಅರ್ಜುನ ತಿವಾರಿಯು ಅವರಲ್ಲಿ ಪ್ರಮುಖನು. *

ಗುಪ್ತ ಸಂದೇಶವಾಹಕರಿಗೆ ಬ್ರಿಟಿಷ ಅಧಿಕಾರಿಗಳು ಅತಿಶಯ ಮಾನ ಮರ್ಯಾದೆಗಳನ್ನು ಕೊಡುತ್ತಿದ್ದರು. ಇಂತಹ ಮಾನಮರ್ಯಾದೆಗಳಿಗೆ ಮೋಹಿತರಾಗಿ ದೇಶೀಯರನೇಕರು ಮಾತೃಭೂಮಿಯ ಅಹಿತವನ್ನು ಬಗೆದು ಭ್ರಾತೃವರ್ಗದ ಸರ್ವನಾಶಕ್ಕೆ ಸಿದ್ಧರಾಗಿದ್ದರು. ಗುಪ್ತಸಂದೇಶವಾಹಕ ಅರ್ಜುನ ತಿವಾರಿಗೆ ಸೇನಾಪತಿ ಕ್ಯಾಂಬೆಲ್ ಸಾಹೇಬನ ಸಮ್ಮುಖದಲ್ಲಿ ಯಾವಾಗಲೂ ಆಸನವು ಸಿದ್ಧವಾಗಿರುತ್ತಿತ್ತು. ಆತನ ಅನುಚರರಲ್ಲಿ ಅನೇಕರು ಸಾಧುಸಂತರಾಗಿ ನಾನಾಸಾಹೇಬನನ್ನು ಅನುಸರಿಸಿ ತಿರುಗಾಡಿ

---

* ಅರ್ಜುನ ತಿವಾರಿಗೆ ಈ ಕಾರ್ಯಕ್ಕಾಗಿ ಬಂಡಾಯದ ತರುವಾಯ ಆತನ ಮರಣದ ವರೆಗೆ ಪ್ರತಿವರ್ಷ ೧೨ ನೂರು ರೂಪಾಯಿ ಪೆನ್‌ಷನ್ ದೊರೆಯಿತು.

ಆತನ ಚಲನವಲನಗಳನ್ನು ಆಗಾಗ ಬ್ರಿಟಿಷ ಅಧಿಕಾರಿಗಳಿಗೆ ತಿಳಿಸುತ್ತಿದ್ದರು. ಅವರ ಸಹಾಯದಿಂದ ನಾನಾಸಾಹೇಬನು ಫತ್ತೇಪುರ ಚೌರಾಸಿ ಎಂಬಲ್ಲಿ ಇರುವನೆಂದು ತಿಳಿದುಕೊಂಡ ಬಳಿಕ ಕ್ಯಾಂಬೆಲ್ ಸಾಹೇಬನು ಫೆಬ್ರುವರಿ ತಿಂಗಳ ೧೫ ನೆಯ ತಾರೀಖಿನ ದಿನ ಚಿಕ್ಕದೊಂದು ಸೈನ್ಯವನ್ನು ಕೊಟ್ಟು ಹೋಪ ಗ್ರಾಂಟ್ ಸಾಹೇಬನನ್ನು ಫತ್ತೇಪುರಕ್ಕೆ ಕಳುಹಿದನು. ಆತನು ಎರಡು ದಿನ ನಿರಾಪದವಾಗಿ ಪ್ರವಾಸ ಮಾಡಿ ಫತ್ತೇಪುರವನ್ನು ಸೇರಿದನು. ಆದರೆ ನಾನಾಸಾಹೇಬನು ಅಷ್ಟರಲ್ಲಿ ಮುಂದೆ ಸಾಗಿಬಿಟ್ಟಿದ್ದನು. ಬ್ರಿಟಿಷ ಸೇನಾಪತಿಯು ಕಣ್ಣು ನಾನಾಸಾಹೇಬನ ಮೇಲಿರುವಂತೆಯೇ ನಾನಾಸಾಹೇಬನೂ ಬ್ರಿಟಿಷ ಸೈನ್ಯದ ಚಲನವಲನೆಯಲ್ಲಿ ಸಂಪೂರ್ಣ ದೃಷ್ಟಿಯನ್ನಿಟ್ಟಿದ್ದನು. ಹೋಪ ಗ್ರ್ಯಾಂಟ್ ಸಾಹೇಬನು ತನ್ನ ಬೇಟೆಯು ಕಣ್ಣು ತಪ್ಪಿಸಿ ಓಡಿ ಹೋದುದಕ್ಕಾಗಿ ವಿಷಾದಗೊಂಡು ಅತ್ಯಂತ ಭದ್ರವಾದ ಆ ಚಿಕ್ಕ ದುರ್ಗವನ್ನು ನೆಲಸಮ ಮಾಡಿಸಿದನು.

ನಾನಾಸಾಹೇಬನು ಫತ್ತೇಪುರ ಚೌರಾಸಿಯಿಂದ ಹೊರಟು ನೇಪಾಳದ ರಾಜ್ಯವನ್ನು ಸೇರಿ ಹಿಮಾಲಯದ ಅಂಚಿನ ತೆರಾಯಿ ಪ್ರದೇಶದಲ್ಲಿ ಸೇರಿ ಅತ್ತಿತ್ತ ಅಲೆದಾಡುತ್ತ ಕಾಲಕಳೆಯತೊಡಗಿದನು. ಆತನ ಅನುಯಾಯಿಗಳಲ್ಲಿ ಹಲವರು ಗುಪ್ತವೇಷಗಳಿಂದ ಸಂಚರಿಸುತ್ತ ಆಗಾಗ ಬಂಡಾಯದ ವರ್ತಮಾನಗಳನ್ನು ತರುತ್ತಿದ್ದರು. ಬ್ರಿಟಿಷ ಸೈನ್ಯವೂ ಅವರ ಸ್ನೇಹಿತರೂ ನಾನಾಸಾಹೇಬನನ್ನು ಹುಡುಕುತ್ತಲೇ ಇದ್ದರು. ಇಂತಹ ಸ್ಥಿತಿಯಲ್ಲಿ ಆತನು ತನ್ನ ಅಲ್ಪ ಪರಿವಾರದೊಡನೆ ಅಡವಿ ಅಡವಿ ಅಲೆಯುತ್ತ ಅತಿ ಕಷ್ಟದಿಂದ ಒಂದು ವರ್ಷಕ್ಕಿಂತ ಹೆಚ್ಚು ಕಾಲ ಕಳೆದನು. ಆತನು ತಿಬೇಟದ ಮಾರ್ಗವಾಗಿ ರಶಿಯಕ್ಕೆ ಹೋಗಿ ಝಾರನ ಸಹಾಯದಿಂದ ಹಿಂದುಸ್ಥಾನದ ಮೇಲೆ ಮತ್ತೆ ದಂಡೆತ್ತಿ ಬರುವನೆಂದು ಕೆಲವರು ಆಡಿಕೊಳ್ಳುತ್ತಿದ್ದರು.

ಭರತಖಂಡದ ಗೌರವರಕ್ಷಣೆಗೆ ಸಹಾಯವಾದ ಪರ್ವತೋತ್ತಮ ಹಿಮಾಲಯದ ದಕ್ಷಿಣ ಅಂಚಿನಲ್ಲಿ ನೇಪಾಳದ ರಾಜ್ಯದ ಮೇರೆಯಲ್ಲಿ ಗಂಗೆಯ ಚಿಕ್ಕದೊಂದು ಶಾಖಾನದಿ ಹರಿದಿರುವುದು. ಅದರ ದಂಡೆಯಲ್ಲಿ ದಿವಖರಿ ಎಂಬುದೊಂದು ಚಿಕ್ಕಹಳ್ಳಿ. ಹತ್ತೆಂಟು ಚಿಕ್ಕ ಕುಟುಂಬಗಳು ವಾಸವಾಗಿರುವ ಆ ಹಳ್ಳಿಗೆ ಸಮೀಪಿಸಿದ ಅಡವಿಯಲ್ಲಿ ನದಿಯ ತೀರದಲ್ಲಿ ನಾನಾ-

ಸಾಹೇಬನು ತನ್ನ ಅಲ್ಪ ಪರಿವಾರದೊಡನೆ ವಾಸವಾಗಿದ್ದನು. ಸುಮಾರು ಹತ್ತುಗಳಿಗೆ ರಾತ್ರಿಯಾಗಿರಬಹುದು. ಚತುರ್ಥಿಯ ಚಂದ್ರನು ಮೂಡಲಿನಲ್ಲಿ ಅದೇ ಉದಯಹೊಂದಿ ಮೇಲೆ ಬರುತ್ತಿದ್ದನು. ಗಾಢಾಂಧಕಾರದಲ್ಲಿ ಮುಳುಗಿಹೋಗಿದ್ದ ಭೂದೇವಿಯು ಅಮೃತಕರನ ಶೀತಲ ಕಿರಣಗಳಿಂದ ಮುಗುಳ್ನಗೆ ನಗುವಂತೆ ತೋರಿತು. ವಸಂತಕಾಲದ ಪ್ರಾರಂಭದ ಆ ಸಮಯವು ವನಸ್ಪತಿಗಳಿಗೂ ಕ್ರಿಮಿ-ಕೀಟಕ ಪಶುಪಕ್ಷಿಗಳಿಗೂ ಆನಂದದಾಯಕವಾಗಿದ್ದಿತು. ಅಡವಿಯೊಳಗಿನ ಕಾಲುದಾರಿಯಲ್ಲಿ ಮೆಲ್ಲಡಿಯಿಡುತ್ತ ದೂರದಲ್ಲಿ ಮಿನುಗುತ್ತಿರುವ ದೀಪದ ಬೆಳಕನ್ನು ಗುರಿಯಾಗಿಟ್ಟುಕೊಂಡು ಪಿಸುಮಾತಿನಲ್ಲಿ ಏನೇನೋ ಆಡಿಕೊಳ್ಳುತ್ತ ಮೂವರು ದಾರಿಕಾರರು ಮುಂದೆ ಸಾಗಿದ್ದರು. ಅವರಲ್ಲಿ ಒಬ್ಬನು ಯುರೋಪಿಯನ್ನನು; ಒಬ್ಬನು ದೇಶೀಯ ಗೃಹಸ್ಥನು; ಮೂರನೆಯವನು ಆ ಅರಣ್ಯದ ನಿವಾಸಿ, ಮಾರ್ಗದರ್ಶಕನು. ಅವರ ಹಿಂದೆಯೇ ತುಸ ದೂರದಲ್ಲಿ ಕಾಷಾಯವಸ್ತ್ರವನ್ನುಟ್ಟು ದಂಡ ಕಮಂಡಲುಗಳನ್ನು ಧರಿಸಿದ ಸಂನ್ಯಾಸಿಯೊಬ್ಬನು ಹೊರಟಿದ್ದನು.

ನಾನಾಸಾಹೇಬನ ದೇಹಾರೋಗ್ಯವು ಚೆನ್ನಾಗಿರಲಿಲ್ಲ. ತೆರಾಯಿ ಪ್ರದೇಶದ ತಂಪು ಹವೆಯಲ್ಲಿ ಆತನು ಮಲೆಜ್ವರದಿಂದ ಪೀಡಿತನಾಗಿದ್ದನು. ಪತ್ನಿ ಸುಮಿತ್ರಾದೇವಿಯು ಪಾದದೆಡೆಯಲ್ಲಿ ಕುಳಿತು ಪತಿಯ ಪಾದಸೇವೆ ಮಾಡುತ್ತಿದ್ದಳು. ಕುಸುಮಕೋಮಲೆಯಾದ ಹನ್ನೆರಡು ವರ್ಷದ ಬಾಲಿಕೆಯೊಬ್ಬಳು ಆತನ ತಲೆದಿಂಬಿನ ಬಳಿಯಲ್ಲಿ ಅಧೋವದನೆಯಾಗಿ ಕುಳಿತಿದ್ದಳು. ರೋಗಿಯು "ಕುಸುಮಾ, ತುಸ ಬಿಸಿನೀರು ತಾ." ಎಂದನು. ಬಾಲಿಕೆಯು ಗುಡಿಸಲಿನ ಒಳಗೆ ಹೋಗಿ ಬಿಸಿನೀರು ತಂದಳು. ಮತ್ತು "ಅತ್ತಿಗೆ, ಅಲ್ಲಿ ನೋಡು ಯಾರೋ ಬರುವಂತಿದೆ" ಎನ್ನುತ್ತ ಎದುರಿಗೆ ಬೆರಳೆತ್ತಿ ತೋರಿಸಿದಳು. ಅಷ್ಟರಲ್ಲಿ ಅನುಚರನೊಬ್ಬನು ಅಲ್ಲಿಗೆ ಬಂದು "ಯಾರೋ ಮಹಾರಾಜರನ್ನು ಕಾಣಲು ಬಂದಿರುವರು" ಎಂದನು. ಅತಿಥಿಗಳು ಹತ್ತಿರಬಂದು ಸಾಂಕೇತಿಕ ಭಾಷೆಯಲ್ಲಿ ಏನೇನೋ ಮಾತಾಡಿದರು. ನಾನಾಸಾಹೇಬನು ತನ್ನ ತಂಗಿ– ಶ್ರೀಮಂತ ಬಾಜೀರಾಯನ ಮಗಳು– ‡ ಕುಸುಮಾವತಿಯು ತಂದುಕೊಟ್ಟ ನೀರು ಕುಡಿದು, ದಿಂಬಿಗೆ ಒರಗಿ ಕುಳಿತು "ಸಾಹೇಬ!

‡ ಮುಂದೆ ಈಕೆಯನ್ನು ಗ್ವಾಲ್ಹೇರಿಯ ಸುಪ್ರಸಿದ್ಧ ಸರದಾರ ಬಾಬಾಸಾಹೇಬ ಆಪಟೆ

ಬಹುಕಾಲದ ತರುವಾಯ ತಮ್ಮ ದರುಶನವಾಯಿತು. ಅಂದು ತ್ರ್ಯಂಬಕೇಶ್ವರನ ಮಂದಿರದಲ್ಲಿ ಆನಂದಮಿಶ್ರ ಸ್ವಾಮಿಯವರ ಸಮಕ್ಷ ಮಾತಾಡಿದ ತರುವಾಯ ತಮ್ಮನ್ನು ನೋಡುವುದಾಗಲಿಲ್ಲ. ಅಂತ್ಯಕಾಲವು ಸಮೀಪಿಸಿರುವಾಗ ಮತ್ತೆ ತಮ್ಮ ದರುಶನವಾದುದು ನಮ್ಮ ನಿಮ್ಮ ಪೂರ್ವಜನ್ಮದ ಋಣಾನುಬಂಧದ ನಿದರ್ಶಕವಾಗಿದೆ, '' ಎನ್ನುತ್ತ ನಿಟ್ಟುಸಿರುಬಿಟ್ಟನು.

**ಸಾಹೇಬ—** ಕುಮಾರ ಸಾಹೇಬ, ತಾವು ಚಿಂತಿಸುವ ಕಾರಣವಿಲ್ಲ. ನಾವು ಮಾಡಬೇಕಾದುದನ್ನು ಮಾಡಿದೆವು. ನಮಗೆ ಬೇಕಾದುದೂ ದೊರೆಯಿತೆನ್ನಬೇಕು. ಕಂಪನಿಯ ಸರಕಾರವು ಹಾಳಾಗಿಹೋಗಿ ವಿಕ್ಟೋರಿಯಾ ಮಹಾರಾಣಿಯವರ ಆಳಿಕೆ ಪ್ರಾರಂಭವಾಗಿದೆ. ಇದು ನಮ್ಮ ವಿಜಯದ ನಿದರ್ಶಕವಲ್ಲವೆ?

**ನಾನಾ—** ತಾವು ಈ ಮಹಾಸಂಗ್ರಾಮದಲ್ಲಿ ಎಲ್ಲೆಲ್ಲಿ ಎಂತೆಂತಹ ಕಾರ್ಯಗಳನ್ನು ಕೈಕೊಂಡಿದ್ದಿರೆಂಬುದನ್ನು ತಿಳಿಯಲು ಬಯಸುವೆನು.

**ಸಾಹೇಬ—** ಅಂದು ಸ್ವಾಮಿಯವರ ಸಮಕ್ಷದಲ್ಲಿ ಆಣೆ ಭಾಷೆಗಳಾದ ಬಳಿಕ ನಾನು ಅಜೀಮುಲ್ಲಾಖಾನನೊಡನೆ ಕಾನಪುರಕ್ಕೆಹೋಗಿ ಬಳಿಕ ಬರೇಲಿಯ ಸೇನಾನಿವಾಸಕ್ಕೆ ಹೋದೆನು. ಅಲ್ಲಿಯ ಸೈನಿಕರು ಉತ್ತೇಜಿತರಾಗಿ ದಂಗೆಯನ್ನು ಸಾರಿದ ತರುವಾಯ ಅವರೊಡನೆ ದಿಲ್ಲಿಗೆ ಹೋದೆನು. ಅಲ್ಲಿ ಹಲವರು ದೇಶೀಯ ಸೈನಿಕ ಸೇನಾಧಿಕಾರಿಗಳನ್ನೂ ನಾಗರಿಕ ಪ್ರಮುಖರನ್ನೂ ಕಂಡು ಮಾತಾಡಿ ಸೇನಾಪತಿ ಬಖತ್‌ಖಾನನ ಸ್ನೇಹವನ್ನು ಗಳಿಸಿಕೊಂಡೆನು. ದಿಲ್ಲಿಯಲ್ಲಾದ ಮಹಾಸಂಗ್ರಾಮದಲ್ಲಿ ನಾನು ಮುಖ್ಯ ಗೋಲಂದಾಜನಾಗಿ ಕೆಲಸಮಾಡಿದೆನು. ಸಪ್ಟೆಂಬರ್ ತಿಂಗಳ ೧೪ನೆಯ ತಾರೀಖಿನ ದಿನದ ತುಮುಲ ಸಂಗ್ರಾಮದಲ್ಲಿ ನಾನು ಬಹುಜನ ವಿರೋಧಿಗಳನ್ನು ಮಣ್ಣುಗೂಡಿಸಿದೆನು. ದಿಲ್ಲಿಯ ಪರಾಜಯದ ತರುವಾಯ ಮಥುರೆಗೆ ಹೋಗಿ ಬಂಡುಗಾರ ಸೈನ್ಯವು ಯಮುನೆಯನ್ನು ದಾಟಿ ಪಾರಾ

---

ಯವರ ಚಿರಂಜೀವ ರಾವಸಾಹೇಬ ಆಪಟೆಯವರಿಗೆ ಕೊಟ್ಟು ಲಗ್ನವಾಯಿತು. ಈಕೆಯು ೧೯೧೭ನೆಯ ಇಸವಿಯಲ್ಲಿ ಕಾಲಾಧೀನಳಾದಳು. ಶ್ರೀಮಂತ ನಾನಾಸಾಹೇಬನ ಮರಣದ ಸ್ಥಾನಕಾಲಗಳ ವಿಷಯದಲ್ಲಿ ಈಕೆಯು ಹೇಳಿದ್ದ ಮಾತುಗಳನ್ನು ಮಹಾರಾಷ್ಟ್ರ ಇತಿಹಾಸಕಾರರೊಬ್ಬರು ಸಂಗ್ರಹಿಸಿರುವರು; ಅವನ್ನೇ ಇಲ್ಲಿ ಹೇಳಿದೆ.

ಗುವ ಅನುಕೂಲತೆ ಮಾಡಿಕೊಟ್ಟೆನು. ಸೇನಾಪತಿ ಬಖತ್‌ಖಾನನ ಮತ್ತು ಫಿರೋಜಷಹನ ಸೈನ್ಯದಲ್ಲಿ ವೈಮನಸ್ಯದ ಮೂಲಕ ಉಂಟಾದ ಅವ್ಯವಸ್ಥೆಯನ್ನು ನಾನೇ ಸರಿಪಡಿಸಿಕೊಂಡು ಆ ಸೈನಿಕರೊಡನೆ ಲಕನೌವಿಗೆ ಹೋದೆನು. ಲಕನೌವಿನಲ್ಲಿ ದಂಗೆಗಾರ ಸೈನ್ಯವು ಸೋತಬಳಿಕ ಅಲ್ಲಿಂದ ೫೭ ಮೈಲು ದೂರದಲ್ಲಿದ್ದ ರುಯಾ ದುರ್ಗಕ್ಕೆ ಹೋದೆನು. ಎಪ್ರಿಲ್ (೧೮೫೮) ತಿಂಗಳ ೧೪ನೆಯ ತಾರೀಖಿಗೆ ಬ್ರಿಟಿಷ ಸೈನ್ಯವು ಆ ದುರ್ಗವನ್ನು ಮುತ್ತಿದಾಗ ದುರ್ಗದ ನಡುವೆ ಇದ್ದ ಎತ್ತರವಾದ ಗಿಡದಮೇಲೇರಿ ಕುಳಿತು ಸೇನಾಪತಿ ಹೋಪಗ್ರ್ಯಾಂಟ್ ಮೊದಲಾದ ಹಲವರನ್ನು ಗುರಿಯಿಟ್ಟು ಗುಂಡಿನಿಂದ ಸುಟ್ಟೆನು. † ರುಯಾ ದುರ್ಗವು ನಮ್ಮ ಕೈಬಿಟ್ಟಬಳಿಕ ಬರೇಲಿಗೆ ಹೋದೆನು. ನಬಾಬಗಂಜದ ಯುದ್ಧದಲ್ಲಿ ಬಖತ್‌ಖಾನನು ಮರಣ ಹೊಂದಿದ ತರುವಾಯ ನಾವು ನೇಪಾಳದ ರಾಜ್ಯವನ್ನು ಸೇರಿದೆವು. ನೊವೆಂಬರ್ ತಿಂಗಳ ಮೊದಲನೆಯ ತಾರೀಖಿಗೆ ಪ್ರಕಟವಾದ ವಿಕ್ಟೋರಿಯಾ ಮಹಾರಾಣಿಯವರ ಜಾಹೀರನಾಮೆಯಿಂದ ಬಹುಜನ ಸೈನಿಕರೂ ಸೇನಾಧಿಕಾರಿಗಳೂ ಯುದ್ಧದ ಹಂಬಲವನ್ನು ಬಿಟ್ಟುಬಿಟ್ಟರು. ರಾಣಿಯವರ ಜಾಹೀರನಾಮೆಯು ತಾತ್ಕಾಲಿಕವಾಗಿರುವುದೆಂದೂ ತಮಗೊದಗಿದ ಕುತ್ತು ದಾಟಿದ ಬಳಿಕ ರಾಣಿಯ ಸರಕಾರವು ಕಂಪನಿಯ ಸರಕಾರದ ಮರಿಯಾಗಿ ಪರಿಣಮಿಸಿ ಜಾಹೀರನಾಮೆಯು ಸತ್ತ ಕಾಗದವಾಗುವುದೆಂಬೂ ಹೇಳಿ ಅವರನ್ನು ಹುರುಪುಗೊಳಿಸಲು ಯತ್ನಿಸಿದುದೆಲ್ಲ ವ್ಯರ್ಥವಾಯಿತು. ಆಗ ನನಗೆ ಅನ್ಯತ್ರ ದಾರಿತೋರದಾಯಿತು. ಅಷ್ಟರಲ್ಲಿ ಸೇನಾಪತಿ ತಾತ್ಯಾಟೋಪಿಯು ಉತ್ತರ ಹಿಂದುಸ್ತಾನದ ಅಡವಿಗಳಲ್ಲಿ ಅಲೆದಾಡುತ್ತ ಬ್ರಿಟಿಷ ಸೈನ್ಯವನ್ನು ಅತ್ತಿತ್ತ ಕುಣಿಸಾಡುತ್ತಿರುವನೆಂದು ತಿಳಿಯಿತು. ನಾವೆಲ್ಲರೂ ಆತನನ್ನು ಅನುಸರಿಸಿ ಹೊರಟೆವು.

**ನಾನಾ**– ಸಾಹೇಬ, ಭಾರತಮಾತೆಯು ತಮಗೆ ಚಿರಋಣಿಯಾಗಿರುವಳು. ನನಗೆ ಇತ್ತೀಚೆಗೆ ತಾತ್ಯಾಟೋಪಿಯ ಸಮಾಚಾರವೇ ತಿಳಿದಿಲ್ಲ.

**ಸಾಹೇಬ**– ನಾನು ಆತನ ವಿಷಯದಲ್ಲಿ ಅನೇಕ ಸಂಗತಿಗಳನ್ನು ತಿಳಿದಿರುವೆನು. ಗ್ವಾಲ್ಹೇರಿಯ ರಣರಂಗದಲ್ಲಿ ಭಾರತಮಾತೆಯ ಗೌರವ

† Forbes mitchell Reminiscences etc Appendix, B.

ಮುಕುಟದೊಳಗಿನ ಉಜ್ವಲ ರತ್ನವೆನಿಸಿದ ಮಹಾರಾಣಿ ಲಕ್ಷ್ಮೀಬಾಯಿಯು ಅದೃಶ್ಯಳಾದ ತರುವಾಯ ತಾತ್ಯಾಟೋಪಿಯು ತನ್ನ ಅಲ್ಪ ಬಲದೊಡನೆ ಪಾರಾಗಿ ನಡೆದನು. ಗ್ವಾಲ್ಹೇರಿ, ಝಾಂಸಿ, ಗುಣಾ, ಸಿಪ್ರಿ, ನಸಿರಾಬಾದ ಮುಂತಾದ ಹಲವು ಕಡೆಗಳಲ್ಲಿ ಬ್ರಿಟಿಷ ಸೈನ್ಯವು ಆತನ ಮಾರ್ಗವನ್ನು ಅಡ್ಡಗಟ್ಟಿ ನಿಂತಿದ್ದಿತು. ಆತನು ಮರಾಟರ "ಗೋರಿಲ್ಲಾ ವಾರ ಫೇಅರ" ಪದ್ಧತಿಯನ್ನು ಬ್ರಿಟಿಷ ಸೈನಿಕರ ಅನುಭವಕ್ಕೆ ಅಡಿಗಡಿಗೆ ತಂದುಕೊಡುತ್ತ ಅವರ ಕಣ್ಣು ತಪ್ಪಿಸಿ ಓಡಾಡುತ್ತಿದ್ದನು. ಈ ಸ್ಥಿತಿಯಲ್ಲಿ ಆತನು ಒಂಬತ್ತು ತಿಂಗಳುಗಳ ವರೆಗೆ ಬ್ರಿಟಿಷ ಸೈನ್ಯವನ್ನು ಅತ್ತಿತ್ತ ಕುಣಿಸಾಡಿದನು.

ಗ್ವಾಲ್ಹೇರಿಯಿಂದ ೪೪ ಮೈಲು ದೂರದಲ್ಲಿ ನರವರ ಎಂಬಲ್ಲಿಯ ಜಮೀನುದಾರ ಮಾನಸಿಂಗನು ಗ್ವಾಲ್ಹೇರಿಯ ಸರಕಾರದ ವಿರುದ್ಧ ಪುಂಡಾಟಿಕೆ ನಡೆಯಿಸಿದನೆಂಬ ಕಾರಣದಿಂದ ಬ್ರಿಟಿಷರು ಆತನ ಮೇಲೆ ದಂಡೆತ್ತಿ ಹೋಗಿದ್ದರು. ನಿರಾಶ್ರಿತನಾದ ಮಾನಸಿಂಗನು ತಾತ್ಯಾಟೋಪಿಯ ಆಶ್ರಯವನ್ನು ಕೋರಿದನು. ಆಶ್ರಿತ ರಕ್ಷಣಪರಾಯಣನಾದ ತಾತ್ಯಾಟೋಪಿಯು ಆತನಿಗೆ ಆಶ್ರಯ ಕೊಟ್ಟು ತನ್ನ ಸೈನ್ಯದಲ್ಲಿ ಒಂದು ಅಧಿಕಾರದ ಸ್ಥಳವನ್ನು ಕೊಟ್ಟನು. ಈ ನೀಚ ಮಾನಸಿಂಗನೇ ತನ್ನ ಕವಡೆಯ ಸ್ವಾರ್ಥಕ್ಕಾಗಿ ವಿಶ್ವಾಸಘಾತಮಾಡಿ ತನ್ನ ಆಶ್ರಯದಾತನ ಸರ್ವನಾಶಕ್ಕೆ ಕಾರಣವಾದನು.

**ನಾನಾ**—ಸಾಹೇಬ, ಅದಕ್ಕೇನು ಮಾಡುವುದು? ಸ್ವಾರ್ಥವು ಪಾಪದ ತಾಯಿ. ತಾತ್ಯಾಟೋಪಿಯು ಈಗ ಬದುಕಿರುವನಷ್ಟೇ?

**ಸಾಹೇಬ**— ಕುಮಾರ ಸಾಹೇಬ, ಆ ಮಹಾಪುರುಷನು ಈಗ ಈ ಲೋಕದಲ್ಲಿಲ್ಲ; ಸ್ವರ್ಗಲೋಕದಲ್ಲಿದ್ದು ತನ್ನವರು ಮಾಡುತ್ತಿರುವ ಸತ್ಕರ್ಮ ದುಷ್ಕರ್ಮಗಳನ್ನು ನೋಡುತ್ತಲಿದ್ದಾನೆ. ಮಾತೃಭೂಮಿಯ ಉದ್ಧಾರಕ್ಕಾಗಿ ಸರ್ವಸ್ವವನ್ನೂ ಧಾರೆಯೆರೆದು ತ್ರಿಕರಣ-ಶುದ್ಧಿಯಿಂದ ಕಾರ್ಯ ಮಾಡುವ ಮಹಾತ್ಮರ ಆತ್ಮಯಜ್ಞದಿಂದ ಭಾರತಮಾತೆಯು ಸ್ವಾತಂತ್ರ್ಯ ಸುಖವನ್ನು ಅನುಭವಿಸುವ ಕಾಲವನ್ನು ನಿರೀಕ್ಷಿಸುತ್ತಲಿದ್ದಾನೆ.

"ಅಯ್ಯೋ! ದೈವವೇ!...." ರೋಗಿಯು ಮೂರ್ಛಿತನಾದನು. ಬಾಲಿಕೆ ಕುಸುಮಾವತಿಯು ಆತನ ಬಾಯಿಗೆ ನೀರೆರೆದಳು. ರೋಗಿಯು ಚೇತರಿಸಿಕೊಂಡು "ಸಾಹೇಬ, ಮುಂದೇನಾಯಿತು.." ಎಂದನು.

**ಸಾಹೇಬ—** ಎಪ್ರಿಲ್ ತಿಂಗಳ ಪ್ರಾರಂಭದಲ್ಲಿ ಮಾನಸಿಂಗನು ತಾತ್ಯಾಟೋಪಿಯನ್ನು ಕಂಡು ಕೆಲವು ಜನ ಸೈನಿಕರನ್ನೂ ಅಲ್ಪ ಸ್ವಲ್ಪ ಅನ್ನ ಸಾಮಗ್ರಿಯನ್ನೂ ಕೂಡಿಸಿಕೊಂಡು ಎರಡು ಮೂರು ದಿನಗಳಲ್ಲಿಯೇ ತಿರುಗಿ ಬರುವೆನೆಂದೂ ಅಲ್ಲಿಯ ವರೆಗೂ ಇಲ್ಲಿಯೇ ಇರಬೇಕೆಂದೂ ಹೇಳಿ ಗುಪ್ತ ಸ್ಥಳದಿಂದ ಹೊರಟು ಹೋದನು. ತಾತ್ಯಾಟೋಪಿಯೊಡನೆ ಈಗ ಸೈನ್ಯವಿರಲಿಲ್ಲ. ಒಬ್ಬ ಅಡುಗೆಯವನು, ಒಬ್ಬ ಕೆಲಸ ಮಾಡುವ ಆಳು, ಎರಡು ಕುದುರೆಗಳು, ಒಂದು ಸಾಮಾನು ಹೊರುವ ಹೇಸರಗತ್ತೆ, ಇವಿಷ್ಟೇ ಆತನ ಸರಂಜಾಮುವಾಗಿದ್ದಿತು. ವಿಶ್ವಾಸಘಾತಕಿ ಮಾನಸಿಂಗನು ಬ್ರಿಟಿಷರೊಡನೆ ಸಂಚು ನಡೆಯಿಸಿ ತಾತ್ಯಾಟೋಪಿಯನ್ನು ಹಿಡಿದುಕೊಡುವ ಕಾಯಕವನ್ನು ಒಪ್ಪಿಕೊಂಡಿದ್ದನು. ಎಪ್ರಿಲ್ ತಿಂಗಳ ೭ನೆಯ ತಾರೀಖಿನ ದಿನ ಮಾನಸಿಂಗನು ತಿರುಗಿ ಬಂದನು. ತಾತ್ಯಾಟೋಪಿಯು ಅಲಿವಾರ ಸಂಸ್ಥಾನದಲ್ಲಿ ಪಾರಣವೆಂಬ ಘೋರಾರಣ್ಯದ ನಡುವೆ ಮೇಲೆ ಹೇಳಿದ ಅಲ್ಪ ಪರಿವಾರದೊಡನೆ ವಾಸವಾಗಿದ್ದನು. ರಾವಸಾಹೇಬ ಪೇಶವೆಯೂ ನಾನೂ ಬೇರೊಂದು ಅನುಕೂಲವಾದ ಸ್ಥಳವನ್ನು ನೋಡಿಕೊಂಡು ಬರುವುದಕ್ಕೆ ಹೋಗಿದ್ದೆವು. ತಾತ್ಯಾನು ಇಂತಹ ಕಷ್ಟಮಯ ಕಾಲದಲ್ಲಿಯೂ ನಿಶ್ಚಿಂತನಾಗಿ ನಿದ್ದೆಮಾಡುತ್ತಿದ್ದನು. ದೈವಯೋಗದಿಂದ ತನಗುಂಟಾದ ವಿಪತ್ತಿನಿಂದ ಆತನ ಮನಸ್ಸಿನ ಶಾಂತಿ ಭಂಗಹೊಂದಿರಲಿಲ್ಲ. ಆತನು "ಭಗವಂತನನ್ನು ಸ್ಮರಿಸಿ ನಾನು ನನ್ನ ಕರ್ತವ್ಯವನ್ನು ಮಾಡಿದ್ದೇನೆ; ಲಾಭಾಲಾಭ ಜಯಾಜಯಗಳು ಆತನಿಗೆ ಸೇರಿದುವು." ಎಂದು ಅಡಿಗಡಿಗೆ ಅನ್ನುತ್ತಿದ್ದನು. ಸುಖದುಃಖಗಳು ಆತನನ್ನು ಹಿಗ್ಗಿಸಿ ತಗ್ಗಿಸಲಿಲ್ಲ. ಮಧ್ಯರಾತ್ರಿಯ ಸಮಯದಲ್ಲಿ ಕೆಲ ಜನ ಬ್ರಿಟಿಷ ಸೈನಿಕರೂ ಅವರ ನಾಯಕ ಮೀಡ ಸಾಹೇಬನೂ ಸಂಚುಗಾರ ಮಾನಸಿಂಗನು ತೋರಿಸಿದ ದಾರಿಯಲ್ಲಿ ಸಾವಕಾಶವಾಗಿ ಸಾಗಿ ಬಂದು ನಿದ್ರಾವಶನಾಗಿದ್ದ ತಾತ್ಯಾಟೋಪಿಯನ್ನು ಸೆರೆಹಿಡಿದರು. ಮೀಡ ಸಾಹೇಬನ ಮಗ್ಗುಲಲ್ಲಿ ನಿಂತಿರುವ ಕೃತಘ್ನ ಮಾನಸಿಂಗನ ಮುಖವನ್ನು ಮಶಾಲಿನ ಬೆಳಕಿನಲ್ಲಿ ನೋಡಿದಾಗ ಬಲೆಯಲ್ಲಿ ಬಿದ್ದ ಸಿಂಹನಂತಾದ ವೀರಾಧಿವೀರ ತಾತ್ಯಾಟೋಪಿಯ ಮನಸ್ಸಿನಲ್ಲಿ ಹುಟ್ಟಿದ ರೋಷಾವೇಶಗಳನ್ನೂ ಪಾಪಿ ಮಾನಸಿಂಗನ ಆ ಕಾಲದ ಮನೋಭಾವನೆಯನ್ನೂ ಮುಖಚರ್ಯೆ

ಯನ್ನೂ ನಾನು ವರ್ಣಿಸಲಾರೆನು. ಇಂತಹ ಪಾಪಾಚರಣೆಯ ಪ್ರತಿಫಲ-ವೆಂದು ಮಾನಸಿಂಗನಿಗೆ ಕಳೆದುಹೋಗಿದ್ದ ಜಹಗೀರು ಮರಳಿ ದೊರೆಯಿತು. ಮೀಡ ಸಾಹೇಬನು ತಾತ್ಯಾಟೋಪಿಯನ್ನು ಸಿಪ್ರಿಗೆ ಒಯ್ದನು. ಕಂಪನಿಯ ಸರಕಾರದ ವಿರುದ್ಧ ಒಂತಾಯ ಹೂಡಿದನೆಂಬ ಆರೋಪದಿಂದ ಆತನಿಗೆ ೧೮೫೯ ನೆಯ ಇಸವಿಯ ಎಪ್ರಿಲ್ ತಿಂಗಳ ೧೭ ನೆಯ ತಾರೀಖಿಗೆ ದೇಹಾಂತ ಶಿಕ್ಷೆ ವಿಧಿಸಲ್ಪಟ್ಟಿತಂತೆ. ತನಗೆ ಶಿಕ್ಷೆಯನ್ನು ವಿಧಿಸಲು ಕಂಪನಿಯ ಸರಕಾರಕ್ಕೆ ಅಧಿಕಾರವಿಲ್ಲವೆಂಬ ವಿಷಯದ ಆತನ ಪ್ರತಿಪಾದನೆ ತುಂಬ ವಿಚಾರಾರ್ಹವಾಗಿದ್ದರೂ ಅದನ್ನವರು ಲಕ್ಷಿಸಲೇ ಇಲ್ಲವಂತೆ.

" ಮಂಗಲಸಿಂಹ ಪಾಂಡೆಯ ಪ್ರಥಮಾಹುತಿಯಿಂದ ಪ್ರಾರಂಭವಾದ ಮಹಾಯಜ್ಞವು ಎರಡು ವರ್ಷಗಳ ತರುವಾಯ ನರಕೇಸರಿ ತಾತ್ಯಾಟೋಪಿಯ ಪೂರ್ಣಾಹುತಿಯಿಂದ ಪೂರ್ಣವಾದಂತಾಯಿತು. " ಗುಡಿಸಲಿನ ಮುಂಭಾಗದಲ್ಲಿ ಗಿಡದ ನೆರಳಿನಲ್ಲಿ ನಿಂತವರು ಯಾರೋ ಹೀಗೆಂದರು. ನಾನಾಸಾಹೇಬನು ಸ್ಮೃತಿ ತಪ್ಪಿ ನೆಲಕ್ಕೆ ಒರಗಿದನು.

" ರಾಮ ! ರಾಮ ! ರಾಮ ! " ಎನ್ನುತ್ತ ಸಂನ್ಯಾಸಿಯೊಬ್ಬನು ಅಕಸ್ಮಾತ್ ಅಲ್ಲಿಗೆ ಬಂದು ತನ್ನ ಕಮಂಡಲೋದಕದಿಂದ ರೋಗಿಯ ಕಣ್ಣೊರಸಿ ಬಾಯಿಗೂ ತುಸ ನೀರೆರೆದನು. ರೋಗಿಯು ಚೇತರಿಸಿಕೊಂಡು ಇದಿರಿಗಿರುವ ಆನಂದಮಿಶ್ರ ಸ್ವಾಮಿಯನ್ನು ನೋಡಿ " ಗುರುದೇವ " ಎನ್ನುತ್ತ ಆತನ ಪಾದಗಳ ಮೇಲೆ ಉರುಳಿ ಕಣ್ಣೀರು ಸುರಿಸಿದನು.

**ಆನಂದಮಿಶ್ರ**:—ವತ್ಸಾ ! ಎಲ್ಲವನ್ನೂ ಕೇಳಿ ತಿಳಿದಿರುವೆನು. ನೀನು ಅಳುವದೇಕೆ ? ಭಾರತಮಾತೆಯು ನಿಮ್ಮಂತಹ ಸತ್ಪುತ್ರರ ಆತ್ಮಯಜ್ಞದಿಂದಲೇ ಪುನೀತಳಾಗಬೇಕು. ನೀವು ಮಾಡಿದುದು ಸಾಮಾನ್ಯ ಕೆಲಸವಲ್ಲ. ನೀವು ಪ್ರಾರಂಭಿಸಿದ ಮಹಾಸಂಗ್ರಾಮವು ವಿಚಿತ್ರ ಪರಿಸ್ಥಿತಿಯುಳ್ಳದ್ದಾಯಿತು. ಕೃಷಿಜೀವಿಗಳಾದ ಭಾರತವಾಸಿಗಳು ಸದಾ ಶಾಂತಿ ಪ್ರಿಯರು; ಕ್ರಾಂತಿಯು ಅವರಿಗೆ ಬೇಕಾಗಿರಲಿಲ್ಲ. ಧರ್ಮಭಯದಿಂದ ಅಖಿಲ ಜನತೆಯಲ್ಲಿ ಜಾಗ್ರತೆಯನ್ನುಂಟುಮಾಡಿ ಸ್ವಾತಂತ್ರ್ಯ ಯುದ್ಧವನ್ನು ಸಾರುವುದೂ ಸಾಧ್ಯವಾಗಲಿಲ್ಲ. ಭಾರತೀಯರಲ್ಲಿ ಇನ್ನೂ ಏಕರಾಷ್ಟ್ರೀಯತ್ವದ ಕಲ್ಪನೆ ಹುಟ್ಟಿಲ್ಲ. ಕಾನಪುರ, ದಿಲ್ಲಿ, ಲಖನೌ, ಝಾಂಸಿ, ಬರೇಲಿ ಮುಂತಾದ

ಕಡೆಗಳಲ್ಲಿ ರಾಜ್ಯಕ್ರಾಂತಿಯನ್ನು ಸಾರಿದರೂ ಹೈದರಾಬಾದ ಭೋಪಾಳ ಮುಂತಾದ ಮಹಮ್ಮದೀಯರಾಜ್ಯಗಳೂ ಇಂದೂರು,ಬಡೋದೆ,ಗ್ವಾಲ್ಹೇರಿ ಮುಂತಾದ ಹಿಂದೂ ಸಂಸ್ಥಾನಗಳೂ ಈ ರಣಕಲ್ಲೋಲದಲ್ಲಿ ಸೇರ್ಪಡೆಯಾಗಲಿಲ್ಲ. ಸ್ವಾಭಿಮಾನಿಗಳೂ ಸ್ವರಾಜ್ಯ ಪ್ರೇಮಿಗಳೂ ಸ್ವಧರ್ಮನಿಷ್ಠರೂ ಆದ ಕೆಲವರು ತೇಜಸ್ವಿಗಳು ಮಾತ್ರ ಧರ್ಮನಾಶದ ಭೀತಿಯಿಂದಲೂ ಕಂಪನಿಯ ಅಧಿಕಾರಿಗಳ ಸ್ವೈರವರ್ತನೆಯಿಂದಲೂ ಅಸಂತುಷ್ಟರಾದ ಸೈನಿಕರ ನೆರವಿನಿಂದ ಈ ಮಹಾಸಂಗ್ರಾಮವನ್ನು ಮುಂದೆ ಸಾಗಿಸಿದರು. ಇದು ವ್ಯವಹಾರ ದೃಷ್ಟಿಯಿಂದ ಯಶಸ್ವಿಯಾಗದೆ ಇದ್ದರೂ ಆ ಮಹನೀಯರ ಅಪೂರ್ವ ಆತ್ಮತ್ಯಾಗಕ್ಕೆ ತಕ್ಕ ಪ್ರತಿಫಲವು ದೊರೆಯದೆ ಹೋಯಿತೆನ್ನುವಂತಿಲ್ಲ.

ಸಾಹೇಬ—ಕುಮಾರಸಾಹೇಬ, ಈ ಮಾತು ನಿಜವೇ ಸರಿ. ಅಖಿಲ ಭರತಖಂಡವೂ ಈ ಯುದ್ಧದಲ್ಲಿ ತೊಡಗದೆ ಇದ್ದರೂ ಅಡ್ಡಿಯಿರಲಿಲ್ಲ. ಯುದ್ಧಕ್ಕೆ ಸಿದ್ಧವಾದ ಬಂಡುಗಾರ ಸೈನ್ಯವು ಕೂಡ ಉಚ್ಛೃಂಖಲವೃತ್ತಿಯಿಂದ ಸ್ವೇಚ್ಛಾಚಾರಿಯಾಗಿ ಆಯುಧ ಪಾಣಿಗಳಾದ ಪುಂಡುಗಾರರ ತಂಡದಂತಾಗಿ ಸ್ವಪಕ್ಷದವರಿಗೆ ಭಯಾವಹವಾಗಿಯೂ ಶತ್ರುಗಳಿಗೆ ಹೀನಾಯವಾಗಿಯೂ ಪರಿಣಮಿಸಿತು. ರಣಕುಶಲನಾದ ಒಬ್ಬ ಸೇನಾಪತಿಯ ಆಜ್ಞೆಗೆ ಅಧೀನವಾಗಿ ಕೆಲಸ ಮಾಡದೆ ಇದ್ದುದರಿಂದ ಆ ಪ್ರಚಂಡ ಸೇನೆಯ ಶಕ್ತಿ ಸಾಹಸಗಳು ವ್ಯರ್ಥವಾದುವು. ಭಾರತವಾಸಿಗಳೆಲ್ಲರೂ ಭಾರತಮಾತೆಯ ಪುತ್ರರೆಂಬುದನ್ನು ಮರೆತುಬಿಟ್ಟು ಹಿಂದು ಮಹಮ್ಮದೀಯರೆಂಬ ಭೇದ ಭಾವನೆ ಹುಟ್ಟಿ ಅವರ ಕಸುವು ಕುಂದಿಹೋಯಿತು! ಕಾನಪುರದಲ್ಲಿ ನಾಲ್ಕಡಿ ಎತ್ತರವಾಗಿ ಹೊಯ್ದ ಮಣ್ಣಿನ ಗೋಡೆಯ ಆಶ್ರಯದಲ್ಲಿದ್ದ ನೂರಾರು ಜನ ಯುರೋಪಿಯನ್ನರನ್ನು ವಿಪುಲ ಸಹಾಯ ಸಂಪತ್ತುಳ್ಳ ಸಹಸ್ರಾರು ವೀರ ಭಟರು ಜಯಿಸುವುದಾಗಲಿಲ್ಲ. ಕೊನೆಗೆ ಅವರು ವಾಮಮಾರ್ಗವನ್ನು ಅವಲಂಬಿಸಿ ಹಗೆಗಳನ್ನು ಮೋಸಗೊಳಿಸಬೇಕಾಯಿತು. ದಿಲ್ಲಿಯಲ್ಲಿ ಭದ್ರವಾದ ದುರ್ಗದ ಆಶ್ರಯದಲ್ಲಿದ್ದ ಲಕ್ಷಾವಧಿ ಬಂಡುಗಾರರನ್ನು ಬ್ರಿಟಿಷ ಸೇನೆಯು ಮೂರೇ ತಿಂಗಳಲ್ಲಿ ಧ್ವಂಸಮಾಡಿಬಿಟ್ಟಿತು. ಲಕನೌವಿನಲ್ಲಿ ಸೆರೆಸಿಕ್ಕಿದ್ದ ಅಲ್ಪ ಸಂಖ್ಯಾಕವಾದ ಬ್ರಿಟಿಷ ಸೇನೆಯು ೧೫೦ ಸಾವಿರ ಬಂಡುಗಾರ ಸೈನ್ಯವನ್ನು ಹತ್ತು ತಿಂಗಳಿಗಿಂತ ಹೆಚ್ಚು ಕಾಲ ಎದುರಿಸಿತು.

**ನಾನಾ**—ಇಂತಹ ವೈಮನಸ್ಯ-ಭೇದ-ಭಾವಗಳಿಂದಲೇ ನಮ್ಮವರು ಹಿಂದೆ ಹಾಳಾಗಿ ಹೋದರು; ಈಗಲೂ ಹಾಳಾಗುತ್ತಿದ್ದಾರೆ; ಮುಂದೆಯೂ ನಮಗೆ ಇದೇ ದೊಡ್ಡ ವಿಘ್ನಕಾರಿಯಾಗಿ ಉಳಿಯುವುದು. ಈ ಮಹಾಸಂಗ್ರಾಮದಿಂದ ದೇಶದ ಸಂಪತ್ತು ಸೂರೆಯಾಗಿ ಹೋಯಿತು. ಒಂದೇ ಚರಖಾರೀ ಸಂಸ್ಥಾನದಲ್ಲಿ ೩ ಕೋಟಿ ರೂಪಾಯಿಗಳಿಗಿಂತ ಹೆಚ್ಚು ದ್ರವ್ಯವನ್ನು ಹಗೆಗಳು ಸುಲಿದುಕೊಂಡರು. ಬ್ರಿಟಿಷ ಸೇನೆಯಲ್ಲಿಯ ಪ್ರತಿಸೈನಿಕನೂ ಹತ್ತು ಸಾವಿರ ರೂಪಾಯಿ ಗಳಿಸಿಕೊಂಡಿರಬಹುದೆಂದು ಅಂದಾಜು ಮಾಡಿದ್ದಾರೆ. ರಣರಂಗದಲ್ಲಿ ಮಡಿದವರನ್ನು ಬಿಟ್ಟು ನಾಲ್ವತ್ತು ಐವತ್ತು ಸಾವಿರ ಜನರನ್ನು ಬ್ರಿಟಿಷ ಸೈನ್ಯವು ಕೊಂದು ಬಿಸುಡಿರುವುದಂತೆ. ಇದೇನು ಸಾಮಾನ್ಯ ಹಾನಿಯೇ ? ರಾಮ ! ರಾಮ ! ರಾಮ !

**ಸಾಹೇಬ**— ಬ್ರಿಟಿಷರು ತಮ್ಮ ಶೌರ್ಯದಿಂದಲೇ ವಿಜಯವನ್ನು ಗಳಿಸಿದರೆಂದು ಹೇಳಲಾರೆನು. ಅಂಗದ, ಅರ್ಜುನ ತಿವಾರಿ ಮುಂತಾದ ಗುಪ್ತಚರರೂ ನಾನಾ ನಾರಾಯಣರಾಯ, ಮಾನಸಿಂಗ ಮೊದಲಾದ ದ್ರೋಹಿಗಳೂ ಅವರಿಗೆ ನೆರವಾದರು. ಶೀಖರೂ, ಗುರ್ಖಾಸೈನಿಕರೂ ಅವರ ಬೆನ್ನು ಕಟ್ಟಿದರು. ಲಖನೌವಿನಿಂದ ಹೊರಟ ಇಂಜನಿಯರ್ ಕಾವನಾಗ್ ಸಾಹೇಬನು ದೇಶೀಯ ಗುಪ್ತಚರನ ನೆರವಿನಿಂದ ಸುರಕ್ಷಿತವಾಗಿ ಕ್ಯಾಂಬೆಲ್ ಸಾಹೇಬನ ಶಿಬಿರವನ್ನು ಸೇರಿದನು. ಅದೇ ಲಕನೌವಿನಿಂದಲೇ ಬಂದಿದ್ದ ಇಂಜನಿಯರ್ ಮಹಮ್ಮದ ಅಲ್ಲಿಯನ್ನು ದೇಶೀಯರೇ ಗುಪ್ತಚರನೆಂದು ಹಿಡಿದುಕೊಟ್ಟರು. ಇಂತಹ ದೇಶದ್ರೋಹಿಗಳಿಂದಲೇ ನಮ್ಮವರು ಹಾಳಾದರು. ಕ್ಯಾಂಬೆಲ್ ಸಾಹೇಬನ ಪರಾಕ್ರಮಕ್ಕಿಂತಲೂ ಮಹಾರಾಣಿಯ ಜಾಹೀರನಾಮೆಯೇ ಹೆಚ್ಚು ಜನರನ್ನು ರಣರಂಗದಿಂದ ಹಿಮ್ಮೆಟ್ಟಿಸಿತು.

**ರಾವಸಾಹೇಬ ಪೇಶವೆ**—ಸಾಹೇಬ! ನೀವು ಹೇಳುವುದು ಸತ್ಯವೇ ಸರಿ. ಈ ಸಂಗ್ರಾಮದಲ್ಲಿ ಬ್ರಿಟಿಷರ ಧೈರ್ಯ ಶೌರ್ಯ ಶಕ್ತಿ ಸಾಹಸಗಳಿಗಿಂತಲೂ ಅವರ ಯುಕ್ತಿ, ಅತ್ಯಂತ ಕ್ರೂರವಾದ ಮನಸ್ಸು ಇವೇ ಹೆಚ್ಚಾಗಿ ನಮ್ಮ ನಿದರ್ಶನಕ್ಕೆ ಬಂದುವು. ಅಲ್ಲದೆ ನಮಗೆ ಕಾಲವೂ ಅನುಕೂಲವಾಗಲಿಲ್ಲ. ಆದರೂ ಕಂಪನಿಯ ಸರಕಾರವು ಹಾಳಾಗಿ ಹೋಯಿತು; ಇಷ್ಟರಿಂದಲೇ ನಾವು ಇಂದು ಸಮಾಧಾನ ಮಾಡಿಕೊಳ್ಳಬೇಕು.

ಆನಂದಮಿಶ್ರ—ನಿಮ್ಮಿಂದಲೂ ಅವರು ಒಂದು ಪಾಠವನ್ನು ಕಲಿತು ಕೊಳ್ಳುವಂತಾಯಿತು. ಧರ್ಮಪ್ರಾಣವಾಗಿರುವ ಭರತಖಂಡದ ಜೀವವೆಲ್ಲಿದೆ ಯೆಂಬುದನ್ನು ಅವರು ಕಂಡು ಬುದ್ಧಿಗಲಿತರು. ನಮಗೆ ಬೇಕಾಗಿರುವುದು ಶಾಂತಿ; ಧರ್ಮ; ಸತ್ಯ; ಸಮತೆ. ಮಹಾರಾಣಿಯ ಜಾಹೀರನಾಮೆಯನ್ನು (ಅನುಬಂಧ) ನೋಡಿ ಇವು ಸದ್ಯಕ್ಕಂತೂ ನಮಗೆ ಲಭಿಸಿದುವೆನ್ನಬೇಕು.

ನಾನಾಸಾಹೇಬನು "ಭಗವಂತನ ಕರುಣೆಯಿಂದ ಮಹಾರಾಣಿಯ ಜಾಹೀರನಾಮೆಯಲ್ಲಿಯ ವಾಕ್ಯಗಳಂತೆಯೇ ಕಾರ್ಯಭಾರವು ನಡೆದು ಸಕಲ ಭಾರತವಾಸಿಗಳೂ ಸಂಪನ್ನರಾಗಲಿ! ಸುಖಿಗಳಾಗಲಿ! ಶಾಂತರಾಗಲಿ! ರಾಮ! ರಾಮ! ರಾಮ!" ಎನ್ನುತ್ತ ಕಣ್ಣುಮುಚ್ಚಿದನು.

ಆನಂದಮಿಶ್ರನು ತನ್ನ ವರದ ಹಸ್ತವನ್ನು ಆತನ ತಲೆಯಲ್ಲಿರಿಸಿದನು. ನಾನಾಸಾಹೇಬನ ಮುಖದಲ್ಲಿ ಮಿಂಚಿದ ದಿವ್ಯತೇಜಸ್ಸಿನ ಮಿಂಚು ಆನಂದ-ಮಿಶ್ರನಲ್ಲಿ ಮಿಶ್ರವಾಗಿ ಹೋಯಿತು. ಜ್ಯೋತಿಯು ದೊಡ್ಡದಾಯಿತು.

ವಿಕ್ಟೋರಿಯಾ ಮಹಾರಾಣಿಯವರ ತುಷ್ಟಿರಸ್ತು! ಪುಷ್ಟಿರಸ್ತು! ಶಾಂತಿರಸ್ತು! ಎನ್ನುವ ಶಾಂತಿಪಾಠದ ಜಾಹೀರನಾಮೆಯ ತೆರೆಯನ್ನು ಇಳಿಯಬಿಟ್ಟು ಅತ್ಯಂತ ಕ್ರೂರಾಚರಣೆಯ ನೋಟಗಳುಳ್ಳ ಈ ದುಃಖಾಂತ ನಾಟಕದ ಕೊನೆಯ ದೃಶ್ಯವನ್ನು ಮರೆಮಾಡುವ. ಕವಿರವೀಂದ್ರರ ಉಜ್ವಲ-ವಾಣಿಯಲ್ಲಿ ಮಂಗಲಗೀತವನ್ನು ಪಾಡುವ.

ಜನ ಗಣ ಮನ ಅಧಿನಾಯಕ ಜಯ ಹೇ! ಭಾರತ ಭಾಗ್ಯವಿಧಾತಾ।
ಪಂಜಾಬ ಸಿಂಧ ಗುಜರಾಥ ಮರಾಠಾ ದ್ರಾವಿಡ ಉತ್ಕಲ ವಂಗ।
ವಿಂಧ್ಯ ಹಿಮಾಚಲ ಯಮುನಾ ಗಂಗಾ ಉಚ್ಛಲ ಜಲಧಿ ತರಂಗ॥
ತವ ಶುಭ ನಾಮೇ ಜಾಗೇ।
ತವ ಶುಭ ಆಶಿಸ ಮಾಗೇ।
ಗಾಹೇ ತವ ಯಶ ಗಾಥಾ।
ಜನಗಣ ಮಂಗಳ ದಾಯಕ ಜಯ ಹೇ! ಭಾರತ ಭಾಗ್ಯವಿಧಾತಾ!
ಜಯಹೇ! ಜಯಹೇ! ಜಯಹೇ! ಜಯ ಜಯ ಜಯಹೇ!

# ಅನುಬಂಧ

## ವಿಕ್ಟೋರಿಯಾ ಮಹಾರಾಣಿಯವರ ಜಾಹೀರನಾಮೆ

ಹಿಂದುಸ್ತಾನದಲ್ಲಿ ಪ್ರಜ್ವಲಿತವಾಗಿರುವ ವಿದ್ರೋಹಾಗ್ನಿಯ ಕಾರಣವು ಹೆಚ್ಚುಕಾಲ ಮುಚ್ಚುಮರೆಯಲ್ಲಿ ಉಳಿಯಲಿಲ್ಲ. ಕಂಪನಿಯ ಸರಕಾರದ ಆಡಳಿತೆಯು ಭಾರತವಾಸಿಗಳಿಗೆ ತೀರ ಅಪ್ರಿಯಕರವಾಗಿರುವುದೆಂಬುದನ್ನು ಇಂಗ್ಲಂಡದ ಜನತೆಯೂ ಸರಕಾರವೂ ಕಂಡುಕೊಂಡುವು. ೧೮೫೮ನೆಯ ಇಸವಿಯ ಅಗಸ್ಟ ತಿಂಗಳ ೨ನೆಯ ತಾರೀಖಿಗೆ ಬ್ರಿಟಿಷ ಹಿಂದುಸ್ತಾನದ ಆಡಳಿತೆಯನ್ನು ಕಂಪನಿಯ ಸರಕಾರದಿಂದ ಮಹಾರಾಣಿಯವರ ಆಧೀನಕ್ಕೆ ತೆಗೆದುಕೊಳ್ಳಬೇಕೆಂದು ಪಾರ್ಲಿಮೆಂಟ್ ಸಭೆಯಲ್ಲಿ ನಿರ್ಣಯವಾಗಿ ಅದಕ್ಕೆ ವಿಕ್ಟೋರಿಯಾ ಮಹಾರಾಣಿಯವರ ಸಹಿಯಾಯಿತು. ನೊವೆಂಬರ ತಿಂಗಳ ಮೊದಲನೆಯ ತಾರೀಖಿಗೆ ಆ ವಿಷಯದಲ್ಲಿ ವಿಕ್ಟೋರಿಯಾ ಮಹಾರಾಣಿಯವರ ಹೆಸರಿನಿಂದ ಒಂದು ಜಾಹೀರನಾಮೆಯನ್ನು ಪ್ರಕಟಿಸಿದರು. ಅದರೊಳಗೆ ಈ ಕೆಳಗಿನ ಮುಖ್ಯ ಮಾತುಗಳಿದ್ದುವು.

ಇಂದಿನವರೆಗೆ ಈಸ್ಟ ಇಂಡಿಯಾ ಕಂಪನಿಯ ಆಧೀನದಲ್ಲಿದ್ದ ಹಿಂದುದೇಶದ ಭಾಗವನ್ನು ನಾವು ನಮ್ಮ ಅಧಿಕಾರಕ್ಕೆ ತೆಗೆದುಕೊಂಡಿರುವೆವು. ಮತ್ತು ಇನ್ನು ಮುಂದೆ ಆ ಪ್ರದೇಶದ ರಾಜ್ಯಕಾರ್ಯಭಾರವನ್ನು ಪಾರ್ಲಿಮೆಂಟ್ ಸಭೆಯ ಅನುಮತಿಯ ಮೇರೆಗೆ ನಾವೇ ನಡೆಯಿಸುವೆವು.

ಭರತಖಂಡದ ಪ್ರಜೆಗಳು ಪ್ರಜಾಧರ್ಮವನ್ನು ಪಾಲಿಸಿ ಇನ್ನು ಮುಂದೆ ನಮಗೂ ನಮ್ಮ ಉತ್ತರಾಧಿಕಾರಿಗಳಿಗೂ ಭಕ್ತಿಯಿಂದ ವಿನೀತರಾಗಿ ನಡೆದುಕೊಳ್ಳಬೇಕು. ಮತ್ತು ಹಿಂದುಸ್ತಾನದ ಆಡಳಿತೆಗಾಗಿ ನಾವು ನಿಯಮಿಸುವ ಅಧಿಕಾರಿಗಳಿಗೂ ತಕ್ಕ ಮಾನಮರ್ಯಾದೆಗಳನ್ನು ಕೊಟ್ಟು ನಡೆದುಕೊಂಡು ಅವರ ಅಪ್ಪಣೆಯನ್ನು ಪಾಲಿಸುತ್ತಿರಬೇಕು.

ನಮ್ಮ ವಿಶ್ವಾಸಕ್ಕೂ ಪ್ರೀತಿಗೂ ಪಾತ್ರರಾದ ಚಾರ್ಲಸ್ ಜಾನ್ ವೈಕೌಂಟ್ ಕ್ಯಾನಿಂಗ್ ಬಹದ್ದೂರರ ಪ್ರಭುಭಕ್ತಿ ಕಾರ್ಯಕ್ಷಮತೆ ಸದಸದ್ವಿವೇಚನೆಗಳ ಮೇಲೆ ಸಂಪೂರ್ಣ ನಂಬುಗೆಯನ್ನಿಟ್ಟು ನಾವು ಅವರನ್ನು

ನಮ್ಮ ಭಾರತಸಾಮ್ರಾಜ್ಯದ ಮೊದಲನೆಯ ರಾಜಪ್ರತಿನಿಧಿ ಮತ್ತು ಗವರ್ನರ ಜನರಲನ ಅಧಿಕಾರಕ್ಕೆ ನಿಯಮಿಸಿರುವೆವು. ಮತ್ತು ನಾವು ನಮ್ಮ ಮುಖ್ಯಮಂತ್ರಿಯ ಮೂಲಕ ಕಾಲಕಾಲಕ್ಕೆ ಪ್ರಕಟಿಸುತ್ತಿರುವ ನಿಯಮಗಳನ್ನು ಅನುಸರಿಸಿ ವೈಕೌಂಟ್ ಕ್ಯಾನಿಂಗ್ ಬಹದ್ದೂರರು ಇನ್ನು ಮುಂದೆ ಭರತಖಂಡದ ಶಾಸನಕಾರ್ಯವನ್ನು ನಿರ್ವಹಿಸುತ್ತಿರುವರು.

ಸದ್ಯಕ್ಕೆ ಈಸ್ಟ ಇಂಡಿಯಾ ಕಂಪನಿಯವರು ನಿಯಮಿಸಿರುವ ಎಲ್ಲ ಸರಕಾರಿ ನೌಕರರು ನಮ್ಮ ಇಚ್ಛೆ ಇರುವ ವರೆಗೆ ಅಥವಾ ಅವರು ನಮ್ಮ ಅಪ್ಪಣೆಯಂತೆ ನಡೆಯುವವರೆಗೆ ನಮ್ಮ ನೌಕರರಾಗಿ ಉಳಿಯುವರು.

ಈಸ್ಟ ಇಂಡಿಯಾ ಕಂಪನಿಯ ಸರಕಾರವು ದೇಶೀಯ ರಾಜರ ಮತ್ತು ರಾಜಕುಟುಂಬಗಳ ಕೂಡ ಮಾಡಿಕೊಂಡಿರುವ ಎಲ್ಲ ಒಂಪ್ಪಂದಗಳನ್ನೂ ಅವರ ಎಲ್ಲ ಆಶ್ವಾಸನಗಳನ್ನೂ ನಾವು ಇನ್ನು ಮುಂದೆಯೂ ಶಬ್ದಶಃ ನಡೆಯಿಸಿಕೊಡುವೆವು. ದೇಶೀಯ ಅರಸರು ಕೂಡ ಅಂತಹ ಒಪ್ಪಂದಗಳನ್ನೂ ವಚನಗಳನ್ನೂ ಸರಿಯಾಗಿ ಪಾಲಿಸುವರೆಂದು ನಾವು ನಂಬುತ್ತೇವೆ.

ಸದ್ಯಕ್ಕೆ ಭರತಖಂಡದಲ್ಲಿ ನಮಗಿರುವ ರಾಜ್ಯವನ್ನೂ ಅಧಿಕಾರವನ್ನೂ ಇನ್ನು ಮುಂದೆ ಬೆಳೆಯಿಸಬೇಕೆಂದು ನಾವು ಇಚ್ಛಿಸುವುದಿಲ್ಲ. ಅನ್ಯರು ನಮ್ಮ ರಾಜ್ಯವನ್ನು ಆಕ್ರಮಿಸಲು ಯತ್ನಿಸಿದರೆ ನಾವು ಅವರನ್ನು ದಂಡಿಸದೆ ಬಿಡಲಾರೆವು. ಭರತಖಂಡದ ಅರಸರ ಅಧಿಕಾರ ಸ್ಥಾನ ಮಾನಗಳನ್ನು ನಾವು ನಮ್ಮ ಅಧಿಕಾರ ಸ್ಥಾನ ಮಾನಗಳಂತೆಯೇ ನೋಡಿಕೊಳ್ಳುವೆವು. ದೇಶದಲ್ಲಿ ಶಾಂತಿಯುಂಟಾದರೆ ಸುಖ ಸೌಭಾಗ್ಯಗಳು ಹೆಚ್ಚುವುವು. ಭರತಖಂಡದ ರಾಜರೂ ಅವರ ಪ್ರಜೆಗಳೂ ನಮ್ಮ ಪ್ರಜೆಗಳೂ ಅಂತಹ ಸುಖ ಸೌಭಾಗ್ಯಗಳಿಂದ ಕೂಡಿ ಬಾಳಿ ಬದುಕಲಿ.

ನಾವು ನಮ್ಮ ಇತರ ಪ್ರಜೆಗಳೊಡನೆ ರಾಜಧರ್ಮವನ್ನು ಪಾಲಿಸುವುದಕ್ಕೆ ಬದ್ಧ ಪ್ರತಿಜ್ಞರಾಗಿ ನಡೆದುಕೊಳ್ಳುವಂತೆಯೇ ಭರತ ಖಂಡದ ಪ್ರಜೆಗಳೊಡನೆಯೂ ನಡೆದುಕೊಳ್ಳುವೆವು. ಸರ್ವಶಕ್ತಿಮಾನ್ ಭಗವಂತನನ್ನು ಸ್ಮರಿಸಿ ನಾವು ನಮ್ಮ ಈ ಪ್ರತಿಜ್ಞೆಯನ್ನು ಪಾಲಿಸಲು ಯತ್ನಿಸುವೆವು.

ಕ್ರೈಸ್ತ ಧರ್ಮದಲ್ಲಿ ನಮಗೆ ದೃಢವಿಶ್ವಾಸವಿರುವುದು. ಆದರೆ ನಮ್ಮ ಪ್ರಜೆಗಳಲ್ಲಿ ಈ ವಿಶ್ವಾಸವನ್ನು ಹುಟ್ಟಿಸಲಿಕ್ಕೆ ನಾವು ಯಾವ ಯತ್ನವನ್ನೂ

ಮಾಡುವುದಿಲ್ಲ. ಯಾವ ಧರ್ಮದವರೇ ಆಗಲಿ, ತಮ್ಮ ತಮ್ಮ ಧರ್ಮ ಸಮ್ಮತವಾದ ಕಾರ್ಯಗಳನ್ನು ಮಾಡುತ್ತಿದ್ದರೆ ಅವರ ಮೇಲೆ ಅನುಗ್ರಹ ವನ್ನಾಗಲಿ ನಿಗ್ರಹವನ್ನಾಗಲಿ ನಾವು ಎಂದೂ ಮಾಡುವುದಿಲ್ಲವೆಂದು ಸಾರಿ ಸಾರಿ ಹೇಳುವೆವು. ಅವರವರು ತಮತಮಗೆ ಪ್ರಿಯಕರವಾದ ಧರ್ಮಾನು ಸಾರವಾಗಿ ನಡೆದುಕೊಳ್ಳಬಹುದು. ಎಲ್ಲ ಧರ್ಮದ ಪ್ರಜೆಗಳನ್ನೂ ನಾವು ಒಂದೇ ರೀತಿಯಾಗಿ ನಡೆಯಿಸಿಕೊಳ್ಳುವೆವು. ಭರತಖಂಡದ ಪ್ರಜೆಗಳ ಧರ್ಮಾಚರಣೆಯ ವಿಷಯದಲ್ಲಿ ಯಾವರೀತಿಯಿಂದಲೂ ಕೈಹಾಕಕೂಡ ದೆಂದು ನಾವು ನಮ್ಮ ಭರತಖಂಡದ ಅಧಿಕಾರಿಗಳಿಗೆ ಅಪ್ಪಣೆಕೊಡುವೆವು.

ನಮ್ಮ ಪ್ರಜೆಗಳ ಧರ್ಮ, ಜಾತಿ ಇವನ್ನು ನೋಡದೆ ಅವರ ವಿದ್ಯೆ, ಕಾರ್ಯಕ್ಷಮತೆ, ಸದಾಚರಣೆ, ಇವನ್ನು ಅನುಲಕ್ಷಿಸಿ ಯೋಗ್ಯ ಅಧಿಕಾರದ ಸ್ಥಳಕ್ಕೆ ನಿಯಮಿಸುವೆವಲ್ಲದೆ ಯಾರಿಗೂ ಪಕ್ಷಪಾತ ಮಾಡುವುದಿಲ್ಲ.

ಭರತಖಂಡದ ಪ್ರಜೆಗಳಿಗೆ ತಮ್ಮ ಪಿತ್ರಾರ್ಜಿತವಾದ ಭೂಸಂಪತ್ತಿನ ವಿಷಯದಲ್ಲಿ ಎಷ್ಟು ಅಭಿಮಾನ ಪ್ರೀತಿಗಳಿರುವುವೆಂಬುದನ್ನು ನಾವು ಬಲ್ಲೆವು. ಆದುದರಿಂದ ಅವರಿಗಿರುವ ಭೂಮಿಯ ಅಧಿಕಾರವನ್ನು ಕಾದುಕೊಡುವು ದಕ್ಕೆ ನಾವು ಬಾಧ್ಯರಾಗಿರುವೆವು. ಆದರೆ ಅವರು ನಿಯಮಾನುಸಾರವಾಗಿ ಕಾಲಕಾಲಕ್ಕೆ ಸಲ್ಲಿಸಬೇಕಾಗುವ ತೆರಿಗೆಯನ್ನು ಸಲ್ಲಿಸಬೇಕು. ಈ ವಿಷಯ ದಲ್ಲಿ ಕಾಯದೆಯನ್ನು ಮಾಡುವಾಗಲೂ ಅದನ್ನು ಪ್ರಚಾರದಲ್ಲಿ ತರುವಾ ಗಲೂ ನಾವು ಭರತಖಂಡದ ಪ್ರಜೆಗಳ ಪ್ರಾಚೀನ ಪರಂಪರೆಯನ್ನೂ ರಾಜ ನೀತಿಯನ್ನೂ ಅನುಲಕ್ಷಿಸಿಯೇ ಕಾರ್ಯಮಾಡುವೆವು.

ಕೆಲಜನ ದುಷ್ಟರ ದುರ್ಬೋಧನೆಯಿಂದ ದೇಶದಲ್ಲಿ ರಾಜದ್ರೋಹದ ಬೆಂಕಿ ಹಬ್ಬಿರುವುದನ್ನು ಕಂಡು ನಮಗೆ ಅತ್ಯಂತ ದುಃಖವಾಗುವುದು. ದಂಗೆಯಲ್ಲಿ ಸೇರಿದ ಜನರು ಇನ್ನು ಮುಂದೆ ಪ್ರಜಾಧರ್ಮದಂತೆ ನಡೆಯ ತೊಡಗಿದರೆ ನಾವು ಅವರ ಅಪರಾಧವನ್ನು ಕ್ಷಮಿಸಿ ದಯೆಯಿಂದಲೂ ಸೌಜನ್ಯದಿಂದಲೂ ನಡೆಯಿಸಿಕೊಳ್ಳುವೆವು.

ನಮ್ಮ ಪ್ರತಿನಿಧಿ ವೈಕೌಂಟ್ ಕ್ಯಾನಿಂಗ್‌ರವರು ಈ ಮೊದಲೇ ಪ್ರಕಟಿ ಸಿದಂತೆ ಕ್ಷಮೆಗೆ ಅರ್ಹರಾದ ಅಪರಾಧಿಗಳನ್ನು ಕ್ಷಮಿಸಲು ನಾವು ಬಯಸು ವೆವು. ಅಲ್ಲದೆ ಬ್ರಿಟಿಷ ಪ್ರಜೆಗಳ ಕೊಲೆಪಾತಕಕ್ಕೆ ಪ್ರತ್ಯಕ್ಷ ಕಾರಣರಲ್ಲದ

ದೇಶೀಯ ಪ್ರಜೆಗಳನ್ನೆಲ್ಲ ಕ್ಷಮಾದೃಷ್ಟಿಯಿಂದ ನೋಡುವೆವು.

ಯಾರು ಸಿಪಾಯಿ ದಂಗೆಯಲ್ಲಿ ಪ್ರತ್ಯಕ್ಷ ಭಾಗಿಗಳಾಗಿರುವರೋ ಯಾರು ಆ ಸಮಯದಲ್ಲಿ ನರಹತ್ಯೆ ಮಾಡಿದ ಅಪರಾಧಿಗಳನ್ನು ಬುದ್ಧಿ ಪೂರ್ವಕವಾಗಿ ತಮ್ಮ ಆಶ್ರಯದಲ್ಲಿಟ್ಟುಕೊಂಡಿರುವರೋ ಅಂಥವರಿಗೂ ಇನ್ನು ಮುಂದೆ ಪ್ರಾಣದಂಡನೆಯನ್ನು ವಿಧಿಸದೆ ಅವರ ಅಪರಾಧಕ್ಕೆ ತಕ್ಕ ಶಿಕ್ಷೆಯನ್ನು ವಿಧಿಸುವೆವು. ಮತ್ತು ಅವರು ಸ್ವಪ್ರೇರಣೆಯಿಂದ ಇಂತಹ ಅಪರಾಧಮಾಡಿರುವರೋ ಅಥವಾ ಅನ್ಯರ ದುರುಪದೇಶದಿಂದ ಮಾಡಿರು ವರೋ ಎಂಬುದನ್ನು ನೋಡಿ ಪರಪ್ರೇರಣೆಯಿಂದ ಅಪರಾಧವೆಸಗಿದವರನ್ನು ಕ್ಷಮಿಸಿಬಿಡುವೆವು. ಇದೂ ಅಲ್ಲದೆ, ಕಂಪನಿಯ ಸರಕಾರದ ವಿರುದ್ಧ ಶಸ್ತ್ರ ಧಾರಣೆ ಮಾಡಿದವರು ಕೂಡ ಈಗ ತಮ್ಮ ತಮ್ಮ ನಿವಾಸಗಳಿಗೆ ತಿರುಗಿ ಹೋಗಿ ಉದ್ಯೋಗವ್ಯವಸಾಯಗಳಲ್ಲಿ ತೊಡಗಿ ಶಾಂತರಾದರೆ ಅವರ ಅಪ ರಾಧವನ್ನೂ ಕ್ಷಮಿಸುವೆವು. ೧೮೫೯ನೆಯ ಇಸವಿಯ ಜನವರಿ ತಿಂಗಳ ಮೊದಲನೆಯ ತಾರೀಖಿನ ಒಳಗಾಗಿ ನಮ್ಮ ಕ್ಷಮೆಯ ಜಾಹೀರನಾಮೆಯ ನಿಯಮಗಳಂತೆ ನಡೆಯುವ ಎಲ್ಲರ ಅಪರಾಧಗಳನ್ನೂ ಕ್ಷಮಿಸಿ ಅವರಿಗೆ ದಯೆ ತೋರಿಸುವೆವು.

ದೇವರ ದಯೆಯಿಂದ ದೇಶದಲ್ಲಿ ಶಾಂತತೆಯುಂಟಾದರೆ ಭರತಖಂಡದ ಕೃಷಿವಾಣಿಜ್ಯಗಳ ಅಭಿವೃದ್ಧಿಗೆ ತಕ್ಕ ಪ್ರೋತ್ಸಾಹನೆಕೊಟ್ಟು ಪ್ರಜೆಗಳ ಹಿತ, ಸಂಪದಭಿವೃದ್ಧಿಗಳನ್ನೇ ಧ್ಯೇಯವಾಗಿಟ್ಟುಕೊಂಡು ಭರತಖಂಡದ ಶಾಸನ ಕಾರ್ಯವು ನಡೆಯಿಸಲ್ಪಡುವುದು. ಭರತಖಂಡದ ಪ್ರಜೆಗಳ ಅಭ್ಯುದಯವೇ ನಮ್ಮ ಬಲವೆಂದೂ, ಅವರ ತೃಪ್ತಿಯೇ ನಮ್ಮ ಭದ್ರತೆಯೆಂದೂ, ಅವರು ಸಂತುಷ್ಟರಾಗಿ ಕೃತಜ್ಞತೆಯಿಂದ ಪ್ರಕಟಿಸುವ ರಾಜಭಕ್ತಿಯೇ ನಮಗೆ ಸರ್ವೋತ್ಕೃಷ್ಟ ಪುರಸ್ಕಾರವೆಂದೂ ತಿಳಿಯುವೆವು. ಮಂಗಲಮಯನಾದ ಸರ್ವಶಕ್ತಿಮಾನ್ ಭಗವಂತನು ನಮಗೂ ನಮ್ಮ ಉತ್ತರಾಧಿಕಾರಿಗಳಿಗೂ ಈ ನಮ್ಮ ಸಂಕಲ್ಪವನ್ನು ಕಾರ್ಯಕಾರಿಯಾಗಿ ಆಚರಿಸಲು ತಕ್ಕ ಸಾಮ ರ್ಥ್ಯವನ್ನು ಕೊಟ್ಟು ನಮ್ಮ ಪ್ರಜೆಗಳಿಗೆ ಮಂಗಲವನ್ನುಂಟುಮಾಡಲೆಂದು ಬೇಡಿಕೊಳ್ಳುವೆವು.

ಶ್ರೀರಸ್ತು

# ಮಹನೀಯರ ಅಭಿಪ್ರಾಯಗಳು

The story of this book forms a unique chapter in the History of the so called Indian Mutiny of 1857; and deals with the life and exploits of the adopted son of the last of the Peshavas. The name of Nana-Saheb like that of his celebrated contemporary, Maharani Luxmi-bai of Zansi has been a watch-word with every Indian house-hold. Mr. Kurdi's powers, as a writer, are well known; and the present book shows them more conspicuously than ever. The book is bound to be a great favorite with Kannada readers.

(*Sd*) **S. S. Basavanal**
*Chairman*
*K. V. V. Sangha, Dharwar.*

*10th March*, 1931.

ಐತಿಹಾಸಿಕ ಕಾದಂಬರಿಗಳನ್ನು ಬರೆಯುವುದು ಒಂದು ವಿಶಿಷ್ಟವಾದ ಕಲೆ. ಐತಿಹಾಸಿಕ ಸತ್ಯಕ್ಕೆ ಬಾಧೆಯುಂಟಾಗಬಾರದು; ಆದರೆ ಕಠೋರ ಸತ್ಯದ ನೀರಸವಾದ ಹಿಡಿತದಲ್ಲಿ ಸಿಕ್ಕಿರಬಾರದು; ಹೀಗೆ ಬರೆಯಲ್ಪಟ್ಟ ಐತಿಹಾಸಿಕ ಕಾದಂಬರಿಗಳು ಕನ್ನಡದಲ್ಲಿ ವಿರಳ. ಇದ್ದವುಗಳಲ್ಲಿ ಅನೇಕ ಕಥೆಗಳು ಇತಿಹಾಸದ ಎಲ್ಲೆಯನ್ನಾದರೂ ಮೀರಿರುತ್ತವೆ; ಇಲ್ಲವೆ ಸಂಬಂಧವಿಲ್ಲದ ಕ್ಷೇತ್ರಗಳಲ್ಲಾದರೂ ವಿಹರಿಸುತ್ತವೆ. ಶ್ರೀ. ಕುರಡಿಯವರು ಬರೆದ ಈ ಪುಸ್ತಕದಿಂದ ಅವರಿಗೆ ಇಂಥ ಕಥೆಗಳನ್ನು ಬರೆಯುವ ಕಲೆ ಚೆನ್ನಾಗಿ ಸಾಧಿಸಿರುವುದೆಂದು ಹೇಳುವಂತಾಗಿದೆ. ಕಟ್ಟು-ಚಿತ್ರ-ಮುದ್ರಣಾದಿಗಳಿಂದ ಗ್ರಂಥದ ಬಾಹ್ಯಾಂಗವು ಕೂಡ ಮೋಹಕವಾಗಿದೆ.

ಧಾರವಾಡ,
ತಾ. ೫-೩-೧೯೩೧

ಆಲೂರ ವೆಂಕಟರಾಯರು.

# ಕರ್ನಾಟಕ ಹಿತೈಷಿಣೀ ಗ್ರಂಥಮಾಲೆ-ಸಚಿತ್ರ



ಉದಾತ್ತವಾದ ನೈತಿಕ ತತ್ತ್ವಗಳನ್ನು ಸುಲಭವಾದ ಐತಿಹಾಸಿಕ ಮತ್ತು ಪೌರಾಣಿಕ ಕಥೆಗಳ ರೂಪದಿಂದ ಬರೆದು ಅಲ್ಲಲ್ಲಿಗೆ ಮನೋಹರವಾದ ಚಿತ್ರಗಳನ್ನು ಸೇರಿಸಿ ಪ್ರತಿವರ್ಷ ಎರಡು ಸರ್ವಾಂಗ ಸುಂದರವಾದ ಗ್ರಂಥಗಳನ್ನು ಪ್ರಕಟಿಸುವೆವು. ಮಾಲೆಯಲ್ಲಿ ಪ್ರಕಟವಾಗುವ ಎಲ್ಲ ಗ್ರಂಥಗಳನ್ನು ಕೊಂಡುಕೊಳ್ಳುವೆವೆಂದು ಒಪ್ಪಿಕೊಂಡು ಎಂಟಾಣೆ ಪ್ರವೇಶ ಫೀಯನ್ನು ಕೊಟ್ಟು ಹೆಸರು ರಜಿಸ್ಟರ ಮಾಡಿಸಿಕೊಂಡ ಕಾಯಂ ವರ್ಗಣೀದಾರರಿಗೆ ಎಲ್ಲ ಗ್ರಂಥಗಳನ್ನು ಕ್ಕೆ ಬೆಲೆಗೆ ಕೊಡುವೆವು. ಇಂದಿನ ವರೆಗೆ ಪ್ರಕಟಿಸಲ್ಪಟ್ಟ ಗ್ರಂಥಗಳು :—

| | | | | |
|---|---|---|---|---|
| ೧. | ಸಾವಿತ್ರೀ ಸತ್ಯವಾನ–೫ನೆಯ ಮುದ್ರಣ. ಪೌ. ಕಥೆ | ೦ | ೧೨ | ೦ |
| ೨. | ಪದ್ಮಿನಿ–೫ನೆಯ ಮುದ್ರಣ. ಐತಿಹಾಸಿಕ ಕಥೆ | ೦ | ೧೨ | ೦ |
| ೩. | ದಾಕ್ಷಾಯಣಿ–೩ನೆಯ ಮುದ್ರಣ. ಪೌ. ಕಥೆ | ೦ | ೮ | ೦ |
| ೪. | ಮಹಾರಾಣಿ ಲಕ್ಷ್ಮೀಬಾಯಿ–೩ನೆಯ ಮುದ್ರಣ ಐತಿಹಾಸಿಕ ಕಥೆ | ೧ | ೦ | ೦ |
| ೫. | ಪಾರ್ವತಿ ಪೌ. ಕಥೆ ೨ನೆಯ ಮುದ್ರಣ | ೦ | ೮ | ೦ |
| ೬. | ಕವಿತಾ ಕುಸುಮ ಮಂಜರಿ ಪ್ರಥಮ ಗುಚ್ಛ | ೦ | ೫ | ೦ |
| ೭. | ಕವಿತಾ ಕುಸುಮ ಮಂಜರಿ ದ್ವಿತೀಯ ಗುಚ್ಛ | ೦ | ೫ | ೦ |
| ೮. | ಸತ್ಕಥಾ ಕುಸುಮ ಮಂಜರಿ–(ಸ್ವಾಮಿ ರಾಮಕೃಷ್ಣ ಪರಮಹಂಸರ ಚಿಕ್ಕಕಥೆಗಳು). ಪ್ರಥಮ ಗುಚ್ಛ | ೦ | ೧೦ | ೦ |
| ೯. | ,, ,, ದ್ವಿತೀಯ ಗುಚ್ಛ | ೦ | ೪ | ೦ |
| ೧೦. | ,, ,, ತೃತೀಯ ಗುಚ್ಛ | ೦ | ೪ | ೦ |
| ೧೧. | ,, ,, ಚತುರ್ಥ ಗುಚ್ಛ | ೦ | ೧೦ | ೦ |
| ೧೨. | ಶ್ರೀಹರ್ಷನ ನಾಟಕಗಳು | ೦ | ೧೦ | ೦ |
| ೧೩. | ಶ್ರೀಮಂತ ನಾನಾಸಾಹೇಬ ಪೇಶವೆ | ೧ | ೦ | ೦ |
| ೧೪. | ಶ್ರೀಕೃಷ್ಣದೇವರಾಯ ವಿಜಯ | (ಅಚ್ಚಿನಲ್ಲಿದೆ) | | |

**ಪತ್ತೆ :—ವ್ಯವಸ್ಥಾಪಕ-ಶ್ರೀ ಸರಸ್ವತೀ ಮಂದಿರಮ್, ಧಾರವಾಡ.**



ಕನ್ನಡದ ಏಕೀಕರಣವೇ ನಮ್ಮ ಗುರಿ.